

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ
ಪಿಹೆಚ್.ಡಿ. ಅಧ್ಯಯನದ ಮಹಾಪ್ರಬಂಧ

# ಮುತ್ತತ್ತಿ : ಒಂದು ಸಾಂಸ್ಕೃತಿಕ ಅಧ್ಯಯನ

ಸಂಶೋಧನ ವಿದ್ಯಾರ್ಥಿ
ಮುತ್ತುರಾಜು

ಮಾರ್ಗದರ್ಶಕರು
ಪ್ರೊ. ಡಿ.ಲಿಂಗಯ್ಯ







ಎಂ.ವಿ.ಸೀ ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ
ಬೆಂಗಳೂರು
೨೦೦೯



ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ

ಪಿಹೆಚ್.ಡಿ. ಅಧ್ಯಯನದ ಮಹಾಪ್ರಬಂಧ

# ಮುತ್ತತ್ತಿ : ಒಂದು ಸಾಂಸ್ಕೃತಿಕ ಅಧ್ಯಯನ


ಸಂಶೋಧನ ವಿದ್ಯಾರ್ಥಿ

ಮುತ್ತುರಾಜು

ಮಾರ್ಗದರ್ಶಕರು

ಪ್ರೊ. ಡಿ.ಲಿಂಗಯ್ಯ





ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ

ಬೆಂಗಳೂರು

೨೦೦೯

# ಅಭ್ಯರ್ಥಿಯ ಪ್ರಮಾಣಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನಾ ಕೇಂದ್ರದ ಮೂಲಕ ೨೦೦೮-೨೦೦೯ನೇ ಸಾಲಿನ ಪಿಹೆಚ್.ಡಿ. ಪದವಿಗಾಗಿ **"ಮುತ್ತತ್ತಿ : ಒಂದು ಸಾಂಸ್ಕೃತಿಕ ಅಧ್ಯಯನ'** ಎಂಬ ಮಹಾಪ್ರಬಂಧವನ್ನು ಪ್ರೊ.ಡಿ.ಲಿಂಗಯ್ಯ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ಸಂಪ್ರಬಂಧ ನನ್ನ ಸ್ವಂತ ಬರವಣಿಗೆ ಆಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸಹಿ/

(ಮುತ್ತುರಾಜು)
ಸಂಶೋಧನ ವಿದ್ಯಾರ್ಥಿ

ದಿನಾಂಕ : 26-07-2009
ಸ್ಥಳ : ಬೆಂಗಳೂರು

# ಮಾರ್ಗದರ್ಶಕರ ಧೃಡೀಕರಣಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನಾ ಕೇಂದ್ರದ ಮೂಲಕ ೨೦೦೮-೨೦೦೯ನೇ ಸಾಲಿನ ಪಿಹೆಚ್.ಡಿ. ಪದವಿಗಾಗಿ **"ಮುತ್ತತ್ತಿ : ಒಂದು ಸಾಂಸ್ಕೃತಿಕ ಅಧ್ಯಯನ"** ಎಂಬ ಮಹಾಪ್ರಬಂಧವನ್ನು ಮುತ್ತುರಾಜು ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಸಂಪ್ರಬಂಧ ವಿದ್ಯಾರ್ಥಿಯ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ಧೃಡೀಕರಿಸುತ್ತೇನೆ.

ಸಹಿ

(ಪ್ರೊ.ಡಿ.ಲಿಂಗಯ್ಯ)
ಮಾರ್ಗದರ್ಶಕರು

ದಿನಾಂಕ : 26.07.2009
ಸ್ಥಳ : ಬೆಂಗಳೂರು

# ಮುತ್ತತ್ತಿ : ಒಂದು ಸಾಂಸ್ಕೃತಿಕ ಅಧ್ಯಯನ

ಪರಿವಿಡಿ ಪುಟ ಸಂಖ್ಯೆ

## ಪೀಠಿಕೆ

## ಅಧ್ಯಯನ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

### ೧) ಉದ್ದೇಶ :-

ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲ್ಲೂಕು ಹಲಗೂರು ಹೋಬಳಿಯಲ್ಲಿ ಬರುವ ಕಾವೇರಿ ನದಿಯ ದಂಡೆಯ ಮೇಲಿರುವ ಕಟ್ಟಕೊನೆಯ ಪುಟ್ಟ ಗ್ರಾಮವೇ ಮುತ್ತತ್ತಿಯಾಗಿದೆ. ಈ ಗ್ರಾಮವು ಮುತ್ತತ್ತಿರಾಯ ಎಂದು ಕರೆಸಿಕೊಳ್ಳುವ ಆಂಜನೇಯ, ಹನುಮಂತ, ಮಾರುತಿ, ಸಂಜೀವರಾಯ ಹಾಗೂ ಚಿರಂಜೀವಿ ಎಂದೇ ಖ್ಯಾತವಾಗಿರುವ ರಾಮಭಕ್ತನ ಪವಿತ್ರ ಸ್ಥಳವಾಗಿದೆ. ಕಾವೇರಿನದಿಯ ತಿರುವಿನ ದಂಡೆಯ ಮೇಲಿರುವ ಈ ಸ್ಥಳ ಭೌಗೋಳಿಕತೆಯಿಂದ ವಿಶಿಷ್ಟವಾಗಿದೆ. ಮೂರು ಬೆಟ್ಟಗಳ ನಡುವೆ ಈ ಸ್ಥಳವಿದ್ದು, ಮೂರು ಜಿಲ್ಲೆಗಳಾದ ರಾಮನಗರ, ಮಂಡ್ಯ ಮತ್ತು ಚಾಮರಾಜನಗರ ಜಿಲ್ಲೆಗಳ ಸರಹದ್ದಿನಲ್ಲಿ ಇದು ಬರುತ್ತದೆ. ಬಸವನಬೆಟ್ಟ ಅರಣ್ಯದ ಒಂದು ಭಾಗವಾಗಿರುವ ಇಲ್ಲಿ ಸುತ್ತಲೂ ಅಪಾರವಾದ ಸಸ್ಯಸಂಪತ್ತು, ಪ್ರಾಣಿಸಂಪತ್ತು ಮತ್ತು ಜಲಸಂಪತ್ತುನಿಂದ ಕೂಡಿದೆ. ಬೇಸಿಗೆಯನ್ನು ಹೊರೆತು ಪಡಿಸಿದರೆ ಹಿತಕರವಾದ ಹವಾಮಾನವು ಸಹ ಇಲ್ಲಿ ಪಶುಪಾಲನೆ ಹಾಗೂ ಮಾನವ ಸಂಸ್ಕೃತಿ ವಿಕಾಸಕ್ಕೆ ಪೂರಕವಾಗಿದೆ. ಪಶುಪಾಲನೆಯಿಂದಲೇ ಇಲ್ಲಿನ ಸಂಸ್ಕೃತಿ ಬೆಳವಣಿಗೆಯಾಗಿರುವುದಕ್ಕೆ ಶಾಸನ[೧] ಮತ್ತು ಐತಿಹ್ಯಗಳ[೨] ಆಧಾರಗಳು ಲಭ್ಯವಾಗಿವೆ.

ಬಸವನಬೆಟ್ಟ ಅರಣ್ಯವು ಕಾಯ್ದಿಟ್ಟ ವನ್ಯವಲಯವಾಗಿದ್ದು ಮಂಡ್ಯ ಮತ್ತು ರಾಮನಗರ ಜಿಲ್ಲೆಗಳಲ್ಲಿ ಹರಡಿಕೊಂಡಿದೆ. ಎತ್ತರವಾದ ಗಿರಿಶಿಖರಗಳಿಂದ ಆಳವಾದ ಕಂದರಗಳಿಂದ ಕೂಡಿದ್ದು ಅಲ್ಲಲ್ಲಿ ಬೆಟ್ಟಗಳಿಂದ ನೀರಿನ ಝರಿಗಳನ್ನು ಕಾಣಬಹುದಾಗಿದೆ. ಇಲ್ಲಿ ದೊರೆಯುವ ಶಿಲಾವರ್ಗವು ಉತ್ಕೃಷ್ಟವಾಗಿರುವ ಪೆನಿನ್ಸುಲಾರ್ ನೈಸ್ ಮತ್ತು ಕ್ಲೋಸ್‌ಪೇಟೆ ಗ್ರಾನೈಟುಗಳನ್ನು ಒಳಗೊಂಡಿವೆ. ಈ ಅರ್ಕಿಯನ್ ಕಲ್ಪದ ಶಿಲಾಸಮೂಹವು ಅನೇಕ ಲೋಹಗಳ ಅದಿರುಗಳು ಹಾಗೂ ಖನಿಜಗಳಿಂದ ಕೂಡಿದೆ.

ಈ ಅರಣ್ಯಪ್ರದೇಶದಲ್ಲಿ ಆನೆಗಳು, ಹುಲಿ, ಚಿರತೆ, ಕರಡಿ, ಕಾಡುಹಂದಿ, ಜಿಂಕೆ, ಮೊಲ, ಸಾರಂಗ, ಸೀಳುನಾಯಿ, ನರಿ, ತೋಳ ಮುಂತಾದ ಪ್ರಾಣಿಗಳೇ ಅಲ್ಲದೇ, ಕಾಡುಕೋಳಿಗಳಂತಹ

ಕುಕ್ಕುಟ ವರ್ಗಗಳು ವಿಫುಲವಾಗಿವೆ. ಮತ್ತಿ, ಆಲ, ಸಾಲ, ಬೇಲ, ಮುತ್ತಗ, ಶ್ರೀಗಂಧ, ತೇಗ, ಹುಣಸೆ, ಚುಜ್ಜಲಿಮರಗಳಂತಹ ಉತ್ಕೃಷ್ಟ ಮಟ್ಟದ ಸಸ್ಯಸಂಪತ್ತು ಇಲ್ಲಿ ಹರಡಿಕೊಂಡಿವೆ. ಇಲ್ಲಿನ ಮುಖ್ಯ ಜಲಸಂಪತ್ತೆಂದರೆ ಕಾವೇರಿ ನದಿಯೇ ಆಗಿದೆ. ಬೆಟ್ಟಗಳಿಂದ ಹರಿದು ಬರುವ ನಾನಾ ಝರಿಗಳು ಈ ನದಿಯನ್ನು ಸೇರಿಕೊಳ್ಳುತ್ತದೆ. ಮಳೆಕಾಲದಲ್ಲಿ ರಭಸವಾಗಿ ತುಂಬಿ ಹರಿಯುವ ಈ ನದಿ ಈ ಭಾಗದಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತದೆ. ಕೊಡಗು ಜಿಲ್ಲೆಯ ಮಡಿಕೇರಿ ತಾಲ್ಲೂಕಿನ ಭಾಗಮಂಡಲದಲ್ಲಿ ಜನಿಸಿ ತನ್ನ ಪ್ರಯಾಣವನ್ನು ಮುಂದುವರಿಸುತ್ತಾಳೆ[೩]"ಹಾಸನ, ಮೈಸೂರುಜಿಲ್ಲೆ ಹಾಗೂ ಮಂಡ್ಯಜಿಲ್ಲೆಯ ನಾನಾ ಭಾಗಗಳಲ್ಲಿ ಹರಿದು ತಮಿಳುನಾಡನ್ನು ಪ್ರವೇಶಿಸುವ ಮುನ್ನ ಮುತ್ತತ್ತಿಯ ಸರಹದ್ದಿನಲ್ಲಿ ಅಗಲವಾಗಿಯೂ, ವೈವಿಧ್ಯ ಪೂರ್ಣವಾಗಿಯು ಈ ನದಿಯು ಹರಿಯುತ್ತದೆ.

ಇಲ್ಲಿನ ಭೀಮೇಶ್ವರಿ ಬಳಿ ಮೀನುಗಳ ಮೋಜಿನ ಆಟಕ್ಕಾಗಿಯೇ ಕಾವೇರಿ ಫಿಶಿಂಗ್ ಕ್ಯಾಂಪ್ ಎಂಬುದನ್ನು ಹಾಕಲಾಗಿದ್ದು ದೇಶ, ವಿದೇಶಗಳಿಂದ ಪ್ರವಾಸಿಗರು ಬಂದು ಮೀನು ಹಿಡಿಯುವ ಮೋಜಿನ ಆಟದಲ್ಲಿ ಪಾಲ್ಗೊಳ್ಳುತ್ತಾರೆ. "ನದಿಯಲ್ಲಿ ಅಲ್ಲಲ್ಲಿ ಆಳವಾದ ಮಡುಗಳಿದ್ದು ಸುಳಿಗಳಿಂದ ಕೂಡಿವೆ. ಇಂತಹ ಒಂದು ತಿರುಗಣೆ ಮಡು ಎಂಬ ಸುಳಿಯ ಸುತ್ತಲೂ ಹುಟ್ಟಿಕೊಂಡಿರುವುದೇ ಮುತ್ತತ್ತಿಯ ಐತಿಹ್ಯವಾಗಿದೆ[೪]" ಮೇವು ಮತ್ತು ನೀರಿನ ಆಸರೆ ಇರುವುದರಿಂದ ನದಿಯ ದಡದಲ್ಲಿ ಹಲವಾರು ದನದ ದೊಡ್ಡಿಗಳು ನಿರ್ಮಾಣವಾಗಿವೆ. ಕಾವೇರಿನದಿ ತಿರುವಿನ ಬಳಿ ವಿಶಾಲವಾದ ಆಯಕಟ್ಟಿನ ಸ್ಥಳದಲ್ಲಿ ಬೆಟ್ಟಗಳ ಬುಡದಲ್ಲಿ ಮುತ್ತತ್ತಿ ಪ್ರದೇಶ ಸ್ಥಾನವನ್ನು ಪಡೆದುಕೊಂಡಿದೆ. ಬಹಳ ಹಿಂದೆ ನದಿಯ ನೆರೆ ಸಮಯದಲ್ಲಿ ಇಲ್ಲೆಲ್ಲಾ ಜಲಾವೃತವಾಗುತ್ತಿದ್ದುದ್ದನ್ನು ಬಲ್ಲವರು ಹೇಳುತ್ತಾರೆ. ಇಲ್ಲಿನ ಪ್ರಾಕೃತಿಕ ಸನ್ನಿವೇಶ ಅಪಾರ ಚೆಲುವನ್ನು ಹೊಂದಿದ್ದು, ಮಂಡ್ಯ ಜಿಲ್ಲೆಯ ಕಾಶ್ಮೀರವೆಂದು ಹೆಸರನ್ನು ಪಡೆದುಕೊಂಡಿದೆ. ಇಲ್ಲಿರುವ ದೇವಾಲಯಕ್ಕೆ ಭಕ್ತರ ಆಕರ್ಷಣೆಯಾದರೆ, ಶಾಲಾ ಮಕ್ಕಳಿಗೆ ಇಲ್ಲಿನ ಪ್ರಕೃತಿ ರಮಣೀಯತೆಯೇ ಆಕರ್ಷಣೆಯಾಗಿದೆ. ಬೆಂಗಳೂರು, ಮೈಸೂರು, ಮಂಡ್ಯದಂತಹ ನಗರ ಪ್ರದೇಶಗಳಿಂದ ಜನರು ಅಲ್ಪ ಬದಲಾವಣೆಗಾಗಿ ಪ್ರವಾಸಿಗಳಾಗಿ ಮುತ್ತತ್ತಿ ಕ್ಷೇತ್ರಕ್ಕೆ ಬರುತ್ತಾರೆ.

ಇಲ್ಲಿಗೆ ತಲುಪಲು ಮೂರು ಮಾರ್ಗಗಳು ಲಭ್ಯವಿದೆ. ರಾಮನಗರ ಜಿಲ್ಲೆಯ ಕನಕಪುರ ತಾಲ್ಲೂಕಿನಿಂದ ಸಾತನೂರು ಮಾರ್ಗವಾಗಿ ೨೩ ಕಿ.ಮೀ.ಪ್ರಯಾಣ ಮಾಡಿದರೆ ಮುತ್ತತ್ತಿ ದೊರೆಯುತ್ತದೆ. ಹೀಗೆ ಪ್ರಯಾಣಿಸುವಾಗ ಸಾತನೂರು, ಬೋಳೆಗೌಡನದೊಡ್ಡಿ, ಹಲಸೂರು,

ಕಾಡಹಳ್ಳಿ, ಭೂಹಳ್ಳಿ, ಸೋಮನಕೆರೆ, ಕೋಳ್‌ಕೋಟೆ, ಪಾದ್ದಾರೆ, ಹನುಮನಗುಂಡು ಸ್ಥಳಗಳು ಸಿಗುತ್ತದೆ. ಮಳವಳ್ಳಿ ತಾಲ್ಲೂಕಿನ ಹಲಗೂರುವಿನಿಂದ ಕ್ರಮಿಸಿದರೆ ಚಿಕ್ಕಎಲಚಗೆರೆ, ದೊಡ್ಡ ಎಲಚಗೆರೆ, ಬ್ಯಾಡರಹಳ್ಳಿ, ಕರ್ಲಾಕಟ್ಟೆ, ಕೃಷ್ಣೇಗೌಡನದೊಡ್ಡಿ, ಲಂಬಾಣಿಹೊಸದೊಡ್ಡಿ, ತಾಳವಾಡಿ, ದಾಳನಕಟ್ಟೆ, ಸೋಲಿಗರದೊಡ್ಡಿ, ಬಸವೇಗೌಡನದೊಡ್ಡಿ, ಭೀಮೇಶ್ವರಿ ಹಾಗೂ ತಿರುಗಣೆ ಮಡುವು ದೊರೆಯುತ್ತವೆ. ಈ ಎರಡೂ ರಸ್ತೆಗಳಿಂದಲೂ ಸಾರಿಗೆ ವ್ಯವಸ್ಥೆಯಿದ್ದು, ಉತ್ತಮ ರಸ್ತೆಗಳಿವೆ. ಈ ಎಲ್ಲ ಗ್ರಾಮಗಳ ಮಾನವ ಚಟುವಟಿಕೆಯು ಮುತ್ತತ್ತಿ ಸಾಂಸ್ಕೃತಿಕ ಬೆಳವಣಿಗೆಯಲ್ಲಿ ಪ್ರಧಾನಪಾತ್ರ ಪಡೆದುಕೊಂಡಿದೆ ಎಂಬುದು ಗಮನಾರ್ಹ ಅಂಶವಾಗಿದೆ. ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲ್ಲೂಕಿನ ಚಿಕ್ಕಲ್ಲೂರು, ತೆಳ್ಳೂರುಗಳ ಮಾರ್ಗವಾಗಿ ಕಾಲುದಾರಿ ರಸ್ತೆಯಿದ್ದು, ಕಾವೇರಿ ನದಿ ದಾಟಿ ಇಲ್ಲಿಗೆ ತಲುಪಬೇಕಾಗುತ್ತದೆ. ಈ ಮಾರ್ಗವಾಗಿ ತಮಿಳುನಾಡಿನಿಂದ ಅಪಾರಸಂಖ್ಯೆಯ ಭಕ್ತಾದಿಗಳು ಸಹ ಭೇಟಿ ನೀಡುವುದು ಮಹತ್ವದಾಗಿದೆ. ಚಲನಚಿತ್ರನಟ ಡಾ.ರಾಜಕುಮಾರರವರು ಇದೇ ದೇವರ ವರದಿಂದ ಜನಿಸಿದವರಾದ್ದರಿಂದ ಈ ಪ್ರದೇಶಕ್ಕೆ ಮತ್ತಷ್ಟು ಪ್ರಸಿದ್ಧಿ ಬಂದಿದೆ.

ಅಪಾರ ಸಾಂಸ್ಕೃತಿಕ ಮಹತ್ವವನ್ನು ಒಳಗೊಂಡಿರುವ ಮುತ್ತತ್ತಿಯ ಸಾಂಸ್ಕೃತಿಕ ಅಧ್ಯಯನವು ಈ ಮಹಾಪ್ರಬಂಧದ ಉದ್ದೇಶವಾಗಿದೆ. ಇಲ್ಲಿನ ಪ್ರಧಾನ ಆಕರ್ಷಣೆ ಮುತ್ತತ್ತಿರಾಯ ಎಂದು ಕರೆಸಿಕೊಳ್ಳುವ ಆಂಜನೇಯನೇ ಆಗಿದ್ದರೂ, ಇಲ್ಲಿ ಮಾನವ ತನ್ನ ಬದುಕಿನ ಹಲವು ಪ್ರಕಾರದ ಚಟುವಟಿಕೆಗಳಿಂದ ಕಟ್ಟಿರುವ ಸಾಂಸ್ಕೃತಿಕತೆ ಅನನ್ಯವಾದುದು. ಭಾರತದೇಶದ ಜಾನಪದ ಅಧ್ಯಯನದಲ್ಲಿ ಕರ್ನಾಟಕ ಜಾನಪದ ಅಧ್ಯಯನವು ಮುಂಚೂಣಿಯಲ್ಲಿದೆ ಎಂದರೆ ತಪ್ಪಾಗಲಾರದು. ಐರೋಪ್ಯರು ರೂಪಿಸಿದ ಕ್ರಮಬದ್ಧ ಅಧ್ಯಯನದ ಮಾರ್ಗದಲ್ಲಿ ದೇಸಿಯ ಸೊಗಡನ್ನೇ ಮೈಗೂಡಿಸಿಕೊಂಡಿರುವ ಕರ್ನಾಟಕ ಜಾನಪದ ವಿದ್ವಾಂಸರ ಪ್ರತಿಭೆ ಅಧ್ಯಯನಶೀಲತೆ ಪ್ರಶಂಸನಾರ್ಹವಾಗಿದೆ. ಈ ನಿಟ್ಟಿನಲ್ಲಿ ಹಲವಾರು ಜಾನಪದ ವಿಷಯಗಳು ಬೆಳಕಿಗೆ ಬಂದಿವೆ.

೨)ಸ್ವರೂಪ :-

ಇಂದಿನ ಜಾನಪದ ಅಧ್ಯಯನ ಇಡೀಯಾಗಿ ಮಾತ್ರವೇ ನಡೆಯದೆ ಬಿಡಿಯಾದ ಊರು, ಗ್ರಾಮ ಇಲ್ಲವೆ ಹಳ್ಳಿಗಳನ್ನು ಕುರಿತು ನಡೆಯುತ್ತಿದ್ದು ಈ ಮೂಲಕ ಸೂಕ್ಷ್ಮಸಂವೇದನ ಅಂಶಗಳು ಸಹ ಜಾನಪದ ಅಧ್ಯಯನದ ವ್ಯಾಪ್ತಿಯಲ್ಲಿ ಒಳಪಟ್ಟು ಮಹತ್ವದ ಅಂಶಗಳು ಬೆಳಕಿಗೆ ಬರುವಂತಾಗಿದೆ. ಈ ಮಾರ್ಗದಲ್ಲಿ ಹಲವಾರು ಪಿಹೆಚ್.ಡಿ ಪ್ರಬಂಧಗಳು ಹೊರಬಂದಿದೆ. ಈ ವರೆಗೆ ಅಜ್ಞಾತವಾಗಿ, ಅಪ್ರಕಟವಾಗಿ ಉಳಿದಿರುವ ಮುತ್ತತ್ತಿಯ ಸಾಂಸ್ಕೃತಿಕ ಹಿರಿಮೆಯನ್ನು ಅನಾವರಣಮಾಡುವುದು ಈ ಮಹಾಪ್ರಬಂಧದ ಪ್ರಧಾನ ಸ್ವರೂಪವಾಗಿದೆ. ಈ ಗ್ರಾಮದಲ್ಲಿ ಪ್ರಾಗೈತಿಹಾಸಿಕತೆಯಿಂದ ಹಿಡಿದು ಆಧುನಿಕತೆಯವರೆಗಿನ ಸಂವಾಹನೆಯನ್ನು ಹೊರಚೆಲ್ಲುವುದು ಸಂಕೀರ್ಣವು, ಜಟಿಲವು ಆದುದ್ದಾಗಿದೆಯಾದರೂ ಸಂಶೋಧನೆಯಲ್ಲಿ ತೊಡಗಿಸಿಕೊಂಡಿರುವ ನನ್ನ ಕರ್ತವ್ಯವು, ಹೊಣೆಗಾರಿಕೆಯು ಆಗಿದೆ.

ಹಳ್ಳಿಗಳು ಮಾನವಿಕ ವಿಜ್ಞಾನಿಗಳನ್ನು ವಿಶೇಷವಾಗಿ ಆಕರ್ಷಿಸುವ ಅಧ್ಯಯನದ ವಸ್ತುವಾಗಿವೆ. ವಿಶೇಷವಾಗಿ ಭಾರತೀಯ ಹಳ್ಳಿಗಳಿಗಂತೂ ಸಂಸ್ಕೃತಿ ಅಧ್ಯಯನದಲ್ಲಿ ಒಂದು ವಿಶಿಷ್ಟಮೌಲ್ಯವಿದೆ. ಇವು ಪ್ರಾಂತೀಯ ಪರಂಪರೆ-ಆಧುನಿಕ ವಿಜ್ಞಾನದ ತಾಕಲಾಟ ಈ ಎರಡರ ಪ್ರಭಾವವನ್ನು ಮೈಗೂಡಿಸಿಕೊಂಡಥವು. ಇಂತಹ ವಿಶಿಷ್ಟ ಸ್ಥಿತಿ ಅಮೇರಿಕಾದಂತಹ ಮುಂದುವರೆದ ರಾಷ್ಟ್ರಗಳ ಹಳ್ಳಿಗಳಿಗೆ ಇರಲಾರದು. ಹೀಗಾಗಿ ಅಲ್ಲಿನ ಅಧ್ಯಯನಕಾರರು ಭಾರತದಂತಹ ದೇಶಗಳ ಹಳ್ಳಿಗಳತ್ತ ವಿಶೇಷ ಆಕರ್ಷಿತರಾಗಿದ್ದಾರೆ. ಇದನ್ನು ಡಾ.ಈಶ್ವರನ್ ಅವರ ಮಾತುಗಳಲ್ಲಿ ಹೇಳುವುದಾದರೆ- "ಎರಡು ಕಾರಣಗಳಿಂದ ಈಗ ಶಾಸ್ತ್ರೋಕ್ತವಾಗಿ (ಭಾರತದ ಹಳ್ಳಿಗಳನ್ನು) ಅಭ್ಯಸಿಸುವ ಅಗತ್ಯವಿದೆ. ಪ್ರಥಮ ಹಾಗೂ ಮುಖ್ಯಕಾರಣವೆಂದರೆ - ಭಾರತದ ಹಳ್ಳಿಗಳು ಈ ನಾಡಿನ ಪ್ರಾಚೀನ ಸಂಸ್ಕೃತಿಯನ್ನು, ಈ ಸಂಸ್ಕೃತಿಯಲ್ಲಿ ಅಡಕವಾಗಿರುವ ಅಪೂರ್ವ ಮೌಲ್ಯಗಳನ್ನು ಕಾಲಪುರುಷನ ಕ್ರೂರದಬ್ಬಾಳಿಕೆಯಿಂದ ರಕ್ಷಿಸಿಕೊಂಡು ಬಂದಿದೆ. ಈ ಸಾಂಸ್ಕೃತಿಕ ಸಂಪತ್ತನ್ನು ಕಂಡು ಇಂದು ಔದ್ಯೋಗಿಕ ದೃಷ್ಟಿಯಿಂದ ಮುಂದುವರೆದಿರುವ ಪಶ್ಚಿಮ ಜಗತ್ತಿನ ಜನತೆಯು ಆಶ್ಚರ್ಯಪಟ್ಟಿದೆ"(ಈಶ್ವರನ್,೧೯೭೨: xxii) ಹೀಗಿರುವಾಗ ನಾವು ಈ ವಿಶೇಷ ಅವಕಾಶಗಳನ್ನು ಬಳಸಿಕೊಂಡು ನಮ್ಮ "ಜಾನಪದ ಅಧ್ಯಯನವನ್ನು ಇನ್ನಷ್ಟು ಸ್ವೋಪಜ್ಞಗೊಳಿಸಿಕೊಳ್ಳುವ ಸಾಧ್ಯತೆಯಿದೆ, ಇನ್ನಷ್ಟು ಗಟ್ಟಿಗೊಳಿಸಿ ಕೊಳ್ಳುವ ವಿಸ್ತರಿಸಿಕೊಳ್ಳುವ ಪ್ರಯತ್ನಮಾಡಬೇಕಾಗಿದೆ" ಒಂದು

ಗ್ರಾಮದ ಅಧ್ಯಯನ ಸ್ಥಳೀಯ, ನೆಲೆ ಹಾಗೂ ಸಾರ್ವತ್ರಿಕ ನೆಲೆ-ಎರಡರಲ್ಲೂ ಮುಖ್ಯವಾಗುತ್ತದೆ. ಅದರ ಇತಿಹಾಸ, ಐತಿಹ್ಯಗಳು ಸ್ಥಳೀಯ ಮಹತ್ವ ಪಡೆದರೆ ಅದರ ಆಚರಣೆ, ನಂಬಿಕೆ, ಸಂಪ್ರದಾಯಗಳಲ್ಲಿನ ಆಶಯಗಳು ಸಾರ್ವತ್ರಿಕ ಪ್ರಾಮುಖ್ಯತೆ ಪಡೆದು ತೌಲನಿಕ ಅಧ್ಯಯನಕ್ಕೆ ನೆರವಾಗುತ್ತದೆ.

೩)ವ್ಯಾಪ್ತಿ :-

ಅಧ್ಯಯನಕಾರರು ಒಂದು ಊರಿನ ಜಾನಪದ ಎಂದಾಗ ಆ ಊರಿನ ಜನಪದ ಸಾಹಿತ್ಯ, ಕಲೆ, ಸಂಪ್ರದಾಯಗಳಿಗಷ್ಟೇ ತಮ್ಮ ಗಮನವನ್ನು ಕೇಂದ್ರೀಕರಿಸದೆ ಅಧ್ಯಯನಕ್ಕೆ ಪೂರಕವಾಗಿ ಆ ಊರಿನ ಭೌಗೋಳಿಕ, ನೈಸರ್ಗಿಕ ವಿವರಗಳು, ಸಾಮಾಜಿಕ, ಆರ್ಥಿಕ ವ್ಯವಸ್ಥೆಗಳು, ಜಾತಿ, ಕುಟುಂಬಪದ್ಧತಿ ಮೊದಲಾದ ಅಂಶಗಳನ್ನು ಅವಶ್ಯ ಅಧ್ಯಯನ ಮಾಡುವುದು ತೀರಾ ಅಗತ್ಯವಿದೆ[೬]

"ಇದೆಲ್ಲಾ ಸುಲಭ ಸಾಧ್ಯವಾಗಬೇಕಾದರೆ, ಅಧ್ಯಯನಕಾರರಿಗೆ ಪ್ರಾದೇಶಿಕ ಇತಿಹಾಸದ ಅರಿವು, ಶಾಸನಶಾಸ್ತ್ರದ ಪರಿಚಯ, ಸರ್ವೇ ಇಲಾಖೆಯಲ್ಲಿ ದೊರೆಯುವ ನಕಾಶೆಗಳು, ಗಿಡಪತ್ರಿಕೆ, ಪಾಣಿಸೂಡು, ಮಠ-ಮಾನ್ಯಗಳಲ್ಲಿ ಕಡತ, ಹಳೇ ವ್ಯವಹಾರ ಪತ್ರಗಳು ಮೊದಲಾದವನ್ನು ಅಧ್ಯಯನ ಮಾಡಲು ಅಗತ್ಯವಾದ ಭಾಷಜ್ಞಾನವನ್ನು , ಮೋಡಿಅಕ್ಷರಗಳ ಪರಿಚಯ ಇದ್ದರೆ ಇನ್ನೂ ಒಳ್ಳೆಯದು. ಊರಿನ ಪ್ರಾಚೀನತೆ ಬಗ್ಗೆ ಇನ್ನೇನೂ ಲಿಖಿತ ದಾಖಲೆ ಸಿಗದಾಗಿ ಊರಿನ ಗುಡಿ-ಗೋಪುರ ಇಲ್ಲವೇ ಮನೆ ಮಾದರಿಗಳ ಮೂಲಕವು ಕಾಲದ ಅಂದಾಜು ಮಾಡಬಹುದು[೭]" ಶ್ರೀ ಗೋವಿಂದರಾಜುರವರ ಮೇಲಿನ ಉಲ್ಲೇಖಿತ ನುಡಿಗಳಂತೆ ಮುತ್ತತ್ತಿಯ ಸಾಂಸ್ಕೃತಿಕ ಅಧ್ಯಯನದ ಅಗತ್ಯ ಅತ್ಯಂತ ಜರೂರಾಗಿ ಆಗಬೇಕಾಗಿದೆ. ಜಾಗತೀಕರಣದ ದಾಳಿಯಿಂದಾಗಿ ಮುತ್ತತ್ತಿಯಲ್ಲಿ ಪರಿವರ್ತನೆ ಎಂಬುದು ನಗರ ಬೆಳವಣಿಗೆಯ ಕ್ರಮವನ್ನು ಅನುಸರಿಸುತ್ತಿರುವುದರಿಂದ ಹತ್ತು ಹಲವು ಅಂಶಗಳು ಮರೆಯಾಗುತ್ತಿರುವುದು ಈ ದಿಶೆಯಲ್ಲಿ ಕೆಲಸ ಮಾಡುತ್ತಿರುವ ನನ್ನ ಗಮನಕ್ಕೆ ಬಂದಿದೆ.

ಈ ಅಂಶಗಳಿಗೆ ಪೂರಕವಾಗಿ "ಇತ್ತೀಚೆಗೆ ಜನಪ್ರಿಯವಾಗುತ್ತಿರುವ ಅಧ್ಯಯನ ಕ್ರಮವಿದು ಸಾಮಾನ್ಯವಾಗಿ ಇಂದು ನಡೆಯುತ್ತಿರುವ ಜಾಗತೀಕರಣ ಪ್ರಕ್ರಿಯೆಗೆ ವಿರುದ್ಧವಾಗಿ ಪ್ರಾದೇಶಿಕ ಅಧ್ಯಯನಗಳನ್ನು ನಿಲ್ಲಿಸಲಾಗುತ್ತಿದೆ. ಭೌತಿಕ ಸಾರಿಗೆ ಸಂಪರ್ಕಗಳು, ಮಾಧ್ಯಮಗಳು, ಬಹುರಾಷ್ಟ್ರೀಯ

ಸಂಸ್ಥೆಗಳೆಲ್ಲ ಜಗತ್ತಿನ ಬೇರೆ ಬೇರೆ ಖಂಡಗಳನ್ನು ಹತ್ತಿರ ಹತ್ತಿರ ತರುತ್ತಿವೆ. ಇಂಥ ಸಂದರ್ಭದಲ್ಲಿ ಪ್ರಾದೇಶಿಕ ಅಧ್ಯಯನಗಳು ಜಾಗತೀಕರಣಕ್ಕೆ ಪರ್ಯಾಯವಾಗಿ ನಿರ್ದಿಷ್ಟ ಪ್ರದೇಶವೊಂದರ ಸಾಂಸ್ಕೃತಿಕ ಅನನ್ಯತೆಯನ್ನು ಸ್ಥಾಪಿಸುತ್ತಿವೆ ಮತ್ತು ಸಂಸ್ಕೃತಿಯೊಂದರ ಸೂಕ್ಷ್ಮ ವಿಶ್ಲೇಷಣೆಗೆ ಬದ್ಧವಾಗುತ್ತ ಸ್ಥೂಲ ವಿಶ್ಲೇಷಣೆಯನ್ನು ನಿರಾಕರಿಸುತ್ತವೆ. ಆಧುನೀಕೋತ್ತರ ಅಧ್ಯಯನ ವಿಧಾನಗಳು ಪ್ರಾದೇಶಿಕತೆಯನ್ನು ಬಲವಾಗಿ ಸಮರ್ಥಿಸುತ್ತವೆ. ಹೆಸರೇ ಸ್ಪಷ್ಟಪಡಿಸುವಂತೆ, ನಿರ್ದಿಷ್ಟ ಪ್ರದೇಶವೊಂದರ ಅನನ್ಯತೆಯ ಹುಡುಕಾಟವೇ ಪ್ರಾದೇಶಿಕ ಅಧ್ಯಯನದ ಮುಖ್ಯ ಗುರಿಯಾಗುತ್ತದೆ. ಇದಕ್ಕಾಗಿ ಕನಿಷ್ಠ ನಾಲ್ಕು ಪ್ರಶ್ನೆಗಳನ್ನು ಕೇಳಿಕೊಳ್ಳಬೇಕಾಗುತ್ತದೆ. ಅವುಗಳೆಂದರೆ :-

೧. ನಿರ್ದಿಷ್ಟವಾದ ಭೌಗೋಳಿಕ ಪ್ರದೇಶವೊಂದನ್ನು ಆಯ್ದುಕೊಂಡು ಆ ಪ್ರದೇಶವು ಇತರ ಭೌಗೋಳಿಕ ಪ್ರದೇಶಗಳಿಂದ ಹೇಗೆ ಭಿನ್ನವಾಗಿದೆ ಮತ್ತು ಈ ಭಿನ್ನತೆಯನ್ನು ಹೇಗೆ ಗುರುತಿಸಬಹುದು? ಎಂದು ಖಚಿತಪಡಿಸಿಕೊಳ್ಳುವುದು

೨. ಆನಿರ್ದಿಷ್ಟ ಪ್ರದೇಶಕ್ಕೆ ಬದ್ಧವಾದ ಸಂವಹನ ರೀತಿಗಳಿವೆಯೇ? ಇದ್ದರೆ ಅವು ಯಾವುವು? ಮತ್ತು ಅವು ಇತರೆಡೆಯ ಸಂವಹನ ಮಾಧ್ಯಮಗಳಿಗಿಂತ ಹೇಗೆ ಭಿನ್ನವಾಗಿದೆ? ಎಂಬುದನ್ನು ಸ್ಪಷ್ಟ ಪಡಿಸಿಕೊಳ್ಳುವುದು.

೩. ಆ ಪ್ರದೇಶಕ್ಕೆ ಸೀಮಿತವಾದ ವಿಶಿಷ್ಟವಾದ ಅಂಶವೊಂದನ್ನು ಗುರುತಿಸಲು ಸಾಧ್ಯವೇ? ಈ ವಿಶಿಷ್ಟ ಅಂಶವು ನಿರ್ದಿಷ್ಟ ಪ್ರದೇಶದಿಂದ ದೂರಕ್ಕೆ ಸರಿದಂತೆ ಕಣ್ಮರೆಯಾಗುತ್ತಾ ಹೋಗುವುದೇ ಎಂಬುದನ್ನು ಉದಾಹರಣೆಯಾಗಿ ವಿವರಸಿಕೊಳ್ಳುವುದು.

೪. ಆ ಪ್ರದೇಶದ ಭಿನ್ನತೆಯನ್ನು ಪ್ರಕಟಪಡಿಸುವ ಭೌಗೋಳಿಕ ಗಡಿಗಳಿವೆಯೇ? ಈ ಗಡಿಯ ಹೊರ ವಲಯದ ವಿವರಗಳು, ಒಳವಲಯದ ವಿವರಗಳಿಗಿಂತ ಬೇರೆ ಆಗಿದೆಯೇ? ಎಂಬುದಕ್ಕೆ ಸೂಕ್ತವಾದ ಪುರಾವೆಗಳನ್ನು ಒದಗಿಸಿಕೊಳ್ಳುವುದು[೬]" ಮುತ್ತತ್ತಿಯ ಸಾಂಸ್ಕೃತಿಕ ಅಧ್ಯಯನದ ಸಂದರ್ಭದಲ್ಲಿ ಮೇಲಿನ ವಾಕ್ಯಗಳು ಉಚಿತವಾಗಿ ಸರಿಹೊಂದುತ್ತವೆಯಾದುದರಿಂದ ಅವಶ್ಯಕವಾಗಿ ಬದಲಾಗುತ್ತಿರುವ ಈ ಕಾಲಕ್ರಮದಲ್ಲಿ ದಾಖಲಿಸುವ ಅವಶ್ಯಕತೆ ತ್ವರಿತವಾಗಿ ಆಗಬೇಕಾಗಿದೆ.

"ಇತಿಹಾಸ ಪ್ರಜ್ಞೆಯ ಅಭಾವದ ಮೂಲಕ ನಾಗರಿಕ ಜೀವನದ ಇತಿಹಾಸ ಸಂಸ್ಕೃತಿಗಳ ವಿವರಗಳೂ ನಮಗೆ ವಾಸ್ತವವಾಗಿ ದೊರೆಯುವುದಿಲ್ಲವೆಂದ ಮೇಲೆ ಜಾನಪದ ಸಾಂಸ್ಕೃತಿಕ ಸಾಮಾಜಿಕ ಜೀವನದ ಇತಿಹಾಸವು ನಮಗೆ ಎಲ್ಲಿ ದೊರೆಯಬೇಕು? ಹೇಗೆ ದೊರೆಯಬೇಕು?[೯]"
"ಡಾ.ಬೆಟಗೇರಿ ಕೃಷ್ಣಶರ್ಮಅವರ ಈ ಪ್ರಶ್ನೆಯೊಂದಿಗೆ ಪ್ರಸ್ತುತ ವಿವೇಚನೆಯ ಕೆಲಸವನ್ನು ಕೈಗೊಳ್ಳಬಹುದು. ಡಾ.ಬೆಟಗೇರಿ ಕೃಷ್ಣಶರ್ಮ ಅವರು ತಮ್ಮ ಪ್ರಶ್ನೆಗೆ ತಾವೇ ಉತ್ತರವನ್ನು ಸಹ ನೀಡಿರುವರೆಂಬುದನ್ನು ಇಲ್ಲಿ ಗಮನಿಸಬೇಕು. ಅವರು ಹೇಳುವಂತೆ ನಾಗರೀಕ ಲೋಕದ ಇತಿಹಾಸ ಸಂಸ್ಕೃತಿಗಳನ್ನು ಅವರ ಲಿಖಿತ ವಾಙ್ಮಯದ ಮೂಲಕ ವಾಸ್ತವ ದೃಷ್ಟಿಯ ಸಂಶೋಧಕರು, ಅಲ್ಪ-ಸ್ವಲ್ಪ ಸತ್ಯೇತಿಹಾಸದ ಸಂಗತಿಗಳನ್ನು ಕಂಡು ಹಿಡಿಯಬಹುದು. ಅದಕ್ಕೆ ಅನೇಕ ಬಗೆಯ ಸಾಧನೆ ಸಲಕರಣೆಗಳು ಇವೆ. ಆದರೆ ಅವೆಲ್ಲವುಗಳಿಗೆ ಮಾಂಡಲಿಕಮನ್ನೆಯರಿಗೆ ಸಂಬಂಧಿಸಿದ ಸತ್ಯೇತಿಹಾಸದ ಸಂಶೋಧನ ಕಾರ್ಯಕ್ಕೆ ಸಹಕಾರಿಯಾಗಬಹುದಷ್ಟೇ.

ಸಾಮಾನ್ಯ ಜನಜೀವನ ಎಂದರೆ ಜಾನಪದರ ನಡೆವಳಿ, ನುಡಿವಳಿಗಳ ನೈಜ ಚಿತ್ರಣವು ಅವುಗಳಲ್ಲಿ ಸಿಕ್ಕಲಾರದು. ಇದಕ್ಕಾಗಿ ನಾವು ನಮ್ಮ ಜಾನಪದ ಸಾಹಿತ್ಯಕ್ಕೆ ಶರಣು ಹೋಗಬೇಕಾಗುವುದು. ಅವರ ಐಹಿಕ ಜೀವನದ ರೀತಿನೀತಿಗಳು ವೈಯಕ್ತಿಕ ಆಸೆ-ಅಭಿರುಚಿಗಳು, ಸಾಮಾಜಿಕ ಕಟ್ಟು-ಕಟ್ಟಳೆಗಳು ಜೀವನ ಸೌಂದರ್ಯದ ಸಾಧನೆಗಳು, ಪ್ರಾದೇಶಿಕ ನೈಸರ್ಗಿಕ ಪರಿಸರಕ್ಕೆ ಸರಿಯಾಗಿ ನಡವಳಿಯಲ್ಲಿ ಮಾಡಿಕೊಂಡ ಮಾರ್ಪಾಡುಗಳು ಕೆಲವೊಂದು ಮಹತ್ವದ ವ್ಯಕ್ತಿಗಳ ಗುಣವರ್ಣನೆಗಳು ಇವೆಲ್ಲವೂ ನಮ್ಮ ಜಾನಪದ ಸಾಹಿತ್ಯದಲ್ಲಿ ಸಂಶೋಧಕ ದೃಷ್ಟಿಯವರಿಗೆ ಖಂಡಿತವಾಗಿ ದೊರೆಯುವುವು[೧೦]"

ಈ ಮೇಲಿನ ಎಲ್ಲಾ ವಿದ್ವಾಂಸರ ಅಭಿಪ್ರಾಯಗಳನ್ನು ಪರಿಗಣಿಸಿದಾಗ ವಸ್ತುನಿಷ್ಠವಾದ ಶಾಸ್ತ್ರೀಯವಾದ ಅಧ್ಯಯನದ ಅಗತ್ಯ ಮುತ್ತತ್ತಿಯ ಸಾಂಸ್ಕೃತಿಕ ಅಧ್ಯಯನಕ್ಕೆ ಇದೆ, ಎಂಬುದು ವ್ಯಕ್ತವಾಗುತ್ತದೆ. ಮುತ್ತತ್ತಿ ಎಂಬುದು ಇಂದು ಸ್ಥಳವಾಚಿ ಶಬ್ದವಾಗಿದ್ದು ಅದನ್ನು ವಸ್ತುವಾಚಿಯಾಗಿ ಸಮೀಕರಿಸಿದ್ದಾರೆ. ಗ್ರಾಮೀಣ ಜನತೆಯ ಅತಿನಂಬಿಕೆ, ಶ್ರದ್ಧೆ, ಭಕ್ತಿ, ನಿಷ್ಠೆಗಳಿಂದ ಹೀಗಾಗುವುದು ಸಾಧ್ಯವಿದೆ. ಆದರೂ ಕರ್ನಾಟಕದ ಇತರ ಕಡೆಗಳಲ್ಲಿ ಮುತ್ತತ್ತಿ ಗ್ರಾಮನಾಮದ ಉಲ್ಲೇಖಗಳಿವೆ. ಪ್ರಾಚೀನಕಾಲದ ಶಾಸನಗಳಲ್ಲಿ ಒಂದಾದ ತಿ.ನರಸಿಪುರ ತಾಲ್ಲೂಕಿನ ೩೯ನೇ ಶಾಸನದಲ್ಲಿ "[ಮು]ತ್ತತ್ತಿಯಂ ನಾಗಕುಮಾರಯ್ಯಂಗೆ ಕೊಟ್ಟ[೧೧]" ಎಂದಿದೆ. ಅಲ್ಲದೆ "ಹಾಸನ ಜಿಲ್ಲೆಯ ಕಸಬಾ

ತಾಲ್ಲೂಕಿನ ಶಿಲಾಶಾಸನಗಳಲ್ಲಿಯೂ ತಾಮ್ರಶಾಸನಗಳಲ್ಲಿಯೂ ಮುತ್ತತ್ತಿ ಎಂಬ ಉಲ್ಲೇಖವಿದೆ[೧೨]" ಚಿಕ್ಕಮುತ್ತತ್ತಿ ಎಂಬ ಸ್ಥಳವು ಮಂಡ್ಯಜಿಲ್ಲೆ ಮಳವಳ್ಳಿ ತಾಲ್ಲೂಕಿನ ಶಿಂಷಾದ ಬಳಿ ಇದೆ. ಕಾವೇರಿ ನದಿಯ ದಡದಲ್ಲಿ ಆಂಜನೇಯ ದೇವಾಲಯವನ್ನು ಹೊಂದಿದೆ. ಮಳವಳ್ಳಿ ತಾಲ್ಲೂಕಿನ ಮುತ್ತತ್ತಿ ಪ್ರಸಿದ್ಧಿಗೆ ಬಂದ ಮೇಲೆ ಇದು ತನ್ನ ಅಸ್ತಿತ್ವವನ್ನು ಪಡೆದುಕೊಂಡಿದೆ. "ಕರ್ನಾಟಕಾದ್ಯಂತ 'ಮುತ್ತ' ಎಂಬ ಶಬ್ದದಿಂದ ಆರಂಭವಾಗುವ ೮೯ ಗ್ರಾಮನಾಮಗಳು ದೊರೆಯುತ್ತವೆ" ತಾಲ್ಲೂಕುವಾರು ಗ್ರಾಮಗಳನ್ನು ಅನುಬಂಧ ಮೂರರಲ್ಲಿ ನೋಡಿ.

**ಅ) ಸ್ಥಳನಾಮವಾಗಿ :–**

ಇವುಗಳಲ್ಲಿ ಸಸ್ಯವಾಚಿ ಪದಗಳದೇ ಸಿಂಹಪಾಲು ದ್ರಾವಿಡ ಅದರಲ್ಲೂ ಕನ್ನಡ ಪದವಾದ "ಮುಳ್ತಗ, ಮುತ್ತಗ[೧೩]" ಪದಗಮನಾರ್ಹ ಕ್ರಿ.ಶ.೧೦ನೇ ಶತಮಾನದ ಗಂಗರ ಶಾಸನವೊಂದರಲ್ಲಿ "ಮುಳ್ತಗೆ" ಎಂಬ ಸ್ಥಳದ ಉಲ್ಲೇಖವಿದ್ದು ಅದು ಈಗ ಮುತ್ತಿಗೆಯಾಗಿ ಪರಿವರ್ತನೆಗೊಂಡಿದೆ[೧೪]" ಎಂಬ 'ಮುತ್ತಗ' Muttaga, ಮುತ್ತಲ, ಮುತ್ತುಕ, ಮುತ್ತುಗ, ಮುತ್ತುಲ, ಮುಳ್ತಗ, ಮುಳ್ತುಗ, a tree, with large red or orange flowers, the bastard teak, Butea frondosa Roxb. (ಪಲಾಶ, ಕಿಂಶುಕ, ಪರ್ಣ, ವಾತಪೋಥ Nr ನ್ಯಗ್ರೋಧ, ಪಲಾಶ Nn,42, o.r. ಮುತ್ತಗ is a tree with serrate leaves, Zizy-phus trinervius) 'ಮುತ್ತಲ'[೧೫] Muttala= ಮುತ್ತಗ etc. ಮುತ್ತಲಗಿಡ (ಕಿಂಶುಕ G) ಮುತ್ತಲದ ಗಿಡ (S.Mhr) ಮುತ್ತಲಎಲೆ(B.5,58)See ಚೆಲೋಮುಳ್ಳು-'ಮುತ್ತುಗ'[೧೬], ಕಮಟ, ತೋರಾಸ್, ಪಲಸ, ಬ್ರಹ್ಮವೃಕ್ಷ, ಮುತ್ತುಗದೆಲೆ, ಮುತ್ತಲಮರ, ಮುತ್ತಲಬೀಜ, ಮೊಟ್ಟುಗ,Butea Monosperma (Lamk)toubert Fabaceae "ಇದು ೧೦-೧೪ಮೀಟರ್ ಎತ್ತರ ಬೆಳೆಯುತ್ತದೆ. ಮರದ ರೆಂಬೆಗಳು ಡೊಂಕು, ಬೂದು ಬಣ್ಣದ ತೊಗಟೆ, ಸಂಯುಕ್ತ ಎಲೆಗಳಲ್ಲಿ ೩ ಸಣ್ಣ ಎಲೆಗಳು, ೪-೬ ಸೆಂಟಿಮೀಟರ್ ಉದ್ದದ ಎಲೆ ತೊಟ್ಟು, ಕೆಂಪು ಹೂಗಳು ಗುಂಪಿನಲ್ಲಿವೆ. ಹಳದಿ ಹೂವಗಳೂ ಕೂಡ ಇವೆ. ಆದರೆ ವಿರಳ. ಕಾಯಿಯಲ್ಲಿ ಚಪ್ಪಟೆಯಾದ ಒಂದೇ ಬೀಜ. ಒಣ, ಆರ್ದ್ರ ವಾತಾವರಣ ಚೆನ್ನಾಗಿ ನೀರು ಬಸಿದು ಹೋಗುವ ಮಣ್ಣಿನಲ್ಲಿ ಬೆಳೆಯುತ್ತದೆ. ಬೀಜಗಳಿಂದ ವಂಶಾಭಿವೃದ್ಧಿ ಫೆಬ್ರವರಿ-ಮಾರ್ಚ್‌ನಲ್ಲಿ ಇದರ ಕೆಂಪು ಹೂಗಳು ಅರಳಿ ಅರಣ್ಯಕ್ಕೆ ಬೆಂಕಿ ಹೊತ್ತಿಕೊಂಡಂತೆ ಕಾಣುತ್ತದೆ[೧೭]".

"ಮುಳ್ಳು=ಮುತ್ತುಗ ಕಾಡು ಪಾರಿವಾಳ, ಮುಳ್ಳು ಪಾರಿವಾಣ, ಮುಳ್ಳುಹೊಂಗರ, Erythrina Suberosa Roxb. Fabaceae ಸಾಮಾನ್ಯ ಎತ್ತರಕ್ಕೆ ಬೆಳೆಯುತ್ತದೆ. ಮರದ ತುಂಬಾ ಮುಳ್ಳುಗಳು ಸಂಯುಕ್ತ ಎಲೆಗಳಲ್ಲಿ ತ್ರಿದಳಗಳಿವೆ. ಪರ್ಯಾಯ ಜೋಡಣೆಯ ಎಲೆಗಳು ಮುತ್ತುಗದ ಎಲೆಗಳನ್ನು ಹೋಲುತ್ತವೆ. ಬೀಜಗಳಿಂದ ವಂಶಾಭಿವೃದ್ಧಿ ಜನವರಿ-ಫೆಬ್ರವರಿ ತಿಂಗಳಲ್ಲಿ ಎಲೆಗಳು ಉದುರುತ್ತವೆ. ಅದೇ ಸಮಯಕ್ಕೆ ಇಟ್ಟಿಗೆ ಕೆಂಪು ಬಣ್ಣದ ಹೂಗಳು ಅರಳುತ್ತವೆ[೧೮]" ಮುತ್ತುಗದ ಒಂದು ಪ್ರಭೇದವು ಮುಳ್ಳುಮುತ್ತುಗವಾಗಿದೆ. ಈ ಮುತ್ತುಗದ ಗಿಡದ ಎಲೆಗಳನ್ನು ಕಿತ್ತು ಊಟದ ಎಲೆಗಾಗಿ ಮುತ್ತತ್ತಿಯಲ್ಲಿ ವಿಫುಲವಾಗಿ ಬಳಸುತ್ತಿದ್ದರು ಎಂಬುದು ಗಮನಾರ್ಹ. ಈಗ ಅತ್ತಿ ಎಂಬ ಪದದ ಅರ್ಥ ನಿಷ್ಪತ್ತಿಯನ್ನು ನೋಡಬಹುದು.

"ಅತ್ತಿatti the red-wooded Fig-tree or Country fig-tree, FiCus racemosa Lin (ಔದುಂಬರ, ದುಗ್ಧತರು mr.11s; my; m.; te; T ಅತ್ತಿ, ಅದಂ, ಇರತ್ತಿ, ಇತ್ತಿ Tu, ಅರ್ತಿ) (ಅತ್ತಿಯ ಪಣ್ಣೊಳಿರ್ಪ ಪುರುಮಿಲ್ಲದೆ ಮಾನಸನೀ ಮುರಾಂತಕಾ Pb.5,75) see ಕಲ್ಲತ್ತಿ, ಕಾಡತ್ತಿ, ನಾಮತ್ತಿ. ಪುಪ್ಪವಿಲ್ಲದೆ ಕಾಯ್ ಅಪ್ಪ ಅತ್ತಿ ಮೊದಲಾದರಿಂದ ವನಸ್ಪತಿ ಎನಿಸುಗು (Nr)ಮುತ್ತಗವೆ, ಮುತ್ತವ್ವೆ ! ಚಂಗಳ್, ಅತ್ತಿಯೇ! ನಾನ್ ಇಹಗೆ ಇಹುದು ನಿನಗೆ ಅರ್ತಿಯೇ? (B.P.45,38) ಅತ್ತಿಮರ=ಅತ್ತಿಯಮರ,(ಉದುಮ್ಬರ etc,ಹುಲುವುಳ್ಳ ಅಂಜೂರ, ಬ್ರಹ್ಮಾಣ್ಡ ಕಾಯಿಯ ಗಿಡ si,126 ಅತ್ತಿಯ ಗಇಡ, ಯಜ್ಞಕ್ಕೆ, ತಕ್ಕನ್ಥಾ ಅತ್ತಿಯ ಗಿಡ ಮೊದಲಾದದರ ಕೊಂಬೆ (ಪರಿಧಿ si,431),- ಅತ್ತಿಯ ಮರ, (ಉದುಮ್ಬರ, ಜನ್ತುಫಲ, ಯಜ್ಞಾಂಗ, ಹೇಮದುಗ್ಧಕ Nr) ಅತ್ತಿರಸ, Juice extracted from the root of the atti (my) ಅತ್ತಿಯ ಹಣ್, – ಹಣ್ಣು[೧೯]"

"ಅತ್ತಿಮರ ಔದುಂಬರ, ತ್ರಾಯಮಾಣ, ರುಮಡಿ, ಗುಲಾರ Ficus racemosal(=Ficus glomerata Roxb)ಮರ. ಬೀಳಲು ಬೇರುಗಳಿಲ್ಲ. ಎಲೆ ದೀರ್ಘ ವೃತ್ತಾಕಾರ ಈಟಿಯಾಕಾರ, ಕೂದಲುರಹಿತ, ಮೂರು ಮುಖ್ಯ ನಾಳಗಳಿವೆ. ೧೪ x ೬ ಸೆಂ.ಮೀ. ಬದಿಯ ನಾಳಗಳು ೫-

೭ಜೊತೆ ಹಣ್ಣುಗಳ ಗೊಂಚಲು ಹಳೆಕಾಂಡದಿಂದ ಪ್ರತ್ಯೇಕ ಎಲೆರಹಿತ ಗಂತಿಗಳುಳ್ಳ ಗೆಲ್ಲುಗಳಲ್ಲಿ. ಹಣ್ಣು ಬಲಿತಾಗ ಕೆಂಪು ೩.ಸೆಂಮಿ. ದಪ್ಪ[೨೦]" ಎಲ್ಲಾ ಋತುಗಳಲ್ಲು ಬಿಡುವ ಈ ಹತ್ತಿಮರದ ಹಣ್ಣು ಕೆಂಪು ಇದನ್ನು ತಿನ್ನುತ್ತಾರೆ. ಎಲೆ ದನಗಳಿಗೆ ಆಹಾರವಾಗಿ ಉಪಯೋಗಿಸುತ್ತಾರೆ. ಮುತ್ತತ್ತಿಯ ಪರಿಸರ ದನಗಳ ದೊಡ್ಡಿಯ ಉಗಮ ಎಂಬುದು ಇಲ್ಲಿ ಮುಖ್ಯವಾಗುತ್ತದೆ.

"ಮುತ್ತ ಎಂದರೆ ಮುತ್ತಗ ಎಂಬ ಅರ್ಥ ಕಿಟ್ಟಲ್ ಕೋಶದಿಂದ ತಿಳಿದುಬರುತ್ತದೆ[೨೧]" ಮುತ್ತು ಎಂದರೆ ಆಭರಣಗಳಿಗೆ ಉಪಯೋಗಿಸುವ ಕಪ್ಪೆಚಿಪ್ಪಿನಲ್ಲಿ ದೊರೆಯುವ ಜಲದೊಳಗಣ ವಸ್ತು. ಸಂಸ್ಕೃತದ ಮುಕ್ತಕ ಎಂಬ ಶಬ್ದ ಕನ್ನಡದಲ್ಲಿ ಮುತ್ತು ಎಂಬ ತದ್ಭವ ರೂಪವನ್ನು ಪಡೆದುಕೊಂಡಿದೆ. 'ಮುತ್ತತ್ತಿ'ಯ ಶಬ್ದದ ನಿಷ್ಪತ್ತಿಯನ್ನು ಹೀಗೆ ಹೇಳಬಹುದು. ಮುತ್ತುಗ+ಅತ್ತಿ>ಮುತ್ತುಗತ್ತಿ>ಮುತ್ತತ್ತಿ ಎಂದಾಗಿದೆ. ಅಂದರೆ ಎರಡೂ ಸಸ್ಯಗಳು ಇಲ್ಲಿ ವಿಫುಲವಾಗಿದ್ದಿದ್ದುದರಿಂದ ಈ ಪ್ರದೇಶಕ್ಕೆ ಮುತ್ತತ್ತಿ ಎಂಬ ಹೆಸರ ಬಂದಿದೆ. ಈ ತಾಲ್ಲೂಕಿನ ಮಳವಳ್ಳಿ ಎಂಬ ನಾಮನಿಷ್ಪತ್ತಿಯೂ ಸಹ ಸಸ್ಯವಾಚಿಯೇ ಆಗಿರುವುದು ಇಲ್ಲಿ ಉಲ್ಲೇಖಾರ್ಹ "ಮಳವಳ್ಳಿಯ ಸುತ್ತಲ ಪ್ರದೇಶ ಅರಣ್ಯಮಯವಾಗಿತ್ತಂತೆ. ಈ ಕಾಡಿನಲ್ಲಿ ಸುವಾಸನಾಯುಕ್ತವಾದ ಮಲ್ಲೆ ಹೂವಿನ ಬಳ್ಳಿಗಳು ಅಧಿಕವಾಗಿದ್ದುವಂತೆ. ಈ ಹೂವುಗಳನ್ನು ಕಾಡುಮಲ್ಲೆ ಎನ್ನುತ್ತಿದ್ದರಂತೆ. ಮಲ್ಲೆಹೂವಿನ ಬಳ್ಳಿಗಳು ಅಧಿಕವಾಗಿದ್ದ ಈ ಊರನ್ನು ಜನ 'ಮಲ್ಲೆವಲ್ಲಿ' ಎಂದು ಕರೆಯುತ್ತಿದ್ದು ಕ್ರಮೇಣ 'ಮಲ್ಲೆವಲ್ಲಿ'ಯು ಉಚ್ಚಾರಣೆಯಲ್ಲಿ ಮಾರ್ಪಾಟಾಯಿತು. 'ಮಲ್ಲೆವಲ್ಲಿ' ಎಂಬ ಪದ ಗಮನಾರ್ಹವಾದುದು. 'ಮಲ್ಲೆ' ಎಂದರೆ ಮಲ್ಲೆಯ ಹೂ, 'ವಲ್ಲಿ' ಎಂದರೆ ಬಳ್ಳಿ. ನಡೆದಾಡುವ ಮನುಷ್ಯನ ಕಾಲಿಗೆ ಮಲ್ಲೆವಲ್ಲಿ ತೊಡರಾಗುತ್ತಿದ್ದವು. ಅಂತೆಯೇ ಉಚ್ಚಾರಣೆಯಲ್ಲಿ ನಾಲಿಗೆಗೆ ತೊಡರಾಯಿತು ಸುಲಭ ಮತ್ತು ಸೌಲಭ್ಯಕಾಂಕ್ಷಿಯಾದ ಮಾನವನು 'ಮಲ್ಲವಲ್ಲಿ' ಎಂದು ಕರೆದ. 'ಮಲ್ಲವಲ್ಲಿ'ಯು ಉಚ್ಛಾರಣೆಯಲ್ಲಿ ಮಳವಳ್ಳಿಯಾಯಿತು. 'ಮಳವಳ್ಳಿ' ಪದದ ನಿಷ್ಪತ್ತಿಯನ್ನು ಹೀಗೆ ಗುರುತಿಸಬಹುದು. ಮಲೆವಲ್ಲಿ>ಮಲ್ಲವಲ್ಲಿ> ಮಲವಲ್ಲಿ> ಮಳವಳ್ಳಿ. ಇಲ್ಲಿ 'ಲ'ಕಾರಕ್ಕೆ 'ಳ'ಕಾರ ಸಹಜವಾಗಿಯೇ ಬಂದಿದೆ. ಇದು ಉಚ್ಛಾರಣೆಯಲ್ಲಾದ ಗಮನಾರ್ಹ ಬದಲಾವಣೆ[೨೨]"

ಮುತ್ತತ್ತಿಯ ಜನಪದ ಗೀತೆಗಳಲ್ಲಿ ಬರುವ

"ಅತ್ತಿಮರದ ಮ್ಯಾಲೆ ಅತ್ತುನೋಡು ಮುತ್ತಯ್ಯ
ಪಾದ್ದಾರೆ ಮ್ಯೇಲೆ ಪರಸೆಯ'

ಎಂಬ ಉಲ್ಲೇಖದಿಂದ ಇಲ್ಲಿ ಅತ್ತಿಮರಗಳು ವಿಪುಲವಾಗಿದ್ದುದ್ದಾಗಿ ಕಂಡು ಬರುತ್ತವೆ. ಮುತ್ತುಗ ಮತ್ತು ಅತ್ತಿಮರಗಳ ಬಾಹುಳ್ಯವೇ ಮುತ್ತತ್ತಿ ನಾಮನಿಷ್ಪತ್ತಿಗೆ ಕಾರಣವಾಗಿದೆ ಎಂಬ ನಿರ್ಧಾರಕ್ಕೆ ಬರಬಹುದು. ಮುತ್ತ ಎಂದರೆ ಹಿರಿಯ, ದೊಡ್ಡ ಎಂಬ ಅರ್ಥವನ್ನು ಸ್ಫುರಿಸಿದರೂ ಸಹ, ಮುತ್ತುಗ ಮತ್ತು ಅತ್ತಿಗಳ ಬಾಹುಳ್ಯವೇ ಸರಿ ಎನಿಸುತ್ತದೆ. ಬಾಳೆ+ಹೊನ್ನಿಗ> ಬಾಳೆಹೊನ್ನಿಗ ಎಂಬ ಇದೇ ತಾಲ್ಲೂಕಿನ ಮತ್ತೊಂದು ಉದಾಹರಣೆಯನ್ನು ನೀಡಬಹುದು.

### ಆ) ವ್ಯಕ್ತಿನಾಮವಾಗಿ :-

ಮುತ್ತ, ಮುತ್ತಯ್ಯ, ಮುತ್ತಪ್ಪ, ಮುತ್ರಾಯ, ಮುತ್ತುರಾಯ ಎಂಬ ವ್ಯಕ್ತಿನಾಮಗಳನ್ನು ಗಮನಿಸಬಹುದು. ದ್ರಾವಿಡ ಪದವಾದ 'ಮುತ್ತ' ಎಂಬುದರ ಉತ್ತರಪದಗಳಾದ ಅಯ್ಯ, ಅಪ್ಪ, ರಾಯ ಎಂಬ ಪದಗಳು ಕೆಲಸ ಮಾಡಿವೆ. ಕರ್ನಾಟಕವೇ ಅಲ್ಲದೇ ಆಂಧ್ರಪ್ರದೇಶ, ತಮಿಳುನಾಡು, ಕೇರಳ ಮತ್ತು ದ್ರಾವಿಡ ಭಾಷೆಯ ಪ್ರಭಾವವಿರುವ ಸಿಂಹಳ, ಮಲೇಷಿಯ, ಸಿಂಗಾಪುರ ಇತ್ಯಾದಿ ದೇಶಗಳಲ್ಲು ಈ 'ಮುತ್ತು' ಪದದಿಂದ ಪ್ರಾರಂಭವಾಗುವ ವ್ಯಕ್ತಿನಾಮಗಳನ್ನು ಕಾಣಬಹುದಾಗಿದೆ. ಮುತ್ತ(ನಾ) "ವಯಸ್ಸಾದ ವ್ಯಕ್ತಿ; ಮುದುಕ; ವೃದ್ಧ[೨೩]" "ಅಜ್ಜ, ತಾತ ಹಿರಿತನವುಳ್ಳವನು; ಗಣ್ಯ" ಈ ಅರ್ಥದಲ್ಲಿಯೇ ಮುತ್ತಪ್ಪ, ಮುತ್ತಾತ, ಮುತ್ತಜ್ಜ, ಮುತ್ತಜ್ಜಿ ಮುತ್ತಪ್ಪ, ಮುತ್ತಮ್ಮ ಎಂಬ ಅರ್ಥಗಳು ಬಂದಿವೆ. "ಮುತ್ತಯ್ಯ ಮುತ್ತಯ, ಮುತ್ತಿಯ, ಮುತ್ಯ ಮುತ್ಯಾ, ಮುತ್ತ್ಯಾ[೨೪]" ಎಂಬ ಅರ್ಥಗಳು ಇದ್ದು ಮುತ್ತ+ಅಯ್ಯ ಎಂಬ ಎರಡು ಪದಗಳಿಂದ ಆಗಿವೆ. ಮುತ್ತ+ಅಪ್ಪ>ಮುತ್ತಪ್ಪ, ಮುತ್ತ+ರಾಯ>ಮುತ್ರಾಯ ಈ ಅರ್ಥಗಳಲ್ಲಿ ಅಂಜನೇಯನು ಗ್ರಾಮೀಣ ಭಕ್ತರಿಗೆ ಮುತ್ತಪ್ಪ, ಮುತ್ತಯ್ಯ, ಮುತ್ತುರಾಯನಾಗಿದ್ದಾನೆ. ರಾಯ ಎಂಬುದು ರಾಜ ಎಂಬುದರ ತದ್ಭವ ರೂಪವಾಗಿ ಬಳಕೆಯಲ್ಲಿದೆ. ಆಂಜನೇಯನು ಸಂಜೀವಿನಿಯನ್ನು ತಂದಿದ್ದರಿಂದ ಸಂಜೀವರಾಯ, ಹಿರಿಯವ್ಯಕ್ತಿಯಾದುದರಿಂದ ಹುಚ್ಚಯ್ಯ, ಹುಚ್ಚಮುತ್ತು ಆಗಿದ್ದಾನೆ. ಗ್ರಾಮೀಣ ಭಕ್ತರು ಮುತ್ತತ್ತಿಯಲ್ಲಿರುವ ರಾಯನಿಗೆ ಗುಣವಿಶೇಷಗಳನ್ನು ಹಚ್ಚಿ ಕಾವೇರಿ ಮುತ್ತ, ಹೊಳೆಸಾಲ್ ಮುತ್ತ, ವನಮುತ್ತ, ಮುನಮುತ್ತ, ಕೆಂಚಮುತ್ತ, ಕಾಳಮುತ್ತ, ಕಮರಿಮುತ್ತ, ಉಚ್ಚಮುತ್ತ, ಹೆಂಗಸರಿಗೆ ಅಮ್ಮ, ಅವ್ವ ಎಂಬ ಉತ್ತರಪದಗಳನ್ನು ಹಚ್ಚಿ ವ್ಯಕ್ತಿನಾಮಗಳನ್ನು ಇಡುತ್ತಾರೆ. ಬಾಲ್ಯದ ಮೊದಲ ಹೆಸರು ಮುತ್ತತ್ತಿರಾಯನಿಗೆ ಸಂಬಂಧಿಸಿದಂತಿದ್ದು ನಂತರ ಬೇರೆ ಹೆಸರುಗಳನ್ನು ಇಡುತ್ತಾರೆ.

ಆಂಜನೇಯ ಗ್ರಾಮೀಣಭಕ್ತರ ಆರಾಧ್ಯದೈವವಾಗಿದ್ದಾನೆ. ಭಾರತದಾದ್ಯಂತ ಪೂಜನೀಯ ಸ್ಥಾನವನ್ನು ಪಡೆದುಕೊಂಡು ಮತಭೇದವಿಲ್ಲದೆ ಇವನನ್ನು ಪೂಜಿಸುತ್ತಾರೆ. ಊರ ಹೊರಗೆ ಮತ್ತು ಒಳಗೆ ಇವನ ಗುಡಿಗಳು ಇದ್ದೇ ಇರುತ್ತವೆ. ಗುಡ್ಡಗಾಡುಗಳಲ್ಲಿ, ಕಾಡುಮೇಡುಗಳಲ್ಲಿ ಮೂಲೆ ಮೂಲೆಯ ಹಳ್ಳಿಗಳಲ್ಲಿ ಆಂಜನೇಯನ ಗುಡಿಗಳು ಕಂಡು ಬರುತ್ತವೆ. ಗುಡಿಯಿಲ್ಲದೆ ಬಿಡಿಯಾಗಿ ನಿಂತ ಒರಟು ಮೂರ್ತಿಗಳು ಕಾಣಸಿಗುತ್ತವೆ. ಇತ್ತೀಚೆಗೆ ನಾಗರಕಟ್ಟೆಯ ಮೇಲೆಯೂ ಇರಿಸುವ ಮೂರ್ತಿಯಾಗಿದೆ. "ಈ ದೇವತೆ ಜಾನಪದ ನೆಲೆಯಿಂದ ಬಂದುದೆಂಬುದೇನೊ ನಿರ್ವಿವಾದವಾದುದು. ಮೂರ್ತಿಯ ಆಕಾರ, ಇತಿಹಾಸ, ಸ್ವಭಾವ, ಪೂಜಾ ಪದ್ಧತಿ, ಎಲ್ಲವೂ ಇದನ್ನೇ ಸೂಚಿಸುವುದು[೨೫]" ಗ್ರಾಮೀಣಭಕ್ತರು ಪೂಜಿಸುವ ದೇವರಾದುದರಿಂದ ಜಾನಪದದ ಸರ್ವಪ್ರಕಾರಗಳಲ್ಲೂ ಆಂಜನೇಯ ಇಲ್ಲವೇ ಹನುಮಂತನ ಪಾತ್ರವು ಹರಡಿಕೊಂಡು ಬಂದಿದೆ. ಗಾದೆಗಳಲ್ಲಿ ಊರು 'ಸುಟ್ಟರು ಹನುಮಪ್ಪ ಹೊರಗೆ', 'ಹನುಮಂತ ಹಗ್ಗ ತಿನ್ನೋವಾಗ ಪೂಜಾರಿ ಶ್ಯಾವಿಗೆ ಬೇಡಿದ್ನಂತೆ', 'ಅಂಕೆ ಇಲ್ಲದ ಕಪಿ ಲಂಕೆ ಸುಟ್ಟಿತಂತೆ'.

ಕೋಲಾಟದ ಹಾಡುಗಳಲ್ಲಿ ಇವನ ಸಾಹಸಗಳನ್ನು ಹೀಗೆ ವರ್ಣಿಸಿದ್ದಾರೆ.

"ತಾನಾನೋ ತಂದು ನಾನಾನೋ ಸೈ
ತಾನಾನೀ ತಂದು ನಾನಾನೋ
ಅಡವಿಯಾ ಗಂಜನದೇವಿ ಗಿಡಗಾನ ಹಡೆದಾಳು
ತೊಡೆಯ ತೊಳೆಯೋಕೆ ನೀರಿಲ್ಲ- ಹನುಮಣ್ಣ
ಸುತ್ತಲ ಸಮುದ್ರ ತಿರುವ್ಯಾನೊ
ಕಟ್ಯಾಂಗಜನದೇವಿ ಪುತ್ರನ ಹಡೆದಾಳು
ಹೊಟ್ಟೆ ತೊಳೆಯೋಕೆ ನೀರಿಲ್ಲ. ಹನುಮಂತ
ಸುತ್ತೇಳು ಸಮುದ್ರ ತಿರುವ್ಯಾನು[೨೬]"
"ಕ್ವಾಡಾಂಗ ನಿವನೆಂದು ಕೇಡು ನುಡಿಯಲಿ ಬೇಡಿ
ನೋಡಿರೆನವ್ವ ಅವನ ಸಾಹಸ-ಹಂಪಿಯ
ಕ್ವಾಟೇಯ ಕಿತ್ತು ಉರಿದಾನೋ[೨೭]"

"ಭಾರತದಲ್ಲಿ ಆರ್ಯವೀರನಾದ ರಾಮನಪರಿವಾರದಲ್ಲಿ ಸೇರುವ ಮೊದಲೇ ಹನುಮಂತ(ಆಂಜನೇಯ) ಸ್ವತಂತ್ರ ದೇವತೆಯಾಗಿ ಮೆರೆಯುತ್ತಿದ್ದುದುಂಟು ಕೋಟೆಕೊತ್ತಲಗಳಲ್ಲಿ, ಬೇಟೆಗಾರರ ವಸತಿಗಳಲ್ಲಿ ಪೂಜೆಗೊಳ್ಳುತ್ತಿದ್ದ ಈ ದೈವದ ಪ್ರಾಚೀನತೆ ಬಹಳವೇ ಇದೆ[೨೮]" ಹನುಮಂತ, ಎಂದೂ ಸಹ ಕರೆಯುವ ಆಂಜನೇಯನನ್ನು ದ್ರಾವಿಡ ದೇವರಾಗಿಯೇ ಆರಂಭದಲ್ಲಿ ಪೂಜಿಸುತ್ತಿದ್ದರು. "ಒಂದು ಕಾಲಕ್ಕೆ ವಿಶೇಷವಾಗಿ ದಕ್ಷಿಣಭಾರತಕ್ಕೆ ಸೀಮಿತವಾಗಿದ್ದ ದೇವತೆ ಎಂದು ತೋರುತ್ತದೆ. ವೈದಿಕಯುಗದ 'ವೃಷಾಕಪಿ'ಗೂ ಹನುಮಂತನಿಗೂ ನೆಂಟನ್ನು ಕಲ್ಪಿಸಿದ್ದರು ದಿಟವಾಗಿ ಹನುಮಂತ ಎನ್ನುವ ಮಾತು ಸಂಸ್ಕೃತದಲ್ಲವೆಂದೂ 'ಅಣಾಮಂತಿ (ಗಂಡುಕಪಿ) ಎನ್ನುವ ತಮಿಳು ಮಾತಿನ ರೂಪಾಂತರ ಅದೆಂದೂ ಹೇಳುವುದಿದೆ. ಇನ್ನು ಕನ್ನಡಿಗರು ಹನುಮಂತನನ್ನು ತಮ್ಮವನೇ ಎಂದು ಕರೆದುಕೊಂಡಿರುವುದು ಇದೆ[೨೯]" "ಸುಗ್ರೀವನ ರಾಜಧಾನಿ ಋಷ್ಯಮೂಕ ಪರ್ವತ, ಕಿಷ್ಕಿಂದೆ, ಅಂಜನಾದ್ರಿ ಪರ್ವತ, ಮಾಲ್ಯವಂತ ಪರ್ವತ, ಮಾತಂಗಪರ್ವತ, ಸೀತೆಸೆರಗು, ಸುಗ್ರೀವಗುಹೆ, ವಾಲಿಕಾಷ್ಟ. ಇವೆಲ್ಲಾ ಹಂಪಿಯ ಪರಿಸರದಲ್ಲೇ ಇದ್ದು ಇಲ್ಲಿಯೇ ವಾನರರ ತಂಡವಿದ್ದು ಹನುಮಂತನಾದ ಆಂಜನೇಯನು ನೆಲೆಸಿದ್ದ ಎಂದು ಐತಿಹ್ಯಗಳಲ್ಲಿ ಹೇಳುತ್ತಾರೆ[೩೦]"

"ಉದ್ದಾನೆ ಅನುಮಂತ ಬುದ್ದೀಲಿ ಸಮರಂತ
ಯುದ್ಧ ಹೊಡೆದಾನೋ ಗಗನಾಕಾ; ಹಂಪಿಯ
ಹುಟ್ಟಿ ಬಂದಾನು ಸರಿಸಮನ[೩೧]"

ಕರ್ನಾಟಕದಾದ್ಯಂತ ನೆಲೆಗೊಂಡಿರುವ ಈ ಆಂಜನೇಯನನ್ನು ಆರ್ಯವೀರನಾದ ಶ್ರೀರಾಮನಿಗೆ ಭಂಟನೆಂಬಂತೆ ರಾಮಾಯಣದಲ್ಲಿ ಚಿತ್ರಿಸಿದ್ದರೂ ಸಹ ಇವನು ವೇದ, ಯೋಗ, ಸಂಗೀತವನ್ನು ಬಲ್ಲ ಸುಸಂಸ್ಕೃತನಾಗಿದ್ದ ಆಯುಧಪ್ರಯೋಗ ನಿಪುಣನು ಆಗಿದ್ದ. ಆದುದರಿಂದಲೇ ಗರಡಿ, ಯೋಗ, ಕುಸ್ತಿ ಮಾಡುವವರಿಗೆ ಇವನು ಅಚ್ಚುಮೆಚ್ಚು. ಮಕ್ಕಳಿಲ್ಲದ ಹೆಂಗಸರು ಹನುಮಂತನನ್ನು ಪೂಜಿಸಿ ಮಕ್ಕಳನ್ನು ಪಡೆಯುತ್ತಾರೆ. ಜೋಗತಿಯರು, ದೇವದಾಸಿಯರು ಸಹ ಇವನನ್ನು ಪೂಜಿಸುತ್ತಾರೆ.

"ಅಂಜನೇಯ ಮಗನೆಂದೂ(ಆಂಜನೇಯ) ರುದ್ರಾಂಶ ಸಂಭೂತನೆಂದೂ, ಭಾವಿರುದ್ರನೆಂದೂ, ಸೂರ್ಯಪುತ್ರನೆಂದೂ, ವಾಯುಪುತ್ರನೆಂದೂ, ಮರುದ್ಗಣಗಳಿಗೆ ಸಂಬಂಧಿಸಿದವನೆಂದೂ(ಮಾರುತಿ) ರಾಮಭಕ್ತನೆಂದು, ಭಾರತೀರಮಣನೆಂದೂ, ಮುಖ್ಯಪ್ರಾಣನೆಂದೂ

ವಿಭಿನ್ನವಾದ ವಿವರಗಳು ಮುಂದೆ ಮೂಡಿಕೊಂಡು ಬಂದವು[೩೨]. ರಾಮಾಯಣದ ಕಿಷ್ಕಿಂದೆ ಕಾಂಡದಲ್ಲಿ ಕಾಣಿಸಿಕೊಳ್ಳುವ ಹನುಮಂತನನ್ನು ರಾಮನಭಂಟ, ಆಜ್ಞಾಪಾಲಕ, ರಾಮಭಕ್ತನೆಂದು ವರ್ಣಿಸಿದ್ದರೂ, ತನ್ನ ಬುದ್ಧಿಶಕ್ತಿ, ಭುಜಬಲದಿಂದ ವೈರಿಗಳನ್ನು ಗೆದ್ದವನು. ಹಲವಾರು ರಾಕ್ಷಸ, ರಾಕ್ಷಸಿಯರನ್ನು ಕೊಂದವನು. ಆದುದರಿಂದಲೇ ಭಾರತೀಯ ಗ್ರಾಮೀಣ ಭಕ್ತರಿಗೆ ಇವನು ಹಿರಿಯನಾಗಿ, ಪೂಜ್ಯನಾಗಿ, ಮುತ್ತನಾಗಿ ಕಾಣುತ್ತಾನೆ. ಜನರನ್ನಲ್ಲದೆ ಗ್ರಾಮ, ಕೋಟೆಗಳನ್ನು ಸಹ ಕಾಯುವವನು ಆಗಿದ್ದಾನೆ. ವೈಷ್ಣವ ಸಂಪ್ರದಾಯದ ದೇವತಾ ಪರಿವಾರದಲ್ಲಿ ಇವನಿಗೆ ಒಂದು ಉತ್ತಮಸ್ಥಾನ. ಮಧ್ವಾಚಾರ್ಯರನ್ನು ಹನುಮದೇವನ ಅವತಾರವೆಂದೇ ಪರಿಗಣಿಸಿದ್ದಾರೆ. ಕರ್ನಾಟಕದ ವಿವಿಧೆಡೆಗಳಲ್ಲಿ ಇವನ ಗುಡಿಗಳು ಹರಡಿದವು. ನಂತರ ಬಂದ ವ್ಯಾಸರಾಯರಂತು ತಾವು ಹೋದ ಕಡೆಯಲ್ಲೆಲ್ಲಾ ಆಂಜನೇಯನನ್ನು ಸ್ಥಾಪಿಸಿದ್ದಾರೆ. ಬೆಂಗಳೂರು ಬಳಿಯ ಗಾಳಿ ಆಂಜನೇಯ ಇವುಗಳಲ್ಲಿ ಒಂದು. ಗಾಳಿಯನ್ನು(ದೆವ್ವ) ಆಂಜನೇಯ ಓಡಿಸುವನಾದ್ದರಿಂದ ಈ ಹೆಸರು ಬಂದಿದೆ. ಈ ವೇಳೆಯಲ್ಲಿಯೇ ಕರ್ನಾಟಕದಾದ್ಯಂತ ಸ್ಥಾಪಿತವಾದ ಆಂಜನೇಯನ ಅನೇಕ ಕ್ಷೇತ್ರಗಳನ್ನು ಹೆಸರಿಸಬಹುದು. ಮದಲಗಟ್ಟಿಯ ಆಂಜನೇಯ, ಯಲಗೂರೇಶ ಕದರಮಂಡಲಗಿಯ ಕಾಂತೇಶ, ಸಾತೇನಹಳ್ಳಿಯ ಶಾಂತೀಶ, ಶಿಕಾರಿಪುರದ ಭ್ರಾಂತೇಶ, ಕೆಂಗಲ್ ಹನುಮಂತರಾಯ, ಮುಳಬಾಗಿಲು ವೀರಾಂಜನೇಯ, ಮುತ್ತತ್ತಿಯ ಮುತ್ತತ್ತಿರಾಯ ಇವುಗಳನ್ನು ಹೆಸರಿಸಬಹುದು. ಒಂದು ಅಡಿಯಿಂದ ಹಿಡಿದು ಮೂವತ್ತು ಅಡಿಗಳ ಶಿಲಾಮೂರ್ತಿ ಹಾಗೂ ಗಾರೆಯ ಮೂರ್ತಿಗಳನ್ನು ಕಾಣಬಹುದು. ವಿವಿಧ ರೂಪಗಳಲ್ಲಿ ನಿಂತಿರುವ ಮೂರ್ತಿಗಳು ಲಭಿಸುವವಾದರೂ "ವ್ಯಾಸ ಪ್ರತಿಷ್ಠಿತ ಮೂರ್ತಿಗಳಲ್ಲಿ ೧.ಬಾಲಕ್ಕೆ ಗಂಟೆ ಇರುತ್ತದೆ. ೨.ಸೊಂಟದ ಮೇಲೆ ಸೌಗಂಧಿಕ ಪುಷ್ಪ ಸಹಿತವಾದ ಎಡಗೈ ಇರುತ್ತದೆ.೩.ಬಾಲದವರೆಗೆ ಚಾಚಿ ಎತ್ತಿರುವ ಬಲ ಅಭಯಹಸ್ತವಿರುತ್ತದೆ. ೪.ಶಿರಸ್ಸಿನ ಮೇಲೆ ಶ್ರೀರಾಮನಾಮ ಕೆತ್ತಲ್ಪಟ್ಟಿರುತ್ತದೆ. ೫.ಪ್ರಭಾವಳಿಯಲ್ಲಿ ದಶಾವತಾರ ಮೂಡಿಸಿರುತ್ತಾರೆ. ೬.ಪಾದುಕೆಗಳನ್ನು ಮೆಟ್ಟಿದ ಪಾದ ಕಾಣುತ್ತದೆ. ೭.ನವರತ್ನಮಾಲೆಯಿಂದ ಸುಶೋಭಿತವಾಗಿರುತ್ತದೆ. ೮.ಶಂಖ ಚಕ್ರಗಳಿರುತ್ತವೆ.(ಮೇಲ್ಭಾಗದಲ್ಲಿ ಎಡಕ್ಕೆ, ಬಲಕ್ಕೆ) ೯.ಚಂಡಿಕೆ ಮುಡಿಗಟ್ಟಿರುತ್ತದೆ.[೩೩]"

ವಾದಿರಾಜ, ವ್ಯಾಸರಾಯ, ಪುರಂದರದಾಸರು, ವಿಜಯದಾಸ, ಗೋಪಾಲದಾಸ, ಗುರುವಿಠಲದಾಸ, ಜ್ಞಾನಕ್ಕೆ ಹೆಸರಾದ ಹನುಮಂತನನ್ನು ತಮ್ಮ ಕೃತಿಗಳಲ್ಲಿ ಕೊಂಡಾಡಿದ್ದಾರೆ. ವ್ಯಾಸ ಪ್ರತಿಷ್ಠಿತ ಲಕ್ಷಣಗಳನ್ನುಳ್ಳ ಮೂರ್ತಿ ಪರಂಪರೆಯೇ ಮುತ್ತತ್ತಿ ಪಾದ್ದಾರೆ ಮತ್ತು ಸುತ್ತಮುತ್ತ

ಮುಂದುವರೆಯುತ್ತಿರುವುದು. ದಾಸವರೇಣ್ಯರ ವೈಷ್ಣವ ಪ್ರಚಾರದ ನಂತರ ಶೈವರಿಗೂ, ಶಾಕ್ತರಿಗೂ ಭೇದಭಾವವಿಲ್ಲದೆ ಪೂಜಿಸುವ ಈ ಆಂಜನೇಯನ ಆರಾಧನೆ ಮತ್ತಷ್ಟು ಹೆಚ್ಚಿತು. ಶೈವಪಂಥ ವೀರಭದ್ರನಿಂದ ಆಂಜನೇಯನಿಗೆ ಶಿವದೀಕ್ಷೆಯಾಗಿದೆ ಎಂಬ ಸಮಾಧಾನಕರವಾದ ವಾದವನ್ನು ಗಣನೆಗೆತೆಗೆದುಕೊಂಡರು. ಆಯಾ ಗ್ರಾಮಗಳಲ್ಲಿ ಮುಖ್ಯ ದೇವತೆಯಾಗಿ ಪೂಜಿಸಲ್ಪಡಲು ಮಾರ್ಗವಾಯಿತು. ಮುತ್ತತ್ತಿಯಲ್ಲಿನ ಆಂಜನೇಯ 'ಮುತ್ತತ್ತಿರಾಯನಾದರೆ', ಪಾದ್ದಾರೆಯಲ್ಲಿನ ಅಯ್ಯ ಪಾದ್ದಾರಯ್ಯ, ಪಾದ್ದಾರಪ್ಪ, ಕಂಬದಗುಡಿಯಲ್ಲಿರುವವನು ಕಂಬದಪ್ಪ, ಕಂಬದಯ್ಯ, ಕಂಬದರಾಯ ಎನ್ನುವಂತಾಯಿತು. ಗ್ರಾಮೀಣರಿಗೆ ಅತಿ ಹತ್ತಿರದ ದೇವರು ಈ ಆಂಜನೇಯನಾದನು. ಆದುದರಿಂದಲೇ ಶೈವಸಂಪ್ರದಾಯದ ಮಂಟೇಸ್ವಾಮಿ ಕಾವ್ಯಗಳಲ್ಲಿ ಆಂಜನೇಯನಾದ ಮುತ್ತತ್ತಿರಾಯನಿಗೆ ಸಿದ್ಧಾಪ್ಪಾಜಿಯ ಸಮಕಾಲೀನನಂತೆ ಮನುಜ ಕಲ್ಪನೆ ಮಾಡಿ ಸಿದ್ಧಾಪ್ಪಾಜಿಯ ಜೊತೆಗೆ ನೆಂಟಸ್ತಿಕೆ ಬೆಳೆಸುವಂತೆ ಮಾಡಿದ್ದಾರೆ ಗ್ರಾಮೀಣ ಭಕ್ತರು.

ಇಂದಿಗೂ ಸಹ ಮುತ್ತತ್ತಿರಾಯ ಇಲ್ಲವೆ ಆಂಜನೇಯನ ಗುಡಿಗಳು ಗ್ರಾಮೀಣಭಕ್ತರ ನಂಬಿಕೆಯಿಂದ ಉಗಮವಾಗುತ್ತಿರುವುದನ್ನು ನೋಡಿದರೆ ಆಂಜನೇಯನಲ್ಲಿ ನಮ್ಮ ಗ್ರಾಮೀಣಭಕ್ತರು ಇರಿಸಿರುವ ಭಕ್ತಿ, ನಂಬಿಕೆ, ಶ್ರದ್ಧೆಗಳನ್ನು ಮನಗಾಣಬಹುದು. ತಿರುಪತಿಯ ತಿಮ್ಮಪ್ಪ, ಬಿಳಿಗಿರಿಯ ರಂಗಯ್ಯ, ಮೇಲುಕೋಟೆಯ ಚೆಲುವರಾಯ, ಮುಳಬಾಗಿಲಿನ ವೀರಾಂಜನೇಯ, ಕೆಂಗಲ್ ಹನುಮಂತರಾಯ, ಬೆಂಗಳೂರಿನ ಗಾಳಿ ಹನುಮಂತರಾಯ ವೈಷ್ಣವ ಪಂಥದ ಪ್ರಭಾವದಿಂದ ಮುತ್ತತ್ತಿಯ ಪರಿಸರದಲ್ಲಿ ಮುತ್ತತ್ತಿರಾಯನ ಆರಾಧನೆ ಜನಪ್ರಿಯತೆಯನ್ನು ಪಡೆದುಕೊಂಡಿದೆ. ಇದಕ್ಕೆ ಪೂರಕವಾಗಿ ಮಲೆಯಮಹದೇಶ್ವರ, ನಂಜನಗೂಡಿನ ನಂಜುಂಡ, ಚಿಕ್ಕಲ್ಲೂರಿನ ಸಿದ್ಧಾಪ್ಪಾಜಿ, ಬೊಪ್ಪೆಗೌಡನಪುರದ ರಾಚಪ್ಪಾಜಿ, ·ಮಂಟೇಸ್ವಾಮಿ, ದೊಡ್ಡಮ್ಮತಾಯಿ, ಶಾಕ್ತಪಂಥದ ಕಾಳಿಕಾದೇವಿ, ಕಬ್ಬಾಳಮ್ಮ, ಮದ್ದೂರಮ್ಮರ ಬೆಂಬಲ ಪ್ರಭಾವ ಮುತ್ತತ್ತಿರಾಯನಿಗೆ ಇದೆ.

**ಸಾಂಸ್ಕೃತಿಕ ಅಧ್ಯಯನದ ಅಗತ್ಯ :–**

ಸಂಸ್ಕೃತಿ ಎಂದರೆ ಏನು? ಸಂಸ್ಕೃತಿಯ ಅರ್ಥವೇನು? ಯಾವುದನ್ನು ಸಂಸ್ಕೃತಿ ಎಂದು ಪರಿಗಣಿಸಬೇಕು? ಸಂಸ್ಕೃತಿಯ ವ್ಯಾಪ್ತಿಯೊಳಗೆ ಬರುವ ಅಂಶಗಳೇನು ಎಂಬುದೆಲ್ಲಾ ಜಟಿಲವಾದ ಪ್ರಶ್ನೆಗಳೇ ಆಗಿವೆ. ಹಲವಾರು ಪಾಶ್ಚಿಮಾತ್ಯ, ಪೌರಾತ್ಯ ವಿದ್ವಾಂಸರು ತಮ್ಮ ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸಿದ್ದರೂ ಇದನಿತ್ತಂ ಎಂಬುದಾಗಿ ಅರ್ಥೈಸಲು ಕಷ್ಟಕರವಾಗಿದೆ. ನಾವು ಮುಖ್ಯವಾಗಿ ಎರಡು ಸಂಸ್ಕೃತಿವಾಹಿನಿಗಳನ್ನು ಗುರುತಿಸಬಹುದು. ನಗರಸಂಸ್ಕೃತಿ ಹಾಗೂ ಗ್ರಾಮೀಣಸಂಸ್ಕೃತಿ. ಎರಡರಲ್ಲೂ ಕೆಲವು ಸಮಾನ ಅಂಶಗಳಿದ್ದು ಇಲ್ಲಿಯೂ ಗೆರೆ ಎಳೆಯುವುದು ಕ್ಲಿಷ್ಟವೇ ಆಗಿದೆ. ಆದರೂ ಸ್ಥೂಲವಾಗಿ ನಗರದಲ್ಲಿ ಬೆಳೆದು ಹರಡಿರುವ ಸಂಸ್ಕೃತಿಯನ್ನು ನಗರಸಂಸ್ಕೃತಿ ಎಂದು, ಗ್ರಾಮೀಣ ಪರಿಸರದಲ್ಲಿ ಉಗಮಿಸಿ ಹರಡಿರುವ ಸಂಸ್ಕೃತಿಯನ್ನು ಗ್ರಾಮೀಣಸಂಸ್ಕೃತಿಯೆಂದು ಕರೆಯಬಹುದು.

"ಈಗ ನಾವು ಇಂಗ್ಲೀಷಿನ Culture ಶಬ್ದಕ್ಕೆ ಸಮಾನವಾಗಿ 'ಸಂಸ್ಕೃತಿ' ಎಂಬ ಶಬ್ದವನ್ನು ಸಂವಾದಿಯಾಗಿ ಉಪಯೋಗಿಸುತ್ತಿದ್ದೇವೆ.ಆದರೆ ಇದರ ಹಿಂದಿರುವ ಅರ್ಥ ಹೊಸದಲ್ಲ[೩೪]" "ಸಂಸ್ಕೃತಿ ಮಾನವ ಜೀವಿಗೆ ವಿಶಿಷ್ಟವಾದುದು, ಸಮಾಜಕ್ಕೆ ಮತ್ತು ಸಂಸ್ಕೃತಿಗೆ ಸಂಬಂಧವಿದೆ. ವ್ಯಕ್ತಿಗಳಿರದೆ ಹೇಗೆ ಸಮಾಜವಾಗಲು ಸಾಧ್ಯವಿಲ್ಲವೋ ಹಾಗೆಯೇ ಸಮಾಜವಿಲ್ಲದೆ ಸಂಸ್ಕೃತಿ ಇರಲು ಸಾಧ್ಯವಿಲ್ಲ. ಪರಿಸರದಲ್ಲಿ ಮಾನವ ನಿರ್ಮಿತವಾದ ಭಾಗವೇ ಸಂಸ್ಕೃತಿ. ಸಂಸ್ಕೃತಿ ಮಾನವನಿಗೆ ಪರಂಪರಾಗತವಾಗಿ ಬರುವಂತಹದು. ಸಂಸ್ಕೃತಿ ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ವರ್ಗಾವಣೆಯಾಗುತ್ತದೆ. ಮಾನವನ ತಿಳುವಳಿಕೆ, ನಂಬಿಕೆ, ವರ್ತನೆ, ನೀತಿ, ಕಲೆ, ಸಾಹಿತ್ಯ, ಭಾಷೆ, ಕಾನೂನು, ಸಂಪ್ರದಾಯ, ದೃಷ್ಟಿಕೋನ, ಮೌಲ್ಯಗಳು, ತಂತ್ರಗಳು, ಮಾನವ ನಿರ್ಮಿತ ವಸ್ತುಗಳು. ಆಲೋಚನೆಗಳು ಇವೆಲ್ಲವೂ ಸೇರಿ ಸಂಸ್ಕೃತಿ ರೂಪುಗೊಳ್ಳುತ್ತದೆ. ಸಂಸ್ಕೃತಿ ಮನುಷ್ಯನ ದೈಹಿಕ ಚಟುವಟಿಕೆಗಳನ್ನು ಒಳಗೊಂಡರೂ ಅದನ್ನು ಮೀರಿ ನಿಲ್ಲುತ್ತದೆ. ಪ್ರತಿಯೊಬ್ಬ ವ್ಯಕ್ತಿಯೂ ಸಂಸ್ಕೃತಿಯನ್ನು ರೂಪಿಸುವಲ್ಲಿ ಪಾತ್ರವಹಿಸಿದರೂ ಅದು ವ್ಯಕ್ತಿಗೆ ಸೀಮಿತವಾಗಿ ನಿಲ್ಲದೆ ಅವನನ್ನು ಮೀರಿ ನಿಂತು ಸಾರ್ವಜನಿಕವಾಗಿ ಪರಿಣಮಿಸುತ್ತದೆ[೩೫]" ಈ ಮಾತುಗಳು ಮುತ್ತತ್ತಿಯ ಜನಪದ ಸಂಸ್ಕೃತಿಗೆ ಅಕ್ಷರಶಃ ಸರಿಹೊಂದುತ್ತದೆ. ಕಕ್ಕೆಸೊಪ್ಪಿನ ಕಾಳದಾಸನಿಂದ ಆರಂಭವಾದ ಮುತ್ತತ್ತಿರಾಯನ

ಆರಾಧನೆ ಇಂದು ಸಾರ್ವಜನಿಕವಾಗಿ ಪರಿಣಮಿಸಿದೆ. ಗ್ರಾಮೀಣಪರಿಸರ ಸಂಸ್ಕೃತಿ, ಬುಡಕಟ್ಟುಸಂಸ್ಕೃತಿಯನ್ನು ಮೀರಿ ನಗರಸಂಸ್ಕೃತಿಯನ್ನು ಆಕರ್ಷಿಸಿ ತನ್ನ ಪ್ರಭಾವಕ್ಕೆ ಸೆಳೆದುಕೊಳ್ಳುತ್ತದೆ.

ಸಂಸ್ಕೃತಿಯಲ್ಲಿ ಮೂರು ಮುಖ್ಯ ವಿಭಾಗಗಳಾದ ಬುಡಕಟ್ಟುಸಂಸ್ಕೃತಿ, ಗ್ರಾಮೀಣಸಂಸ್ಕೃತಿ ಮತ್ತು ನಗರಸಂಸ್ಕೃತಿ ಎಂಬ ಮೂರು ಮುಖ್ಯ ವಿಭಾಗಗಳನ್ನು ವಿದ್ವಾಂಸರು ವಿಭಾಗಿಸಿದ್ದರೂ, ಮುತ್ತತ್ತಿಯ ಗ್ರಾಮೀಣಸಂಸ್ಕೃತಿ ಎಲ್ಲವನ್ನೂ ಒಳಗೊಂಡಿದೆ. 'ಸಾಂಸ್ಕೃತಿಕ' ಎಂಬ ಪದವನ್ನು ನೋಡಬಹುದು. ಸಂಸ್ಕೃತಿಯನ್ನು ಒಳಗೊಂಡಿರುವುದು ಸಾಂಸ್ಕೃತಿಕವಾಗುತ್ತದೆ. ಈ ದೃಷ್ಟಿಯಿಂದ ಮುತ್ತತ್ತಿಯ ಸಮಗ್ರ ಸಂಸ್ಕೃತಿಯನ್ನು ಗ್ರಹಿಸುವುದು, ಅರಿಯುವುದು, ಶಾಸ್ತ್ರೀಯ ಕ್ರಮದಲ್ಲಿ ಅಧ್ಯಯನಕೊಳಪಡಿಸುವುದು ಸಾಂಸ್ಕೃತಿಕ ಅಧ್ಯಯನವಾಗುತ್ತದೆ. ಹಲವಾರು ದಿಕ್ಕುಗಳಲ್ಲಿ ಪ್ರವಹಿಸುತ್ತಿರುವ ಈ ಸಾಂಸ್ಕೃತಿಕ ಅಧ್ಯಯನ ಅಗತ್ಯವಾಗಿ ಜರುಗಬೇಕಾದ ಕಾರ್ಯವಾಗಿದೆ. (ನಾಗರೀಕತೆಯ ದಬ್ಬಾಳಿಕೆ, ಗ್ರಾಮೀಣ ಪರಿಸರದ ಮೇಲೆ ಮಾಡುತ್ತಿರುವ ಸವಾರಿ, ಅದ್ದರಿಂದ ಪರಂಪರೆಯ ನಾಶ, ಸಂಸ್ಕೃತಿಯ ಮೇಲಿನ ಕೊಡಲಿಪೆಟ್ಟುಗಳ ದೃಷ್ಟಿಯಿಂದ 'ಮುತ್ತತ್ತಿ' ಕುರಿತ ಸಾಂಸ್ಕೃತಿಕ ಅಧ್ಯಯನ] ಮಹತ್ವವನ್ನು ಪಡೆದುಕೊಂಡಿದೆ.

## ಅಡಿಟಿಪ್ಪಣಿ

೧. ಮುತ್ತುರಾಜು, ಮುತ್ತತ್ತಿಯ ತಾಮ್ರಶಾಸನ, ಇತಿಹಾಸದರ್ಶನ, ಸಂಪುಟ-೯ ಪುಟ-೩೬, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು. ೧೯೯೪.

೨. ಮುತ್ತುರಾಜು, ಮುತ್ತತ್ತಿಯ ಜನಪದ ಐತಿಹ್ಯ ಮತ್ತು ಐತಿಹಾಸಿಕತೆ, ಸತ್ಯಶುದ್ಧಕಾಯಕ, ಸಂಪುಟ-೫, ಸಂಚಿಕೆ-೧, ಪುಟ-೬೨, ಶ್ರೀಜಗದ್ಗುರು ಮುರುಘ ರಾಜೇಂದ್ರ, ವಿದ್ಯಾಪೀಠ, ಶ್ರೀ ಬೃಹನ್ಮಠ, ಚಿತ್ರದುರ್ಗ.

೩. ಎದುರ್ಕಳ.ಕೆ.ಶಂಕರನಾರಯಣಭಟ್, ಶ್ರೀಕಾವೇರಿ ವೈಭವ, ಪುಟ-೪, ಶ್ರೀರಾಮಕೃಷ್ಣ ಪ್ರಕಾಶನ, ಭಾಗಮಂಡಲಪೋಸ್ಟ್, ಕೊಡಗುಜಿಲ್ಲೆ, ೧೯೭೮

೪. ಮಂಡ್ಯ ಜಿಲ್ಲೆ ಗ್ಯಾಸೆಟಿಯರ್, ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ, ಪುಟ-೯೫೬, ೨೦೦೩

೫. ಗೋವಿಂದರಾಜು.ಟಿ. ಜಾನಪದ ಅಧ್ಯಯನದ ಒಂದು ಘಟಕವಾಗಿ-ಹಳ್ಳಿ, ಜಾನಪದ ವೈಜ್ಞಾನಿಕದ ಅಧ್ಯಯನದ ನೆಲೆಗಳು, ಪುಟ-೮೮, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು-೧೯೯೦

೬. ಪೂರ್ವೋಕ್ತ, ಪುಟ-೯೨, ೯೩

೭ ಅಲ್ಲೇ, ಪುಟ-೯೨, ೯೩

೮. ಜಾನಪದ ಕೈಪಿಡಿ, ಪುಟ-೩೨೯, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೯. ೧೦. ಶ್ರೀಲಕ್ಷ್ಮಣ್ ತೆಲಗಾವಿ, ಜನಪದ ವೀರಸಾಹಿತ್ಯ ಚಾರಿತ್ರಿಕ ವಿವೇಚನೆ, ಹರತಿಸಿರಿ, ಪುಟ-೯೭೧, ೯೭೨, ಹರತಿ, ೧೯೭೧

೧೧. ೧೨. ಎ.ಕ. ೫,೮ (ಹೊಸ ಆವೃತ್ತಿ) ಪುಟ-೨೩೦, ೨೩೨, ೨೪೫, ೨೯೯, ೩೧೬

೧೩. ಕಿಟೆಲ್ ಕೋಶ, ಪುಟ-೧೩೪೧

೧೪. ಮುತ್ತುರಾಜು, ಜಾನಪದರು ಕಂಡ ಮುತ್ತತ್ತಿರಾಯ ಹಾಗೂ ಮುತ್ತತ್ತಿ ಒಂದು ಟಿಪ್ಪಣಿ, ಸತ್ಯಶುದ್ಧಕಾಯಕ, ಪುಟ-೧೨೮, ಸಂಪುಟ-೪, ಸಂಚಿಕೆ೧-೪, ಸೆಪ್ಟೆಂಬರ್-೧೯೯೩

೧೫. ೧೬ ಕಿಟೆಲ್ ಕನ್ನಡ ಇಂಗ್ಲೀಷ್ ನಿಘಂಟು, ಸಂಪುಟ-೩, ಪುಟ-೧೩೪೧

೧೭. ೧೮. ಸಸ್ಯಸಂಪುಟ, ಪುಟ-೫೯೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೧೯. ಕಿಟೆಲ್‌ರ ಕನ್ನಡ ಇಂಗ್ಲೀಷ್ ನಿಘಂಟು, ಸಂಪುಟ-೧, ಪುಟ-೪೮

೨೦. ಸಸ್ಯಸಂಪುಟ, ಪೂರ್ವೋಕ್ತ ಪುಟ-೩೧೭, ೨೦೦೧

೨೧. ಕಿಟೆಲ್‌ರ ಪೂರ್ವೋಕ್ತ ಸಂಪುಟ-೩, ಪುಟ-೧೩೪೧

೨೨. ಡಾ.ಜಿ.ವಿ.ದಾಸೇಗೌಡ, ಮಂಡ್ಯ ಜಿಲ್ಲೆಯ ಜಾತ್ರೆಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪುಟ-೮೭, ೨೦೦೦

೨೩. ೨೪. ಕನ್ನಡ ಕನ್ನಡ ನಿಘಂಟು, ಸಂಪುಟ-೭, ಕನ್ನಡ ಸಾಹಿತ್ಯ ಪರೀಷತ್ತು, ಪುಟ-೭೪೨, ೧೯೯೩

೨೫. ಪ್ರೊ.ಎಸ್.ಕೆ.ರಾಮಚಂದ್ರರಾವ್, ಮೂರ್ತಿಶಿಲ್ಪ ನೆಲೆ ಮತ್ತು ಹಿನ್ನೆಲೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ಪುಟ-೨೨೩, ೧೯೭೫

೨೬. ೨೭.ಹಂಪಿಜಾನಪದ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ಪುಟ-೪೧,೧೯೯೬

೨೮.೨೯.ಪ್ರೊ.ಎಸ್.ಕೆ.ರಾಮಚಂದ್ರರಾವ್, ಪೂರ್ವೋಕ್ತ, ಪುಟ-೨೨೩, ೧೯೭೫

೩೦.ಡಾ.ಪುರುಷೋತ್ತಮ, ಬಿಳಿಮಲೆ ಮತ್ತು ಚೆಲುವರಾಜು, ಹಂಪಿಜಾನಪದ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೬೬,೭೬, ೧೯೯೬

೩೧.ಅಲ್ಲೇ ಪುಟ-೪೦

೩೨.ಪ್ರೊ.ಎಸ್.ಕೆ.ರಾಮಚಂದ್ರರಾವ್, ಪೂರ್ವೋಕ್ತ, ಪುಟ-೨೨೩

೩೩.ಮಧುಸೂದನ ಕೃಷ್ಣರಾವ್ ಜವಳಿ, ಹಂಪಿ ಪರಂಪರೆ, ಶ್ರೀ ವಿದ್ಯಾವಿಜಯನಗರ, ಹಂಪಿ, ಹೆರಿಟೇಜ್ ಟ್ರಸ್ಟ್, ಆನೆಗೊಂದಿ, ಹೊಸಪೇಟೆ, ಪುಟ-೩೪, ೧೯೯೬

೩೪.ಡಾ.ಎಚ್.ತಿಪ್ಪೇರುದ್ರಸ್ವಾಮಿ, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ. ಪಬ್ಲಿಕೇಷನ್, ಪುಟ-೬ ೧೯೮೫

೩೫.ಜಾನಪದ ಕೈಪಿಡಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪುಟ-೫೧೧, ೨೦೦೦

## ಅಧ್ಯಾಯ-೧

## ಮುತ್ತತ್ತಿಯ ಪ್ರಮುಖ ಐತಿಹಾಸಿಕ ಆಧಾರಗಳು

ಪ್ರಾಗೈತಿಹಾಸಿಕ ಕಾಲದ ಶಿಲಾ ಆಯುಧಗಳು, ಗುಹಾ ಚಿತ್ರಗಳು, ಮಣ್ಣಿನ ಮಡಿಕೆಯ ಚೂರುಗಳೂ, ಶಿಲಾ ಸಮಾಧಿಗಳು, ಲೋಹಗಳ ಆಯುಧಗಳು, ಅಲಂಕಾರಿಕ ವಸ್ತುಗಳಾದ ಮಣಿ, ಸರಗಳು ಇತ್ಯಾದಿ. ಬರವಣಿಗೆಯನ್ನುಳ್ಳ ಶಿಲಾಶಾಸನ, ತಾಮ್ರಶಾಸನ, ಲೋಹದ ವಸ್ತುಗಳ ಮೇಲಿನ ಶಾಸನಗಳು, ವೀರಗಲ್ಲು, ಮಾಸ್ತಿಕಲ್ಲುಗಳು, ವಾಸ್ತುಶಿಲ್ಪ, ಮೂರ್ತಿಶಿಲ್ಪಗಳು, ತಾಳೆಗರಿಯ ಹಸ್ತಪ್ರತಿ, ನಾಣ್ಯಗಳು ಇವೇ ಮುಂತಾದವನ್ನು ಚರಿತ್ರೆಯ ಆಕರಗಳು ಎಂದು ಇತಿಹಾಸಕಾರರು ಪರಿಗಣಿಸಿದ್ದಾರೆ. ಅಲ್ಲದೇ ಇತ್ತೀಚಿಗೆ 'ಜಾನಪದ ಪುರಾತತ್ವ' ಎಂಬ ಶಾಸ್ತ್ರ ವಿಭಾಗದಿಂದ, ಐತಿಹ್ಯ ಪುರಾಣ, ಕಥೆ, ಗೀತೆ, ಒಗಟು, ಗಾದೆ, ನಾನ್ನುಡಿಗಳ ಆಧಾರಗಳನ್ನು ಪಡೆದುಕೊಂಡು ಪ್ರಾಚೀನ ಇತಿಹಾಸವನ್ನು ಕಟ್ಟುವ ಶಾಸ್ತ್ರೀಯ ಕಾರ್ಯವು ನಡೆಯುತ್ತಿದೆ. ಈ ನಿಟ್ಟಿನಲ್ಲಿ ಇತಿಹಾಸಕಾರರು ಆಧಾರರಹಿತವಾದದ್ದು ಎಂದು ಕೈಬಿಟ್ಟು ಕುಳಿತ್ತಿದ್ದ ಎಷ್ಟೋ ಮಹಾತ್ಮರ, ದೈವಗಳ, ಪುಣ್ಯಕ್ಷೇತ್ರಗಳ, ನಾಯಕರ ಚರಿತ್ರೆಗಳು ಹೊರಬರಲು ಸಾಧ್ಯವಾಯಿತು.

'ಮುತ್ತತ್ತಿ'ಯ ಕ್ಷೇತ್ರದ ಇತಿಹಾಸವನ್ನು ಹೀಗೆ ಎಂದು ಪ್ರಾರಂಭದಿಂದ ಯಾರು ಸಹ ದಾಖಲಿಸಿಕೊಂಡು ಬಂದಿಲ್ಲ. ಇಲ್ಲಿನ ಸಾಂಸ್ಕೃತಿಕತೆಯ ಉಗಮ ಬೆಳವಣಿಗೆ ಬಗ್ಗೆ ನಡೆದ ಎಷ್ಟೋ ಪ್ರಮುಖ ಐತಿಹಾಸಿಕ ಅಂಶಗಳ ದಾಖಲೆಗಳು, ಅವಶೇಷಗಳು ಆಧಾರಗಳು ಇಲ್ಲವಾಗಿವೆ. ಇಂತಹ ಸಂದರ್ಭದಲ್ಲಿ ಕಾಲಕಾಲಕ್ಕೆ ಲಭ್ಯವಾಗಿರುವ ಇಂತಹ ಅಲ್ಪ ಆಧಾರಗಳನ್ನೆ ದೃಷ್ಟಿಯಲ್ಲಿಟ್ಟುಕೊಂಡು ಮುತ್ತತ್ತಿಯ ಪ್ರಮುಖ ಐತಿಹಾಸಿಕ ಆಧಾರಗಳಿಂದ 'ಮುತ್ತತ್ತಿ'ಯ ಚಾರಿತ್ರಿಕ ಬೆಳವಣಿಗೆಯ ಸಾಂಸ್ಕೃತಿಕತೆಯನ್ನು ನೋಡಬಹುದು.

ಮುತ್ತತ್ತಿಯ ಪ್ರಮುಖ ಐತಿಹಾಸಿಕ ಆಧಾರಗಳೆಂದರೆ :-

೧. ಪ್ರಾಗೈತಿಹಾಸಿಕ ಕುರುಹುಗಳು
೨. ಇತಿಹಾಸ
೩. ವೀರಗಲ್ಲುಗಳು

೪. ತಾಮ್ರಶಾಸನ
೫. ಮೂರ್ತಿಶಿಲ್ಪ, ವಾಸ್ತುಶಿಲ್ಪ
೬. ಜನಪದ, ಐತಿಹ್ಯ, ನಿರುಕ್ತಿ, ಮಹಾಕಾವ್ಯ, ಗೀತೆ

ಇವುಗಳನ್ನು ಕುರಿತು ಆಯಾ ಉಪ ಅಧ್ಯಾಯದೊಳಗೆ ಚರ್ಚಿಸಲಾಗಿದೆ. ಅಪಾರವಾದ ಆಧಾರಗಳು ಈ ಕುರಿತು ಲಭ್ಯವಾಗಿವೆ. ಮುತ್ತತ್ತಿ ಸುತ್ತಮುತ್ತಲ ಪ್ರದೇಶವು ಪ್ರಾಗೈತಿಹಾಸಿಕ ಕಾಲದಿಂದ ಇಂದಿನವರೆಗೂ ಶಾಕ್ತ, ಜೈನ, ಶೈವ, ವೈಷ್ಣವ ದೇವರುಗಳ ಆರಾಧನಾ ಸ್ಥಳವಾಗಿದೆ. ಹಲಗೂರಿನ ಕರೆಯ ಬಳಿ ಮತ್ತು ಕನಕಪುರ ತಾಲ್ಲೂಕಿನ ಹಲಸೂರುಗಳಲ್ಲಿ ಸೂರ್ಯನ ಆರಾಧನೆಯೂ ಸಹ ನಡೆಯುತ್ತಿದ್ದಿತು ಎಂಬುದಕ್ಕೆ ಸೂರ್ಯನ ಮೂರ್ತಿಗಳು ದೊರಕಿವೆ. "ಬಸವನ ಬೆಟ್ಟ ಅರಣ್ಯದಲ್ಲಿ 'ಓರೆಗಲ್ಲು' ಎಂಬ ಪಟ್ಟಣವಿದ್ದು, ಈ ಪ್ರದೇಶದ ಬಗ್ಗೆ ವಿಫುಲ ಆಧಾರಗಳನ್ನು ಒದಗಿಸಿಕೊಡುತ್ತದೆ. ಈ ಓರೆಗಲ್ಲು ಇಂದು ಬಸವನ ಬೆಟ್ಟದ ಬಯಲಾಗಿದೆ. ಈ ವೃಷಭಾದ್ರಿ ಮತ್ತು ಹಲಗೂರು ಬೃಹನ್ಮಠದ ಸಂಬಂಧ ಪ್ರಕಾರಣವನ್ನು ಗಮನಿಸಿದರೆ ಹನ್ನೊಂದನೆ ಶತಮಾನದ ಹಿಂದೆ ಈ ವೃಷಭಾದ್ರಿಯ ಬಳಿ ನಗರ ಒಂದು ಇದ್ದಂತೆ ಕಾಣಬರುತ್ತದೆ. ಅದೇ ಓರುಗಲ್ಲು, ಓರಿದಕಲ್ಲು, ಓರೆಯಾದ ಕಲ್ಲು ಎಂಬುದು ಓರೆಗಲ್ಲು ಆಗಿ ಕಾಲಕ್ರಮೇಣ 'ಓರೆಗಲ್ಲು' ಎಂದು ಆಗಿರುವುದೇ ತಳದಲ್ಲಿ ಎರಡು ಕಲ್ಲುಗಳು ಓರಿಡುತ್ತವೆ. ಅದರ ಮೇಲೆ ಶಿವಯೋಗ ಮುದ್ರಾಸೀನನಾಗಿ ಮಂಡಿಸಿದ್ದ ಶಿವಯೋಗಿಯನ್ನು ಕಂಡ ಪರಿಣಾಮವಾಗಿ ಆ ಬಳಿಯ ನಗರಕ್ಕೆ ಓರುಗಲ್ಲು ಎಂದು ನಾಮಕರಣ ಮಾಡಿದ ವೀರನೊಬ್ಬನು ಅಲ್ಲಿ ನೆಲಸಿದನು. ಆ ಕಲ್ಲಿನ ಅವಶೇಷವನ್ನು ಬಸವನ ಬೆಟ್ಟದ ಬುಡದಲ್ಲಿ ಈಗಲೂ ಕಾಣಬಹುದಾಗಿದೆ. ಬಿದರು ಬೆಟ್ಟದ ಮೇಲೆ ಎಂಬ ಪದಪ್ರಯೋಗ ಗುಂಡಬ್ರಹ್ಮಯ್ಯಗಳ ಚರಿತ್ರೆ ಎಂಬುದರಲ್ಲಿ ಉಕ್ತವಾಗಿದೆ. ಅತ್ಯಂತ ಪ್ರಾಚೀನವಾದ ಬೆಟ್ಟವು ಬಸವನ ಬೆಟ್ಟ. ಇಲ್ಲಿಯೇ ಘನಪತಿರಾಯನ ನಗರವಾದ "ಓರುಗಲ್ಲು" ಇದ್ದುದು. ಡಾ.ವಿ.ಶಿವಾನಂದರು ಸಂಪಾದಿಸಿದ ಕೃತಿಯಲ್ಲಿ ಅರಸು ಗಣಪತಿರಾಯ ಎಂದಿದೆ. ೩೧-೩-೧೯೭೩ 'ಕನ್ನಡಪ್ರಭ' ಪತ್ರಿಕೆಯಲ್ಲಿ ಶಿವನಾರಾಯಣರು ಹೊರಟರು. ಕಳುವಿಗೆ ಎಂಬ ತಮಂಪ ಮೂರ್ತಿಯವರ ಲೇಖನದಲ್ಲಿ 'ಓರುಗಲ್ಲು ಪಟ್ಟಣದ ರಾಜ ಘನಪತಿ ಎಂದು ಇದೆ. ಆದ ಕಾರಣ ಅರಸರ ಹೆಸರುಗಳು ಬೇರೆ ಬೇರೆಯಾಗಿರುವುದರಿಂದ ಗುಂಡಬ್ರಹ್ಮಯ್ಯನ ಓರುಗಲ್ಲು ಬಸವನಬೆಟ್ಟದ ಓರುಗಲ್ಲೇ ಆಗಿರುವುದರಲ್ಲಿ ಸತ್ಯ ಇಲ್ಲದೇ ಇಲ್ಲ[೧]"

ಇದಲ್ಲದೇ ಈ ಭಾಗದಲ್ಲಿರುವ ಪ್ರಮುಖ 'ಕುಪ್ಪೆದೊಡ್ಡಿ' ಎಂಬ ಪ್ರಾಗೈತಿಹಾಸಿಕ ಮತ್ತು ಕಬ್ಬಿಣದ ಕುಲುಮೆ ಇದ್ದ ಜಾಗದ ಉಲ್ಲೇಖ ಹೀಗಿದೆ. "ಕುಪ್ಪೆ ಮಾಡಿದ ಜಾಗ ಕುಪ್ಪೆದೊಡ್ಡಿ ಆಗ್ತೈತೆ। ಕುಲ್ಮೆ ಇದ್ದ ಜಾಗ ಆಲದ ಮರ ಕಿಟ್ಟಾಗ್ತೈತೆ[2]"

ಈ ಸ್ಥಳದಲ್ಲಿ ಕನ್ನಗತ್ತರಿಯನ್ನು ತಯಾರಿಸಿದರು ಎಂಬ ಉಲ್ಲೇಖವಿದ್ದು ಇಲ್ಲಿ ಹೆಬ್ಬೆಟ್ಟರಾಯನ ಪಾದ ಎಂಬ ವೃತ್ತಾಕಾರದ ಪೀಠದೊಳಗೆ ಜೋಡಿ ಪಾದುಕೆಗಳೂ ಇವೆ. ಇವುಗಳಲ್ಲಿ ಉಂಗುಷ್ಟಗಳೂ ಸಹ ಇದ್ದು ಇಲ್ಲಿನ ಶೈವಸಂಸ್ಕೃತಿಗೆ ಕುರುಹು ಆಗಿದೆ. ಇಲ್ಲಿಯೇ ಲಿಂಗದಗುಡಿ ಎಂಬ ಶೈವಧರ್ಮ ದೇವಾಲಯವಿದ್ದು ಇದರ ಉಲ್ಲೇಖವು ಪಂಡಿತ.ಮ.ಮಲ್ಲಪ್ಪರವರು ಹೀಗೆ ಮಾಡಿದ್ದಾರೆ. "ಲಿಂಗದ ಮಂಟಪವು ಹರಿಹರದಿಂದ ದಕ್ಷಿಣಕ್ಕೆ ಸುಮಾರು ಹನ್ನೆರಡು ಫರ್ಲಾಂಗು ದೂರವಿರುವ ಕುಪ್ಪೇದೊಡ್ಡಿಯ ಆಗ್ನೇಯ ದಿಕ್ಕಿನಲ್ಲಿ ಬೋಳೇಗೌಡನ ಹೊಲದಲ್ಲಿ ಇದೆ. ಇದರ ಹಿಂದೆ ಕುಂಟೆಯೊಂದು ಇದೆ. ಇಲ್ಲಿಂದ ಪಕ್ಕದ ಹೊಲಕ್ಕೆ ಲಿಂಗದಕಲ್ಲು ಸ್ಥಳಾಂತರವಾಗಿದೆ. ಈ ಮಂಟಪದಲ್ಲಿ ಗುಂಡಬ್ರಹ್ಮಯ್ಯನು ಜಂಗಮ ಸಂತರ್ಪಣೆ ಸಾಗಿಸುತ್ತಿದ್ದನು[3]"

ಪಂಡಿತ ಮ.ಮಲ್ಲಪ್ಪರವರು ಲಿಂಗದ ಮಂಟಪವನ್ನು ಮಾತ್ರ ಗಮನಿಸಿ ಅದರ ಉಲ್ಲೇಖ ಮಾಡಿದ್ದರೂ ಬಳಿಯಲ್ಲಿಯೇ ಇರುವ ಶಿವದೇವಾಲಯದ ಗಣನೆಯನ್ನು ಮಾಡಿಲ್ಲ. ದೇವಾಲಯದ ಕಟ್ಟಡದ ಚಪ್ಪಡಿಕಲ್ಲುಗಳು, ತೊಲೆಗಂಬಗಳು, ಭುವನೇಶ್ವರ ಹಾಗೂ ಅಲಂಕಾರಯುಕ್ತ ದ್ವಾರಕಂಬಗಳು ಇಲ್ಲಿದ್ದು ಈ ಸ್ಥಳ ಪ್ರಾಚೀನ ಶೈವ ಸ್ಥಳವಾಗಿದ್ದಿತು ಎಂಬುದು ಸಾಬೀತಾಗುವಂತಾಗಿದೆ. ಬಳಿಯಲ್ಲಿಯೇ ಶ್ರವಣನ ಒಡ್ಡು ಎಂಬ ಜೈನಸ್ಥಳವು ಇದ್ದು ಜಿನಮೂರ್ತಿ ಮತ್ತು ಪೀಠದ ಅವಶೇಷವಿದೆ.

ಪಂಡಿತ ಮ.ಮಲ್ಲಪ್ಪರವರು ಉಲ್ಲೇಖಿಸಿರುವ ಇನ್ನಿತರ ಸ್ಥಳಗಳು. "ಕೊಂಬಿನ ಆಣೆ ಎಂಬ ಬೀಳು ಪ್ರದೇಶವು ಬಸವನ ಬೆಟ್ಟದ ಬುಡದಲ್ಲಿದೆ. ಅರಸು ಘನಪತಿ ಕೊಂಬಿನ ಕಹಳೆ ಊದಿದ ಜಾಗವಿದು[4]"

"ಪ್ಯಾಜೆಪಂಜು, ಇಂದಿನ ಕುಪ್ಪೆದೊಡ್ಡಿಯಿಂದ ದಕ್ಷಿಣದ ದಾರಿಯಲ್ಲಿ ಇದು ಇದೆ. ಓರುಗಲ್ಲು ಆಡಳಿತ ಕಾಲದಲ್ಲಿ ಈ ರಾಜ ಮತ್ತು ಹೊರಗಿನ ಅರಸು ಇಲ್ಲಿ ಪರಸ್ಪರ ಬೇಟೆಯಾಗುತ್ತಿದ್ದರು. ನಗರದ ವ್ಯಾಪಾರ ವಹಿವಾಟೆಲ್ಲವೂ ಇಲ್ಲಿಯೇ ಮೈಗೂಡಿತ್ತು[೫]"

"ಹರಿಹರವು ಕನಕಪುರ ಮಾರ್ಗ ಮೈಸೂರು ರಸ್ತೆಯಲ್ಲಿನ ಹೊನಗನಹಳ್ಳಿಯ ಎಡಗಡೆ ಇದೆ. ವಿಶ್ವಬ್ರಹ್ಮಯ್ಯನು ಕನ್ನಗತ್ತರಿಯಾ ತಯಾರಿಸಿ ಅದನ್ನು ಕೈಗೆ ತೆಗೆದುಕೊಂಡು ಶಿವನಾರಾಯಣನಿಗೆ ಕೊಟ್ಟ ಜಾಗವಿದು.[೬]"

ಈ ಓರುಗಲ್ಲು ಸೂರೆ ಕಾವ್ಯದ ಚಾರಿತ್ರಿಕತೆ, ಶರಣರ ಕಾಲದ್ದಾದ್ದರಿಂದ ಇದು ಶರಣ ಕಾಲದ ವಚನ ಚಳುವಳಿಯ ಹಂತದಲ್ಲಿ ಈ ಬಸವನ ಬೆಟ್ಟದ ಅರಣ್ಯದಲ್ಲಿ ನಡೆದ ಧಾರ್ಮಿಕ ಸಾಂಸ್ಕೃತಿಕ ದಾಖಲೆ ಇದಾಗಿದೆ. ಈ ದಿಶೆಯಲ್ಲಿ ಹೆಚ್ಚಿನ ಬೆಳಕು ಆಗಬೇಕಾಗಿದೆ. ಈ ಕಾವ್ಯದಲ್ಲಿ ಮುತ್ತತ್ತಿ ಬಳಿಯ ಕಾವೇರಿ ನದಿಯ ತಿರುಗಣೆ ಮಡುವಿನ ಉಲ್ಲೇಖ ಅತ್ಯಂತ ಮಹತ್ವದ್ದಾಗಿದೆ.

ಜನಪದ ಮಹಾಕಾವ್ಯಗಳಲ್ಲಿ ಒಂದಾದ 'ಮಂಟೇಸ್ವಾಮಿ'ಗೆ ಸಂಬಂಧಿಸಿದ ಈವರೆಗೆ ಪ್ರಕಟಿತ ಮೂರು ಭಿನ್ನ ಪಾಠಾಂತರದಲ್ಲೂ ಸಿದ್ಧಾಪ್ಪಾಜಿ ಮತ್ತು ಮುತ್ತತ್ತಿರಾಯನನ್ನು ಬಾಂಧವರಂತೆ ಗೆಳೆಯರಂತೆ ಬಣ್ಣಿಸಿ ಕಾವ್ಯ ರಚಿಸಲಾಗಿದೆ. ಮುತ್ತತ್ತಿರಾಯನಾದ ಆಂಜನೇಯನು ತ್ರೇತಾಯುಗದ ವ್ಯಕ್ತಿಯಾದರೆ, ಸಿದ್ಧಾಪ್ಪಾಜಿ ಕ್ರಿ.ಶ.ಸುಮಾರು ೧೫ನೇ ಶತಮಾನದ ಆಸುಪಾಸಿನವನು. ಈ ವರ್ಣನೆಗಳಲ್ಲಿ ೧೫ನೇ ಶತಮಾನದಲ್ಲಿ ವೈಷ್ಣವಧರ್ಮದ ಮುತ್ತತ್ತಿರಾಯನಿಗೂ ಶೈವಧರ್ಮದ ಸಿದ್ಧಾಪ್ಪಾಜಿಗೂ ಕಲ್ಪಿಸಿರುವ ಸಂಬಂಧದಿಂದ ಆ ಕಾಲದ ಜನಪದ ಭಕ್ತರು ಎರಡೂ ಧರ್ಮಗಳ ಸಮಾನ ಆರಾಧನಾ ಮಾರ್ಗಗಳನ್ನು ಅನುಸರಿಸುತ್ತಿದ್ದರು ಎಂದಿಟ್ಟು ಕೊಳ್ಳಬಹುದು. ಈ ಕಾವ್ಯಗಳಿಂದ ಮುತ್ತತ್ತಿರಾಯನ ಮೂಲ ಗುಡಿ, ಅವನ ನಾಮ, ಸಾಹಸ, ಚರಿತ್ರೆ, ನೆಲೆಗೊಂಡ ಬಗೆ, ಭಂಗಿಸೇವನೆ, ಆರಾಧನೆಗಳನ್ನು ತಿಳಿದುಕೊಳ್ಳಬಹುದು. ಮುಖ್ಯ ಆಕರಗಳಾಗಿ ಈ ಕಾವ್ಯದ ಭಿನ್ನ ಪಾಠಾಂತರಗಳು ಜಾನಪದ ಐತಿಹಾಸಿಕ ಆಧಾರಗಳಾಗಿ ಲಭ್ಯವಾಗಿವೆ.

ಸಮಕಾಲೀನ ಜನಪದ ಗೀತೆಗಳು ಸಾಕಷ್ಟು ಪ್ರಾದೇಶಿಕ, ಐತಿಹಾಸಿಕ, ಧಾರ್ಮಿಕ, ಸಾಮಾಜಿಕ ಜನಾಂಗಿಯ ವಿಷಯಗಳನ್ನು ತಿಳಿಸಿದರೂ ಇವುಗಳ ಪಲ್ಲವಿಗಳು ಸಾಮಾನ್ಯವಾಗಿ ಈ ಭಾಗದ ಎಲ್ಲಾ ದೇವರುಗಳಿಗೆ ಸಂಬಂಧಿಸಿದುದಾಗಿವೆ. ಕೆಲವು ವೇಳೆ ಮುತ್ತತ್ತಿಯ ಜನಪದ ಗೀತೆಯನ್ನು ಬೇರೆ ದೇವತೆಗೂ ಸಮೀಕರಿಸಿ ಹಾಡಿರುವುದುಂಟು.

**"ಮುತ್ತತ್ತಿಚೆಂದ ಮೂಡಬಾಗಿಲು ಚಂದ**
**ಉಕ್ಕಿ ಬರುವ ಹೊಳೆ ಚಂದ । ಬೆಟ್ಟದವ್ವ**
**ನಿನ್ನೆ ಒಪತ್ತಿನ ಪೂಜೆ ಬಲು ಚಂದಾ**
**ಹಾದೀಲಿ ಹರಿಹರ ಬೀದೀಲಿ ಬೂಹಳ್ಳಿ**
**ಆದರಕ್ಕೆ ಹುಬ್ಬದ ಹಲಗೂರು । ಹೆಣ್ಣೈಕ**
**ಕಲ್ಲೋಡ್ಡಿ ಕೈಯ ಮುಗುದಾರೋ [2]"**

ಎಚ್ಚರದಿಂದ ಇಂತಹ ಗೀತೆಗಳನ್ನು ವಿಂಗಡಿಸಿ ಮುತ್ತತ್ತಿಗೆ ಅನ್ವಯವಾಗುವುದನ್ನು ತೆಗೆದುಕೊಂಡು ಅಧ್ಯಯನ ಮಾಡುವ ಅಗತ್ಯವಿದೆ. "ನಿಸರ್ಗದ ಜೀವನವು ಐತಿಹಾಸಿಕವಾದುದಲ್ಲ. ಆದರೆ ಮಾನವನ ಬುದ್ಧಿಶಕ್ತಿಯು ನಿಸರ್ಗವನ್ನು ಇತಿಹಾಸ ಕ್ಷೇತ್ರಕ್ಕೆ ಎಳೆದು ತರುತ್ತದೆ. ಉರುಳಿ ಹೋಗುತ್ತಿರುವ ಶತಮಾನಗಳೊಂದಿಗೆ ಒಂದು ನದಿಯು ಒಂದು ಕಣಿವೆಯಲ್ಲಿ ಹರಿಯುತ್ತಾ ಬರುತ್ತಿದ್ದರೂ ಅಲ್ಲಿ ಚರಿತ್ರೆಯಲ್ಲಿರುವುದಿಲ್ಲ. ನಿಸರ್ಗದಲ್ಲಿ ಸಂಭವಿಸುವ ಘಟನೆಗಳು ಕೆಲವು ಚಿಂತನಶೀಲ ವ್ಯಕ್ತಿಗಳ ಆಲೋಚನೆಗಳಿಗೆ ತುತ್ತಾಗಿ ಅವರ ಕ್ರಿಯೆಗಳ ಮೂಲಕ ವ್ಯಕ್ತವಾದಾಗ ಪ್ರಕೃತಿಯನ್ನು ಕುರಿತು ಇತಿಹಾಸ ಹುಟ್ಟುತ್ತದೆ[3]"

ಮುತ್ತತ್ತಿಯ ಇತಿಹಾಸಕ್ಕೂ ಸಹ ಈ ಮೇಲಿನ ಹೇಳಿಕೆ ಹೊಂದಿಕೊಂಡಿದೆ. ಮೇಲಿನ ಎಲ್ಲಾ ಆಧಾರಗಳು ಮುತ್ತತ್ತಿಯ ಐತಿಹಾಸಿಕತೆ ಹಾಗೂ ಸಾಂಸ್ಕೃತಿಕತೆಯನ್ನು ನಿರ್ಧರಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ.

## ೧.೧ ಪ್ರಾಗೈತಿಹಾಸಿಕ ಕುರುಹುಗಳು

ಕರ್ನಾಟಕದ ಇತರ ಭಾಗಗಳಂತೆ ಮಂಡ್ಯ, ರಾಮನಗರ, ಚಾಮರಾಜನಗರ ಮತ್ತು ಮೈಸೂರು ಜಿಲ್ಲೆಗಳು ಸಹ ಪ್ರಾಗೈತಿಹಾಸಿಕ ಮಾನವರ ವಾಸಸ್ಥಳಗಳಾಗಿದ್ದವು. ಕಾರಣ ವಿಪುಲ ಜಲಸಂಪತ್ತು, ಅರಣ್ಯಸಂಪತ್ತು, ವಾಸಯೋಗ್ಯಸ್ಥಳಗಳು, ಆಹಾರದ ಲಭ್ಯತೆ ಈ ಜಿಲ್ಲೆಗಳಲ್ಲಿ ಪ್ರಾಗೈತಿಹಾಸಿಕ ಕಾಲದ ಎಲ್ಲ ಹಂತಗಳಾದ ಆದಿಶಿಲಾಯುಗ, ಸೂಕ್ಷ್ಮಶಿಲಾಯುಗ, ನವಶಿಲಾಯುಗ ಹಾಗೂ ಬೃಹತ್ ಶಿಲಾಯುಗಗಳಿಗೆ ಸಂಬಂಧಿಸಿದ ಅವಶೇಷಗಳು ಬೆಳಕಿಗೆ ಬಂದಿವೆ. ಬಸವನಬೆಟ್ಟ ಅರಣ್ಯವ್ಯಾಪ್ತಿಯಲ್ಲಿ ಬರುವ ಮುತ್ತತ್ತಿಯು ಕಾವೇರಿ ನದಿಯ ದಂಡೆಯ ಮೇಲೆ ಆಯಕಟ್ಟಿನ ಸ್ಥಳದಲ್ಲಿರುವುದರಿಂದ ಪ್ರಾಗೈತಿಹಾಸಿಕ ಮಾನವನ ಒಡನಾಟ ಸಹಜವಾಗಿಯೇ ಇದ್ದಿತು. ದೇವಾಲಯದ ಎದುರುಗಿರುವ ಬೆಟ್ಟದ ತುತ್ತತುದಿಯಲ್ಲಿನ ಬಂಡೆಯ ಎಡಮಗ್ಗುಲಿನಲ್ಲಿ 4x4 ಅಡಿ ಅಳತೆಯ ಕಲ್ಲಾಸರೆ, ಇದರಿಂದ ಸ್ವಲ್ಪ ಕೆಳಗೆ ತ್ರಿಕೋನಾಕಾರದ ನೈಸರ್ಗಿಕ ಕಲ್ಲಾಸರೆಗಳು, ಇನ್ನು ಸ್ವಲ್ಪ ಕೆಳಗೆ ಓರ್ವನು ನುಸುಳುವಂತಹ ಕಲ್ಲಾಸರೆ ಇದೆ. ಇಲ್ಲಿ ತುಂಡು ಕಲ್ಲುಗಳನ್ನು ಗುಹೆಯ ಇಕ್ಕೆಲಗಳಲ್ಲೂ ಇರಿಸಿದ್ದು, ಈಗ ಅದೆಲ್ಲಾ ಚದುರಿಹೋಗಿದೆ. ಈ ಕಲ್ಲಾಸರೆಯ ಉತ್ತರಕ್ಕೆ ಮುಖಮಾಡಿರುವಂತೆ ಮತ್ತೊಂದು ವಿಶಾಲವಾದ ಕಲ್ಲಾಸರೆ ಇದ್ದು ಅಲ್ಲಿ ಸೂಕ್ಷ್ಮಶಿಲಾಯುಗದ (ಕಾಲ.ಕ್ರಿ.ಪೂ.ಸುಮಾರು ೧೦,೦೦೦ದಿಂದ ಕ್ರಿ.ಪೂ.೩,೦೦೦) ಪುಟ್ಟ ಪುಟ್ಟ ಕತ್ತರಿಸುವ, ಎರೆಯುವ ಕೊಲ್ಲುವ ಆಯುಧಗಳು ಲಭಿಸಿವೆ. ಇಲ್ಲಿಯೇ ಮಾನವರು ಕುಳಿತುಕೊಳ್ಳಲು ಕಲ್ಲುಗಳ ಜೋಡಣೆಯನ್ನು ಮಾಡಿಕೊಂಡಿದ್ದಾರೆ. ಇಲ್ಲಿ ವಿವಿಧ ಬಗೆಯ ಮಣಿಗಳು ಲಭ್ಯವಾಗಿದ್ದು ಸ್ಥಳೀಯರು ಸಂಗ್ರಹಿಸಿದ್ದಾರೆ.

"ಮುತ್ತತ್ತಿ ದೇವಾಲಯದ ಎದುರಿಗೆ ಇರುವ ಪುಟ್ಟಗುಡಿ" ಯೊಂದರಲ್ಲಿ ತ್ರಿಕೋನಾಕಾರದ ಕರಿಯ ಕಲ್ಲಿನ ನವಶಿಲಾಯುಗಕ್ಕೆ ಸಂಬಂಧಿಸಿದ ಎರಡು ಕೈಗೊಡಲಿಗಳನ್ನು ಇರಿಸಲಾಗಿದೆ. ಹತ್ತು ಸೆಂ.ಮೀ.ಎತ್ತರದ ಇವುಗಳು ಮುತ್ತತ್ತಿ ಪ್ರದೇಶದಲ್ಲಿ ನವಶಿಲಾಯುಗ ಮಾನವರ (ಕಾಲ ಕ್ರಿ.ಪೂ.ಸು.೩,೦೦೦) ಚಟುವಟಿಕೆಯ ಕುರುಹುಗಳಾಗಿವೆ. ಕಾವೇರಿ ತೀರದ ಈ ಪ್ರದೇಶದಲ್ಲಿ ಅಲ್ಲಲ್ಲಿ ಕಿರು ಉತ್ಖನನಗಳನ್ನು ಕೈಗೊಂಡ ಪುರಾತತ್ವ ಇಲಾಖೆಗೆ ಹಲವಾರು ನವಶಿಲಾಯುಗದ ಆಯುಧಗಳು ಲಭ್ಯವಾಗಿವೆ.

ಮುತ್ತತ್ತಿಗೆ ಕೆಲವೇ ಕಿ.ಮೀ. ಇರುವ ಸಂಬಾಪುರದ ಬಳಿಯ ಬ್ಯಾಟರಾಯನಗುಡಿಯ ಬಳಿ "ನವಶಿಲಾಯುಗಕ್ಕೆ ಸೇರಿದ ಇಪ್ಪತ್ತೇಳು ಕೈಕೊಡಲಿ ಮತ್ತು ಕೈ ಬಾಚಿಗಳು ದೊರೆತಿವೆ. ಇವುಗಳಲ್ಲಿ ೨೬ ಆಯುಧಗಳು ಕರಿಯ ಟ್ರಾಪ್ ಕಲ್ಲಿನಲ್ಲಿ ಹಾಗೂ ಮತ್ತೊಂದನ್ನು ಗ್ರಾನೈಟ್‌ನಲ್ಲಿ ತಯಾರಿಸಲಾಗಿದೆ. ಇವುಗಳೆಲ್ಲಾ ತ್ರಿಕೋನಾಕಾರದಲ್ಲಿದ್ದು ಅಡ್ಡ ಛೇದದಲ್ಲಿ ದುಂಡು ವೃತ್ತಾಕಾರದಲ್ಲಿವೆ. ಕೆಳಗಿನ ಅಲಗು ನೇರವಾಗಿದ್ದು, ಮೇಲೆ ಹೋದಂತೆ ಸಣ್ಣದಾಗುತ್ತಾ ಚೂಪು ಮತ್ತು ಬಟ್ಟತಲೆ ಹೊಂದಿವೆ. "ಆಯುಧಗಳ ತಯಾರಿಕೆಯಲ್ಲಿ ನವಶಿಲಾಯುಗದ ಜನರು ಮಧ್ಯಶಿಲಾಯುಗ ಮತ್ತು ಆದಿ ಶಿಲಾಯುಗದ ಜನರಿಗಿಂತ ಹೆಚ್ಚು ತಾಂತ್ರಿಕತೆ ಹೊಂದಿರುವುದನ್ನು ಈ ಆಯುಧಗಳಲ್ಲಿ ಕಾಣಬಹುದಾಗಿದೆ. ಇಲ್ಲಿ ದೊರೆತಿರುವ ಆಯುಧಗಳಲ್ಲಿ ದೊಡ್ಡ ಆಯುಧವು ೮ ಅಂಗುಲ ಉದ್ದ, ೩ ಅಂಗುಲ ಅಗಲವಿದ್ದರೆ, ಅತಿ ಚಿಕ್ಕ ಶಿಲಾಯುಧ ೩ ಅಂಗುಲ ಉದ್ದ, ೨ ಅಂಗುಲ ಅಗಲವಾಗಿದೆ[೧೦]" "ಸಾತನೂರಿನ ಬಳಿಯ ಸಂಬೇಗೌಡನದೊಡ್ಡಿ ಬಳಿಯ ಹಳ್ಳ ಒಂದರಲ್ಲಿ ತ್ರಿಕೋನಾಕಾರದ ಕರಿಯಕಲ್ಲಿನ ಆಯುಧವಾದ ಕೈಕೊಡಲಿ ದೊರೆತಿವೆ. ಇದರ ಉದ್ದ ೧೨ ಅಂಗುಲ ಮತ್ತು ಅಗಲ ೪ ಅಂಗುಲವುಳ್ಳದ್ದಾಗಿದೆ[೧೧]" ಇದೂ ಸಹ ನವಶಿಲಾಯುಗಕ್ಕೆ ಸೇರಿದ ಪ್ರಾಗೈತಿಹಾಸದ ಕುರುಹು ಆಗಿದೆ.

ಇದೇ ನವಶಿಲಾಯುಗಕ್ಕೆ ಸೇರುವ ಶಿಲಾಯುಧವೊಂದು ಕನಕಪುರ ತಾಲ್ಲೂಕಿನ ನಾಯಕನಹಳ್ಳಿಯ ಮುತ್ತತ್ತಿರಾಯನ ಗುಡಿಯ ಬಳಿ ದೊರೆತಿದ್ದು ಇವೆಲ್ಲಾ ಬೃಹತ್ ಶಿಲಾಯುಗದ ನೆಲೆಯಾಗಿದ್ದವು ಎಂಬುದನ್ನು ಸಮರ್ಥಿಸುತ್ತವೆ. ಮುತ್ತತ್ತಿಗೆ ೧೦ ಮೈಲುಗಳ ಅಂತರದಲ್ಲಿರುವ ಸೂಳೆಕಲ್ ಮಠ ಎಂಬ ನೈಸರ್ಗಿಕ ಕಲ್ಲಾಸರೆ ಇದ್ದು "ಈ ಕಲ್ಲುಮನೆಯ (Rock shelter) ಒಳಭಾಗ ರೂಟ್‌ಸ್ಕ್ವೇರ್ ಆಕಾರದಲ್ಲಿದೆ. ಒಳಭಾಗದಲ್ಲಿ ಅಗಲ ೫೬ ಅಡಿಗಳು ಉದ್ದ ೨೪ ಅಡಿಗಳು ಆಗಿದ್ದು ಕಲ್ಲುಮನೆಯ ಬಲಗಡೆಯ ಮತ್ತೊಂದು ಭಾಗದ ಅಗಲ ೨೦ ಅಡಿಗಳು, ಉದ್ದ ೧೨ ಅಡಿಗಳು ಆಗಿದೆ. ಈ ಅರ್ಧಭಾಗದ ಮೇಲೆ ಒಂಭತ್ತು ಲಂಬ ರೇಖೆಗಳಿಗೆ ಮೇಲೊಂದು ಅಡ್ಡರೇಖೆಯಿಂದ ತೋರಣದ ರೀತಿಯಲ್ಲಿ ಬಿಳಿಬಣ್ಣದ ಚಿತ್ರ ಮೂಡಿಸಿದ್ದಾರೆ. ಇದು ಬಹುಶಃ ಧಾರ್ಮಿಕಾಚರಣೆಯ ನಂಬಿಕೆಯ ಸಂಕೇತವೊ ಅಥವಾ ಕುಟುಂಬವರ್ಗದ ಎಣಿಕೆಯ ಸಂಕೇತವೊ ಆಗಿರಬಹುದು. ಇದರ ಕೆಳಗಡೆಯೇ ರಂಗೋಲಿ ರೀತಿಯ ಮಂಡಲವಿದ್ದು, ಬಿಳಿಯ ಬಣ್ಣದಿಂದ ರಚಿತವಾದ ಈ ಮಂಡಲವು ದಪ್ಪರೇಖೆಗಳಿಂದ ರಚಿತವಾದುದಾಗಿದೆ.

ಅದರ ಬಳಿಯಲ್ಲಿಯೇ ಬಿಳಿಯ ಬಣ್ಣದಲ್ಲಿ ಬರೆದ ಇಬ್ಬರು ಮನುಷ್ಯರ ರೇಖಾಚಿತ್ರವಿದ್ದು ದಪ್ಪ ರೇಖೆಗಳಿಂದ ಮೂಡಿಸಿದ ಈ ಮಾನವರ ಕೈಗಳಲ್ಲಿ ಆಯುಧಗಳನ್ನು ಗಮನಿಸಬಹುದಾಗಿದೆ. ಐದು ಲಂಬರೇಖೆಗಳಿಗೆ ಒಂದು ಅಡ್ಡರೇಖೆಯನ್ನೆಳೆದಿರುವ ಮತ್ತೊಂದು ಚಿತ್ರವಿದೆ. ಪ್ರಾಣಿಯೊಂದರ ಮೇಲೆ ಕುಳಿತ ಮನುಷ್ಯನೊಬ್ಬನ ಚಿತ್ರವಿದ್ದು ಪ್ರಾಣಿಯು ತಲೆಯನ್ನು ನೆಲದ ಕಡೆಗೆ ಬಾಗಿಸಿದ್ದು ಕುದುರೆ ಎಂಬಂತೆ ಕಂಡು ಬರುತ್ತದೆ. ತುಸು ಸಣ್ಣನೆಯ ರೇಖಾಚಿತ್ರವೊಂದರಲ್ಲಿ ಮನುಷ್ಯ ತನ್ನ ಬಲಗೈಯಿಂದ ಕತ್ತಿ ಇಲ್ಲವೇ ಕೋಲನ್ನು ತನ್ನ ಶಿರೋಭಾಗದ ಮೇಲ್ಗಡೆಗೆ ಬರುವಂತೆ ಎತ್ತಿ ಹಿಡಿದಿದ್ದು ಎಡಗೈಯನ್ನು ಮುಂದೆ ಚಾಚಿದಂತಿದೆ, ಕಾಲುಗಳು ಎರಡೂ ಬದಿಗಳಿಗೂ ಚಾಚಿದಂತಿದೆ.

ಸ್ವಲ್ಪ ಮೇಲ್ಗಡೆಗೆ ಸಸ್ಯ ಒಂದರ ಚಿತ್ರವೊಂದಿದ್ದು ಲಂಬ ರೇಖೆಯೊಂದಕ್ಕೆ ಎರಡೂ ಬದಿಗಳಲ್ಲೂ ಸಣ್ಣ ಸಣ್ಣ ಅಡ್ಡರೇಖೆಗಳನ್ನೆಳೆದು ಈ ಚಿತ್ರವನ್ನು ಸಹ ಬಿಳಿ ಬಣ್ಣದಿಂದಲೇ ಮೂಡಿಸಿದ್ದಾರೆ. ಕಾಂಡದ ಭಾಗ ತುಸುದಪ್ಪವಾಗಿದ್ದು, ಬೇರುಗಳನ್ನು ಗಮನಿಸಬಹುದು. ಇನ್ನು ಸ್ವಲ್ಪ ಮೇಲ್ಗಡೆಗೆ ಪ್ರಾಣಿಯೊಂದರ ಮೇಲೆ ಕುಳಿತು ಸವಾರಿ ಮಾಡುತ್ತಿರುವ ಮಾನವನ ಚಿತ್ರವಿದೆ. ಸಸ್ಯಚಿತ್ರದ ಮೇಲ್ಭಾಗದಲ್ಲಿ ಸಣ್ಣ ಸಣ್ಣ ಬಿಂದುಗಳಿಂದು ಮೂಡಿಸಿದ ಚಿತ್ರವಿದ್ದು ಅಸ್ಪಷ್ಟವಾಗಿದೆ.

ಮತ್ತೊಂದು ಮನುಷ್ಯನ ರೇಖಾ ಚಿತ್ರದಲ್ಲಿ ಉದ್ದನೆಯ ದೇಹ, ದೇಹದ ಎರಡೂ ಬದಿಗಳಿಗೂ ಅಗಲವಾಗಿ ಚಾಚಿದ ಕೈಗಳು ಇವೆ. ಕೈಯಲ್ಲಿ ಬೆರಳುಗಳನ್ನು ಸ್ಪಷ್ಟವಾಗಿ ಮೂಡಿಸಿರುವುದು ಗಮನಾರ್ಹ. ಎಕ್ಸ್ ಆಕಾರದ ಮನುಷ್ಯನೊಬ್ಬನು ಒಂದು ಕೈಯಲ್ಲಿ ಗುರಾಣಿಯನ್ನು ಮತ್ತೊಂದು ಕೈಯಲ್ಲಿ ಕತ್ತಿಯನ್ನು ಹಿಡಿದಿರುವಂತಿದೆ. ಮುಂದೆ ಸ್ಪಷ್ಟವಿಲ್ಲದ ಕೆಲವು ರೇಖಾ ಚಿತ್ರಗಳಿದ್ದು ಅದರ ಮುಂದೆಯೇ ಮನುಷ್ಯರು ಕೈ ಕೈ ಹಿಡಿದು ನರ್ತನ ಮಾಡುವ ರೇಖಾ ಚಿತ್ರಗಳಿವೆ.

ಎರಡು ಮನೆಗಳ ಚಿತ್ರಗಳಿವೆ. ಐದು ಲಂಬ ರೇಖೆಗೆ ಕೆಳಭಾಗಕ್ಕೊಂದು ಅಡ್ಡರೇಖೆಯನ್ನೆಳೆದು ಮೇಲ್ಗಡೆಯ ಅಡ್ಡರೇಖೆಗೆ ಬದಲಾಗಿ ಸಣ್ಣ ಸಣ್ಣ ಚುಕ್ಕೆಗಳಿಂದ ಆರು ಸಾಲುಗಳನ್ನು ಮೂಡಿಸಿ, ಮೇಲೊಂದು ಕಮಾನಾಕೃತಿಯ ರೇಖೆಯನ್ನೆಳೆದು ಮನೆಯ ಚಿತ್ರವನ್ನು ಚಿತ್ರಿಸಿದ್ದಾರೆ.

ಮೇಲ್ಗಡೆ ಬೆಂಕಿಯ ಜ್ವಾಲೆ ಬುಗಿಲೆದ್ದ ರೀತಿಯಲ್ಲಿ ಚುಕ್ಕೆ ಚುಕ್ಕೆಗಳಿಂದ ಬರೆದಿದ್ದಾರೆ. ಮನೆಯ ಬಾಗಿಲು ಇದು ಎಂದು ಸೂಚಿಸುವ ಸಲುವಾಗಿಯೇ ಎಂಬಂತೆ ಎರಡನೇ ಲಂಬರೇಖೆಗೆ ತಾಗುವಂತೆ ಒಂದು ಗೆರೆಯನ್ನು ಎಳೆಯಲಾಗಿದೆ. ಮತ್ತೊಂದು ಮನೆಯ ರೇಖಾಚಿತ್ರ ಸಣ್ಣದಾಗಿದ್ದು ವಿಶೇಷವೇನೂ ಇಲ್ಲ.

ಮತ್ತೆ ಅಸ್ಪಷ್ಟವಾದ ಮನುಷ್ಯರ ಚಿತ್ರಗಳಿದ್ದು ಒಂದು ರೇಖಾಚಿತ್ರದಲ್ಲಿ ದೇಹದ ಕೆಳಭಾಗದ ಕಾಲಿನ ಭಾಗದಲ್ಲಿ ಬಲ ತೊಡೆಯ ಭಾಗದಿಂದ ಕಾಲು ಬಾಗಿದಂತಿದ್ದು ಎಡಭಾಗ ನೀಳವಾಗಿದೆ. ಪಾದಗಳು ಸ್ಪಷ್ಟವಾಗಿ ಮೂಡಿಬಂದಿದೆ. ಎರಡೂ ತೊಡೆಗಳ ಮಧ್ಯಭಾಗದಲ್ಲಿ ಶಿಶ್ನಸೂಚಕ ರೇಖೆ ಇದೆ. ಚಿಕ್ಕದಾದ ಉದರ, ಸಣ್ಣ ಕೈಗಳು ಬಾಗಿ ಶಿರೋಭಾಗ ಸಣ್ಣದಾಗಿದೆ.

ಅತೀ ಕೆಳಗಡೆ ಭೂಮಿಗೆ ತಾಗಿರುವ ಬಂಡೆಯ ಭಾಗದಲ್ಲಿ ಮೂರು ರೇಖಾಚಿತ್ರಗಳು ಸ್ಪಷ್ಟವಿದ್ದು ಎರಡು ರೇಖಾಚಿತ್ರಗಳು ಮಾನವರದಾಗಿದ್ದರೆ, ಒಂದು ಪ್ರಾಣಿಯ ಚಿತ್ರವಾಗಿದೆ. ಮಾನವನೊಬ್ಬನು ತನ್ನೇರಡೂ ಕೈಗಳನ್ನು ಸೊಂಟದ ಮೇಲೆ ಇಟ್ಟು ನಿಂತಿರುವ ಚಿತ್ರ ಒಂದಾದರೆ, ಮತ್ತೊಬ್ಬ ಮಾನವ ತನ್ನೆರಡೂ ಕೈಗಳನ್ನು ಸೊಂಟದ ಮೇಲಿಟ್ಟು ಬಲಗಾಲಿನಿಂದ ಜಿಗಿಯುತ್ತಿರುವ ಚಿತ್ರವಿದೆ. ಎಡಭಾಗಕ್ಕೆ ಮುಖ ಮಾಡಿದ ಜಿಂಕೆಯೊಂದರ ಚಿತ್ರವಿದ್ದು ತೆಳ್ಳನೆಯ, ಉದ್ದವಾದ ಉದರ, ಚೂಪಾದ ಮುಖ, ಕೊಂಬುಗಳು, ಕಾಲುಗಳು ಮತ್ತು ಬಾಲಗಳನ್ನು ಗುರುತಿಸಬಹುದು. ಇದರ ಬದಿಯಲ್ಲೇ ಬ್ರಾಹ್ಮೀ ಅಕ್ಷರಗಳಾದ ಫ, ಕೋ, ಅ ಗಳನ್ನು ಹೋಲುವ ಬರಹಗಳಿವೆ. ಸ್ವಲ್ಪ ಅಂತರದಲ್ಲಿ ಮತ್ತೊಂದು ಪ್ರಾಣಿಯ ಚಿತ್ರವಿದ್ದು ಕಾಡುಹಂದಿಯ ಚಿತ್ರದಂತಿದೆ.

ಮೇಲ್ಭಾಗದಲ್ಲಿರುವ ಒಂದು ರೇಖಾ ಚಿತ್ರದಲ್ಲಿ ಮನುಷ್ಯ ಪ್ರಾಣಿಯೊಂದರ ಮೇಲೆ ಕುಳಿತು ಸಾಗುತ್ತಿರುವ ಚಿತ್ರವಿದ್ದು, ಪ್ರಾಣಿಯ ತಲೆ ಮತ್ತು ಬಾಲಗಳನ್ನು ಸೂಚಿಸುವ ಗೆರೆಗಳು ಸ್ಪಷ್ಟವಾಗಿವೆ. ಈ ಮೇಲಿನ ಬಿಳಿ ಬಣ್ಣದಿಂದ ಬರೆದ ರೇಖಾಚಿತ್ರಗಳ ನಡುವೆ ಸಣ್ಣದಾಗಿ ಬರೆದ ಕಿತ್ತಳೆ ಬಣ್ಣದ ಮನುಷ್ಯರನ್ನು ಸೂಚಿಸುವ ರೇಖಾಚಿತ್ರಗಳಿವೆ. ದಪ್ಪನೆಯ ರೇಖೆಗಳಿಂದ ಸುಮಾರು ಕ್ರಿ.ಶ.೬ನೇ ಶತಮಾನಕ್ಕೆ ಸೇರುವ ಶಂಖ ಲಿಪಿಯ ಶಾಸನವೂ ಇಲ್ಲಿದ್ದು ಇದು ಪ್ರಾಗೈತಿಹಾಸದಿಂದ ನಿರಂತರವಾಗಿ ಇಲ್ಲಿ ಮಾನವನ ಕ್ರಿಯಾಕಲಾಪವನ್ನು ಸೂಚಿಸುತ್ತಿದೆ.

ಕೇಸರಿ ಮತ್ತು ಕೆಂಪು ಬಣ್ಣಗಳನ್ನು ಬಳಕೆಗಾಗಿ ಪ್ರಾಣಿಗಳ ರಕ್ತ ಮತ್ತು ಸಸ್ಯದ ರಸಗಳಿಗೆ ಕಬ್ಬಿಣದ ಆಕ್ಸೈಡ್ ಬೆರೆಸಿ ತಯಾರಿಸುತ್ತಿದ್ದರು ಎಂಬುದಾಗಿ ಈಗಾಗಲೇ ತಿಳಿದು ಬಂದಿರುವುದರಿಂದ ಈ ಬಣ್ಣಗಳನ್ನು ಅದೇ ರೀತಿ ತಯಾರಿಸಿರಬಹುದು. ಕಲ್ಲುಮನೆಯ ಮೇಲ್ಚಾವಣಿಯ ಮೇಲಿನ ಒಳಭಾಗದಲ್ಲೂ ಬಿಳಿ ಸಿಂಧೂರ ಮತ್ತು ಕೆಂಪು ಬಣ್ಣಗಳಿಂದ ಬರೆದ ಚಿತ್ರಗಳಿದ್ದು ಅಸ್ಪಷ್ಟವಾಗಿದೆ. ಇವುಗಳನ್ನು ಮನುಷ್ಯ ಸೀಳಾಗಿ ಬಿದ್ದಿರುವ ಬಂಡೆಯ ಮೇಲೆ ಕುಳಿತು ಇಲ್ಲವೇ ನಿಂತು ಮೂಡಿಸಿದ್ದಾನೆ. ಮೊದಲಿಗೆ ಈ ಕಲ್ಲು ಮನೆಯಲ್ಲಿ ಬಿಳಿ ಚಿತ್ರಗಳನ್ನು ಬರೆದಿದ್ದು ಅವುಗಳ ಮೇಲೆ ನಂತರ ಸಿಂಧೂರ ಬಣ್ಣದಿಂದ ಮತ್ತು ಕೆಂಪು ಬಣ್ಣದಿಂದ ಚಿತ್ರಗಳನ್ನು ಬರೆದಿರುವುದು ಗಮನಾರ್ಹ.

ಈ ಕಲ್ಲು ಮನೆಯಲ್ಲಿ ಭೂಮಿಯ ಮೇಲ್ಮೈಯಲ್ಲಿ ವಿವಿಧ ಬಗೆಯ ಮಡಕೆಯ ಚೂರುಗಳು ದೊರೆತಿರುವುದಲ್ಲದೇ, ಭೂಮಿಯಲ್ಲಿ ಸ್ವಲ್ಪ ಒಳಗೆ ಹೂತುಹೋಗಿದ್ದ ಮಣ್ಣಿನ ತಟ್ಟೆಯ ಭಾಗವು ದೊರೆತಿದೆ. ಮಡಕೆಯ ಚೂರುಗಳು ಕೆಂಪು ಬಣ್ಣದಿಂದಲೂ, ಕಪ್ಪು-ಕೆಂಪುಬಣ್ಣದಿಂದಲೂ ಕೂಡಿದ್ದು ತುಸು ಹೊಳಪುಗಳ್ಳವಾಗಿವೆ. ವಿವಿಧ ರೀತಿಗಳಲ್ಲಿ ಬಾಗಿರುವ ಕಂಠಗಳ ಮಡಕೆಗಳಿಂದ ಕುಂಬಾರನ ತಿದಿಯಿಂದ ಹೊರಬಂದ ರೇಖೆಗಳು ವಿವಿಧ ರೀತಿಯಲ್ಲಿವೆ. ಕೆಲವು ತೆಳುವಾಗಿ ಹಗುರವಾದ ಮಡಕೆಯ ಚೂರುಗಳಾಗಿದ್ದರೆ ಮತ್ತೆ ಕೆಲವು ದಪ್ಪನೆಯ ಗಟ್ಟಿಯಾದ ಮಡಕೆಯ ಚೂರುಗಳಾಗಿವೆ.

ಈ ಕಲ್ಲುಮನೆಯಿಂದ ಸುಮಾರು ೨.ಕಿ.ಮೀ. ಹಿಂದೆಯೇ ಕೆಂಬರೆ ಎಂಬಲ್ಲಿ ಎರಡು ವೃತ್ತಾಕಾರದ ಶವಗುಣಿಗಳು(pit burials) ಕಂಡು ಬಂದಿದೆ. ಒಂದು ಶವಗುಣಿಯ ಮೇಲ್ಮೈ ವೃತ್ತಾಕಾರದ ಭಾಗವು ಭಾಗಶಃ ಹಾಳಾಗಿದ್ದರೆ, ಮತ್ತೊಂದು ಸುಸ್ಥಿತಿಯಲ್ಲಿದೆ. ಇವು ಬೃಹತ್ ಶಿಲಾಯುಗಕ್ಕೆ ಸೇರಿದವುಗಳಾಗಿವೆ[೨]"

ಗುಹಾಚಿತ್ರಗಳು ನೂತನ ಶಿಲಾಯುಗದಲ್ಲಿ ಪ್ರಾರಂಭವಾಗಿ ಬೃಹತ್ ಶಿಲಾಯುಗದಲ್ಲಿ ವಿಕಸಿತವಾಗಿರುವುದರಿಂದ, ಈ ಗುಹಾಚಿತ್ರಗಳು ಸಹ ನವಶಿಲಾಯುಗ (ಕಾಲ ಕ್ರಿ.ಪೂ.೩೦೦೦ದಿಂದ ಕ್ರಿ.ಪೂ.೮೦೦)ದಿಂದ ಬೃಹತ್ ಶಿಲಾಯುಗದ ಕಾಲಕ್ಕೆ (ಕಾಲ ಕ್ರಿ.ಪೂ.೮೦೦ ದಿಂದ ಕ್ರಿ.ಶ.ದ ಆರಂಭ) ಸೇರಿದವುಗಳಾಗಿದ್ದು ಮುತ್ತತ್ತಿ ಪರಿಸರದ ಬಸವನಬೆಟ್ಟದಲ್ಲಿದ್ದ ಪ್ರಾಗೈತಿಹಾಸಿಕ ಕಾಲದ ಇಲ್ಲಿನ ಮಾನವರು ಚಿತ್ರಕಲೆಯಲ್ಲಿಯೂ ನಿಷ್ಣಾತರಾಗಿದ್ದರು ಎಂಬುದನ್ನು ಸಾಬೀತುಪಡಿಸುತ್ತವೆ.

ಸಾತನೂರು ಮಾರ್ಗವಾಗಿ ಮುತ್ತತ್ತಿಗೆ ಅತಿ ಸಮೀಪವಾಗಿರುವ “ಗದ್ದೇಮಡಿನಕ್ಕಲು ಸ್ಥಳದಲ್ಲಿ ಹತ್ತು ಶಿಲಾಗೋರಿಗಳ ವೃತ್ತಗಳಿವೆ. ಇವುಗಳನ್ನು ಜನರು ನೆಲಮೋರಿಗಳೆಂದು ಕರೆಯುತ್ತಾರೆ. ಅಲ್ಲದೆ ಇದು ಪಾಂಡವರು ವಾಸಿಸುವ ಸ್ಥಳವೆಂದು ನಂಬಿದ್ದಾರೆ. ಜನರು ಹಿಂದೊಮ್ಮೆ ಶಿಲಾಸಮಾಧಿಯೊಂದನ್ನು ಅಗೆದಿದ್ದು ಅದನ್ನು ವರ್ಣಿಸುವ ರೀತಿ ನೋಡಿದರೆ ಅವುಗಳು ಕೋಣೆಗೋರಿಗಳು(ಸಿಸ್ಟ್ ಚೇಂಬರ್ಸ್) ಆಗಿವೆ. ಈ ಸ್ಥಳದಲ್ಲಿ ಕೆಂಪು, ಕಪ್ಪುಬಣ್ಣದ ಹೊಳಪುಳ್ಳ ಮಡಕೆಯ ಚೂರು, ವಿವಿಧ ಬಗೆಯ ಗೆರೆಗಳುಳ್ಳ ಕೆಂಪು ಬಣ್ಣದ ಮಡಕೆಯ ಕಂಠಗಳು, ತೆಳುವಾದ ನಯವಲ್ಲದ ಕುಡಿಕೆಯ ಚೂರುಗಳು, ವಿವಿಧ ಬಗೆಯ ಗೆರೆಗಳುಳ್ಳ ಕಂಠದ ಕೆಳಭಾಗಗಳು ಗಟ್ಟಿಯಾದ ಜೇಡಿಮಣ್ಣಿನಿಂದ ಮಾಡಿದ ಮಡಕೆಯ ಚೂರುಗಳು, ಹೂಜಿಯೊಂದರ ಕೆಂಪುಬಣ್ಣದ ಸಣ್ಣ ನಳಿಕೆ, ತೆಳುವಾದ ಕಪ್ಪು ಬಣ್ಣದ ಮಡಕೆ ಚೂರುಗಳು, ಕೆಂಪುಬಣ್ಣದ ಮಡಕೆಯ ಚೂರುಗಳು ದೊರೆತಿವೆ. ಅಲ್ಲದೇ ಕಬ್ಬಿಣದ ವಿವಿಧ ಗಾತ್ರದ ಕಿಟ್ಟದ ಕಲ್ಲುಗಳು ಕಂಡುಬಂದಿವೆ. ಈ ಶಿಲಾಗೋರಿಗಳು ಕಾವೇರಿ ನದಿಯ ದಂಡೆಯ ಮೇಲೆ ದೊರೆತಿರುವುದರಿಂದ ಮೀನುಗಾರಿಕೆ, ಬೇಟೆ, ವ್ಯವಸಾಯ, ಪಶುಪಾಲನೆಯು ಆಗಿನ ಕಾಲದ ಇಲ್ಲಿನ ಜನರ ಮುಖ್ಯ ಕಸುಬುಗಳಾಗಿದ್ದವೆಂದು ಅರ್ಥೈಸಬಹುದು[೧೩]”

“ಮುತ್ತತ್ತಿಯಿಂದ ಭೀಮೇಶ್ವರಿಗೆ ಹೋಗುವ ಮಾರ್ಗದಲ್ಲಿ ೨೦ ಅಡಿವ್ಯಾಸದ ೮ ಶಿಲಾಗುಂಡುಗಳ ವೃತ್ತಗಳು ಕಂಡು ಬಂದಿವೆ. ಇವು ಸಹ ಬೃಹತ್ ಶಿಲಾಯುಗ (ಕಾಲ.ಕ್ರಿ.ಪೂ.೮೦೦)ಕ್ಕೆ ಸೇರಿದವುಗಳಾಗಿವೆ[೧೪]” ತಿರುಗಣೆ ಮಡುವಿನ ಬಳಿಯ ಬೋಟ್ ಸ್ಟಾಂಡ್ ಸ್ಥಳದ ಬಳಿ ೩೦ ಅಡಿ ಸುತ್ತಳತೆಯ ೫ ಬೃಹತ್ ಶಿಲಾಯುಗದ ಗೋರಿಗಳ ವೃತ್ತಗಳು ಇವೆ. ಬಸವೇಗೌಡನದೊಡ್ಡಿಯ ಬಳಿಯ ಹೊಲವೊಂದರಲ್ಲಿ ೩೦ ಅಡಿ ವ್ಯಾಸವಿರುವ ದುಂಡು ಕಲ್ಲುಗಳಿಂದ ರಚಿಸಿರುವ ೧೫ಕ್ಕೂ ಹೆಚ್ಚಿನ ಶಿಲಾಗೋರಿಗಳು ಉಳಿದುಬಂದಿವೆ. ಪ್ರಾಗೈತಿಹಾಸಿಕ ಕಾಲದ ಶಿಲಾಸಂಸ್ಕೃತಿ ಮುತ್ತತ್ತಿ ಪರಿಸರದಿಂದ ೨೨ಕಿ.ಮೀ.ದೂರದ ಹಲಗೂರಿನವರೆಗೂ ವ್ಯಾಪಿಸಿದ್ದಿತು ಎಂಬುದಕ್ಕೆ ಆಧಾರಗಳಾಗಿವೆ. ಹಲಗೂರಿನಲ್ಲಿನ ಬೃಹತ್ ಶಿಲಾಯುಗದ ೬ ಶಿಲಾಗೋರಿಗಳನ್ನು ಉತ್ಖನನ ಮಾಡಲಾಗಿದೆ. “ಕಂಬದರಾಯನ ಗುಡಿಯ ಬಳಿಯ ಕೊಕ್ಕಲ್ಲುಮಠ ಎಂಬ ಎತ್ತರವಾದ ಸ್ಥಳದಲ್ಲಿ ೭೦ಕ್ಕೂ ಹೆಚ್ಚು ಬೃಹತ್ ಶಿಲಾಯುಗದ ಶಿಲಾವೃತ್ತಗಳು ಮತ್ತು ಕಂಡಿಕಲ್ಲು ಗೋರಿಗಳು ಕಂಡುಬಂದಿವೆ. ಕೆಲವು ಶಿಲಾವೃತ್ತಗಳು ೩೦ ಅಡಿ ವೃತ್ತಾಕಾರದ ಅಳತೆಯನ್ನು ಹೊಂದಿವೆ. ವೃತ್ತಕ್ಕೆ ಒತ್ತಾಸರೆಯಾಗಿ ಪುಟ್ಟ ಪುಟ್ಟ ಕಲ್ಲುಗಳನ್ನು ಕೆಲವು ಕಡೆ

ದುಂಡನೆಯ ಬಂಡೆಗಳನ್ನು ಉಪಯೋಗಿಸಲಾಗಿದೆ. ಕಂಡಿಕಲ್ಲು ಗೋರಿಗಳಲ್ಲಿನ ಉತ್ತರ ದಿಕ್ಕಿನ ಕಲ್ಲಿಗೆ ೨ ಅಡಿ ವೃತ್ತದ ಕಂಡಿಯನ್ನು ಮಾಡಲಾಗಿದೆ. ಕೆಲವು ಶಿಲಾಗೋರಿಗಳ ಟೋಪಿಕಲ್ಲುಗಳು ಇಲ್ಲವಾಗಿವೆ. ಹಲವು ಶಿಲಾಗೋರಿಗಳ ಒಳಗಡೆ ಹಾಸುಕಲ್ಲುಗಳಿವೆ. ಈ ಸಮಾಧಿಗಳ ಒಳಗಡೆ ಕೆಂಪುಮಣ್ಣಿನ ಮಡಕೆಯ ಚೂರುಗಳು ದೊರೆತಿವೆ[೧೫]" "ಕುಪ್ಪೆದೊಡ್ಡಿಯಲ್ಲಿನ ಎತ್ತರವಾದ ವಿಸ್ತಾರವಾದ ಪ್ರದೇಶದಲ್ಲಿ ೫೦ಕ್ಕಿಂತಲೂ ಹೆಚ್ಚು ವೃತ್ತಾಕಾರದ ಶಿಲಾಗೋರಿಗಳಿವೆ. ಬಳಿಯಲ್ಲಿಯೇ ಪ್ರಾಚೀನತಮವಾದ ಕೆರೆಯೊಂದಿದ್ದು ಪ್ರಾಗೈತಿಹಾಸಿಕ ಮಾನವನ ವಾಸಸ್ಥಾನಕ್ಕೆ ಸೂಕ್ತವಾದ ಪ್ರದೇಶವಾಗಿದ್ದಿತು. ಇಲ್ಲಿ ಅತಿ ದೊಡ್ಡ ಶಿಲಾಗೋರಿಯ ವೃತ್ತ ವಿನ್ಯಾಸ ೩೦ ಅಡಿಗಳಾಗಿದ್ದರೆ, ಅತಿ ಸಣ್ಣದು ಕೇವಲ ೩.೧/೨ಅಡಿಗಳ ವ್ಯಾಸವಾಗಿವೆ. ಶವಕುಣಿ ಮತ್ತು ಕೋಣೆಗೋರಿಗಳೆರಡರ ಪ್ರಕಾರವನ್ನು ನಾವಿಲ್ಲಿ ಕಾಣಬಹುದು. ಅತಿಚಿಕ್ಕದಾದ ೩.೧/೨ ಅಡಿಯ ಶವಕುಣಿಗಳೆರಡು ಮಕ್ಕಳದ್ದಾಗಿರಬಹುದು[೧೬]"

"ಸಂಬೇಗೌಡನದೊಡ್ಡಿಯಲ್ಲಿ ಬೋಳರೆ ಎಂಬ ಒಡ್ಡಿನಲ್ಲಿ ೨೦ಕ್ಕೂ ಹೆಚ್ಚು ಶಿಲಾಗೋರಿಗಳಿವೆ. ೩೦ ಅಡಿಗಳಷ್ಟು ವೃತ್ತ ವ್ಯಾಸದ ವಿಸ್ತಾರವುಳ್ಳ ಶಿಲಾಗೋರಿಯೊಳಗೆ ಭೂಮಿಯಿಂದ ಅರೆಮುಚ್ಚಿದಂತೆ ರಚಿಸಿರುವ ೪ ಕಲ್ಲುಹಲಗೆಗಳ ಕೋಣೆಯ ಕಲ್ಲುಗಳ ಎತ್ತರ ಎರಡು ಅಡಿಗಳು, ಉದ್ದ ಏಳೂವರೆ ಅಡಿಗಳು ಅಗಲ ನಾಲ್ಕು ಅಡಿಗಳಷ್ಟು ಬೃಹತ್ತಾದ ಪ್ರಮಾಣವನ್ನು ಹೊಂದಿದೆ. ಇಲ್ಲಿಯೇ ಮಾದಮ್ಮನರೆ ಸಮೀಪ ನಿಲುವುಗಲ್ಲು ಒಂದು ಇದ್ದು ಇದು ೧೨ ಅಡಿ ಉದ್ದ, ೮ ಅಡಿ, ೧೭ ಅಡಿಗಳ ಸುತ್ತಳತೆಯನ್ನು ಹೊಂದಿದೆ. ಶವವನ್ನು ಸಮಾಧಿ ಮಾಡಿದ ಮೇಲೆ ಈ ಬಗೆಯ ನಿಲುವು ಕಲ್ಲನ್ನಿಟ್ಟು ಗುರುತಿಸುವುದು. ನಿಲುವುಗಲ್ಲುಗಳ ಲಕ್ಷಣಗಳಲ್ಲಿ ಒಂದಾಗಿದೆ. ಅಂದರೆ ಕನಕಪುರ ತಾಲ್ಲೂಕಿನ ಮುತ್ತತ್ತಿ ವಲಯದಲ್ಲಿ ಪ್ರಾಗೈತಿಹಾಸಿಕ ಎಲ್ಲ ಕುರುಹುಗಳನ್ನು ಒಳಗೊಂಡಿದೆ. ಬಳಿಯ ಮರಳೇಗವಿಮಠ, ಬಂಡೆಗುಡಿ, ತಿಗಳರಹೊಸಹಳ್ಳಿ, ಉದಾರಹಳ್ಳಿ ಬಳಿಯಲ್ಲೆಲ್ಲಾ ಬೃಹತ್ ಶಿಲಾಯುಗದ ಶಿಲಾಗೋರಿಗಳು ದೊರೆತಿದ್ದು ಕಬ್ಬಿಣದ ವಸ್ತುಗಳು ಮಡಕೆ ಚೂರುಗಳ ಭಾಗಗಳು ಲಭ್ಯವಾಗಿದ್ದು ಇಲ್ಲಿನ ಪ್ರಾಗೈತಿಹಾಸಿಕ ಕ್ರಿಯಾಕಲಾಪಗಳಿಗೆ ಆಧಾರಗಳಾಗಿವೆ[೧೭]"

ಮುತ್ತತ್ತಿಯ ಈ ಪರಿಸರದಲ್ಲಿ ಆದಿಶಿಲಾಯುಗದ ಆಧಾರಗಳು ಲಭ್ಯವಾಗಿಲ್ಲವಾದರೂ ಸೂಕ್ಷ್ಮಶಿಲಾಯುಗದ ಕಾಲದಿಂದ (ಕ್ರಿ.ಪೂ.ಸುಮಾರು ೧೦,೦೦೦ದಿಂದ) ಕ್ರಿ.ಶ.ಆರಂಭದ ಕಾಲದವರೆಗೆ ಸಮೃದ್ಧವಾದ ಪ್ರಾಗೈತಿಹಾಸಿಕ ಮನುಜರ ಜೀವನದ ಕ್ರಿಯಾಕಲಾಪಗಳು ನಡೆದು, ಅಂದಿನಿಂದ ಸತತ ಜನಜೀವನ ನಡೆದುಕೊಂಡು ಬಂದಿದೆ.

## ೧.೨ ಇತಿಹಾಸ

ಮುತ್ತತ್ತಿಯ ಇತಿಹಾಸವೆಂದರೆ ದಕ್ಷಿಣ ಕರ್ನಾಟಕದ ಆರು ಜಿಲ್ಲೆಗಳಾದ ಮಂಡ್ಯ, ರಾಮನಗರ, ಚಾಮರಾಜನಗರ, ಮೈಸೂರು, ಬೆಂಗಳೂರುಗಳ ಇತಿಹಾಸವೇ ಆಗಿವೆ. ಕ್ರಿ.ಶ.ಆರಂಭ ಕಾಲದ ಯಾವುದೇ ಇತಿಹಾಸದ ಸಾಕ್ಷ್ಯಾಧಾರಗಳು ಲಭ್ಯವಿಲ್ಲದಿದ್ದರೂ ತಲಕಾಡನ್ನು ಆಳಿದ ಗಂಗರ ಕಾಲದ ಸಾಕ್ಷ್ಯಾಧಾರಗಳು ವಿಪುಲವಾಗಿ ದೊರೆಯುತ್ತವೆ. ಕ್ರಿ.ಶ.೪ನೇ ಶತಮಾನದಿಂದ ಈ ಪ್ರದೇಶದ ಗಂಗರ ಚರಿತ್ರೆ ಪ್ರಾರಂಭವಾಗುತ್ತದೆ. ಇವರು ಉತ್ತರ ಕರ್ನಾಟಕದಲ್ಲಿ ಬನವಾಸಿ ಕದಂಬರ ಜೊತೆಗೆ ವೈವಾಹಿಕ ಸಂಬಂಧವನ್ನು ಬೆಳೆಸಿ ಸೌಹಾರ್ದಯುತವಾಗಿ ಬಾಳುತ್ತಿದ್ದುದ್ದಾಗಿ ತಿಳಿದುಬರುತ್ತದೆ. ಇವರು ಕ್ರಿ.ಶ.ಸುಮಾರು ೧೦ನೇ ಶತಮಾನದವರೆಗೂ ಇಲ್ಲಿ ರಾಜ್ಯಭಾರ ಮಾಡಿದಂತೆ ತಿಳಿದುಬಂದಿದೆ. ಮೊದಲಿಗೆ ಕೋಲಾರ ರಾಜಧಾನಿಯಾಗಿದ್ದು, ನಂತರ ತಲಕಾಡಿಗೆ ಬದಲಾಗಿ ಈ ಪ್ರದೇಶದ ಉತ್ತಮ ಆಡಳಿತಕ್ಕೆ ಸಹಾಯವಾಯಿತು. ಇವರ ಶಾಸನಗಳ ಪ್ರಕಾರ ಕೊಂಕಣಿವರ್ಮನು ಈ ವಂಶದ ಮೊದಲ ದೊರೆ. ಇವನು ಕ್ರಿ.ಶ.ಸುಮಾರು ೪ನೇ ಶತಮಾನದ ಮಧ್ಯಭಾಗದಲ್ಲಿ ಸಣ್ಣ ಪ್ರಮಾಣದಲ್ಲಿ ರಾಜ್ಯ ಸ್ಥಾಪನೆ ಮಾಡಿದ ನಂತರ ಇವನ ಮಗ ಮಾಧವನು ಪ್ರಬಲನಾಗಿ ಮಹಾರಾಜಾಧಿರಾಜ ಬಿರುದಿಗೆ ಪಾತ್ರನಾದನು. ಇವನ ಮಗ ಹರಿವರ್ಮ, ತದನಂತರ ಇವನ ಮಗ ಎರಡನೇ ಮಾಧವನು ಸಿಂಹಾಸನವನ್ನು ಅಲಂಕರಿಸಿದನು. ಇವನ ತಮ್ಮ ವಿಷ್ಣುಗೋಪನು ೨೦ ವರ್ಷಗಳ ಆಳ್ವಿಕೆ ಮಾಡಿದ, ತರುವಾಯ ಮುಮ್ಮಡಿ ಮಾಧವ, ಅವನೀತ (ಕ್ರಿ.ಶ.ಸುಮಾರು ೪೬೯ರಿಂದ ೫೨೯)ನು ದೀರ್ಘಕಾಲವಾದ ೬೦ ವರ್ಷಗಳ ರಾಜ್ಯಭಾರ ಮಾಡಿದನು. ನಂತರ ದುರ್ವಿನೀತನು ಪಟ್ಟಕ್ಕೆ ಬಂದನು.

ಇವನು (ಸುಮಾರು ೫೨೯-೫೭೯) ಗಂಗ ವಂಶದಲ್ಲಿಯೇ ಅತ್ಯಂತ ಪ್ರಭಾವಶಾಲಿ ದೊರೆಯಾಗಿದ್ದನು. ಪರಾಕ್ರಮಿಯೇ ಅಲ್ಲದೆ ಸಂಸ್ಕೃತ ಮತ್ತು ಕನ್ನಡದಲ್ಲಿ ಪಾಂಡಿತ್ಯವನ್ನು ಪಡೆದುಕೊಂಡಿದ್ದನು. ಬಾದಾಮಿ ಚಾಲುಕ್ಯರ ಪುಲಿಕೇಶಿ ಜೊತೆಗೆ ಈತ ಉತ್ತಮ ಬಾಂಧವ್ಯವನ್ನು ಹೊಂದಿದ್ದ. ಮುಷ್ಕರ ಮತ್ತು ಪೊಲಾವೀರರೆಂಬ ಇವನ ಮಕ್ಕಳ ತರುವಾಯ, ಮುಷ್ಕರನ ಮಗ ಶ್ರೀವಿಕ್ರಮನು ಪಟ್ಟಕ್ಕೆ ಬಂದನು. ೧೪ ವಿದ್ಯೆಗಳಲ್ಲಿ ಪ್ರಾವಿಣ್ಯತೆಯನ್ನು ಪಡೆದಿದ್ದ ಈತ. ಇವನ ನಂತರ ಭೂವಿಕ್ರಮ ಅಧಿಕಾರಕ್ಕೆ ಬಂದು ಈತನು ಸಹ ಬಾದಾಮಿ ಚಾಲುಕ್ಯರೊಂದಿಗೆ ಉತ್ತಮ ಸಂಬಂಧ ಹೊಂದಿದ್ದು ಪಲ್ಲವರನ್ನು ಸೋಲಿಸಲು ಸಹಾಯ ಮಾಡಿದನು.

ತದನಂತರ ಶಿವಮಾರನು ಕ್ರಿ.ಶ.೬೭೯ರಲ್ಲಿ ಅಧಿಕಾರವನ್ನು ಅಲಂಕರಿಸಿದನು. ನಂತರ ಇವನ ಮೊಮ್ಮಗ ಶ್ರೀಪುರುಷ(ಕ್ರಿ.ಶ.೭೨೬ ರಿಂದ ೭೮೮)ನು ಅಧಿಕಾರಕ್ಕೆ ಬಂದು ಕಂಚಿಯನ್ನು ಮುತ್ತಿ ಪಲ್ಲವ ನಂದಿವರ್ಮನನ್ನು ಪರಾಭವಗೊಳಿಸಿ ಪೆರ್ಮನಡಿ ಎಂಬ ಬಿರುದುಗಳಿಸಿದನು. ಮಳವಳ್ಳಿ ತಾಲ್ಲೂಕಿನ ಪೂರಿಗಾಲಿ ಗ್ರಾಮದ ಹೊಲವೊಂದರಲ್ಲಿರುವ ಶಾಸನವು ಇವನ ಆಳ್ವಿಕೆಯ ಕಾಲದಲ್ಲಿ ಕೊಂಗಾಣಿಕೆರೆ ಎಂಬ ಕೆರೆ ಕಟ್ಟಿದ ಮಾಹಿತಿ ಲಭ್ಯವಾಗಿದೆ. ಕುಂದಸೆಟ್ಟಿ ಎಂಬ ಅಧಿಕಾರಿ ವಡಗೆರೆ-೨೦೦ ಎಂಬ ಆಡಳಿತ ವಿಭಾಗವನ್ನು ಹಾಗೂ ಮುದನಂದೂರ ಸಿಂಗದೇವರಸನು ಪುವಗ್ರಾಮವನ್ನು ಆಳುತ್ತಿದ್ದನೆಂದು ಈ ಶಾಸನವು ತಿಳಿಸುತ್ತದೆ. ಇವನ ಪೃಥ್ವಿಕೊಂಗುಣಿ ಮುತ್ತರಸ ಎಂಬ ಹೆಸರಿನಿಂದಲೂ ಪ್ರಸಿದ್ಧನಾಗಿದ್ದನು. ನಂತರ ಎರಡನೇಯ ಶಿವಮಾರ (ಕ್ರಿ.ಶ.೭೮೮) ಸಿಂಹಾಸನಕ್ಕೆ ಬಂದನು. ನಂತರ ಇವನ ತಮ್ಮ ವಿಜಯಾದಿತ್ಯ, ನಂತರ ರಾಚಮಲ್ಲರು ರಾಜರಾದರು. ಕ್ರಿ.ಶ.೮೪೩ರಲ್ಲಿ ಇವನ ಮಗ ಎರೆಯಂಗ ನೀತಿಮಾರ್ಗ ರಾಜನಾದನು. ಕ್ರಿ.ಶ.೮೭೦ರಲ್ಲಿ ಇವನ ಮಗ ಎರಡನೇ ರಾಚಮಲ್ಲನು ಅಧಿಕಾರಕ್ಕೆ ಬಂದು ೯೧೯ರವರೆಗೂ ಆಳ್ವಿಕೆ ನಡೆಸಿದನು. ನಂತರ ಬೂತುಗ(ಕ್ರಿ.ಶ.೯೩೬ರಿಂದ ೯೬೦)ಅಧಿಕಾರಕ್ಕೆ ಬಂದಂತೆ ತಿಳಿದುಬರುತ್ತದೆ. ರಾಷ್ಟ್ರಕೂಟರ ಜೊತೆ ಉತ್ತಮ ಭಾಂದವ್ಯ ಹೊಂದಿದ್ದ ಬೂತುಗನು ತಮ್ಮ ಸ್ವತಂತ್ರತೆಯನ್ನು ಕಳೆದುಕೊಳ್ಳಬೇಕಾಯಿತು. ಬೂತುಗನ ನಂತರ ಕಲ್ಯಾಣದ ಚಾಲುಕ್ಯರು ಪ್ರಬಲರಾಗಿ ರಾಷ್ಟ್ರಕೂಟರ ಆಡಳಿತವನ್ನು ಕೊನೆಗಾಣಿಸಿದರು. ನಂತರ ಮುಮ್ಮಡಿಮಾರಸಿಂಹ ಕ್ರಿ.ಶ.೯೬೩ ರಿಂದ ೮೭೪)ರವರೆಗೆ ಪ್ರಬಲನಾಗಿ ಆಳ್ವಿಕೆ ಮಾಡಿದನು. ನಂತರ ನಾಲ್ಕನೇಯ ರಾಚಮಲ್ಲನು ಕ್ರಿ.ಶ.೯೯೯ರವರೆಗೂ ಇದ್ದಂತೆ ಕಂಡು ಬಂದರೂ ಚೋಳರು ಇವನನ್ನು ಸೋಲಿಸಿ ತಮ್ಮ ರಾಜ್ಯಕ್ಕೆ ಸೇರಿಸಿಕೊಂಡರು.

**ಚೋಳರು:-** ಮೊದಲನೇ ರಾಜರಾಜನಿಂದ ಚೋಳ ವಂಶ ಆಳ್ವಿಕೆ ಈ ಪ್ರದೇಶದಲ್ಲಿ ಆರಂಭವಾದಂತೆ ತಿಳಿದು ಬಂದಿದ್ದು ಮೊದಲನೇ ಕುಲೋತ್ತುಂಗನವರೆಗೂ ಸುಮಾರು ಒಂದು ಶತಮಾನಗಳ ಕಾಲ ಮುಂದುವರೆದಿದ್ದಾಗಿ ತಿಳಿದುಬರುತ್ತದೆ. ಮೈಸೂರು ಜಿಲ್ಲೆಯ ತಲಕಾಡು ಇವರ ರಾಜಧಾನಿಯಾಗಿತ್ತು. ನಂತರ ಹೊಯ್ಸಳ ದೊರೆ ವಿಷ್ಣುವರ್ಧನನು ಕ್ರಿ.ಶ.೧೧೧೪ರಲ್ಲಿ ಚೋಳರನ್ನು ಇಲ್ಲಿಂದ ಓಡಿಸುವಲ್ಲಿ ಯಶಸ್ವಿಯಾದನು.

**ಹೊಯ್ಸಳರು** :- ನೃಪಕಾಮನಿಂದ ಆರಂಭವಾದ(ಕ್ರಿ.ಶ.೧೦೦೬-೧೦೪೫) ಹೊಯ್ಸಳ ವಂಶ ವಿನಯಾದಿತ್ಯ (೧೦೪೭), ಎರೆಯಂಗ(೧೦೯೮-೧೧೦೦). ಒಂದನೇಯ ಬಲ್ಲಾಳ(೧೧೦೩), ವಿಷ್ಣುವರ್ಧನ (ಕ್ರಿ.ಶ.೧೧೦೮-೧೦೪೮), ಒಂದನೇ ಮಾರಸಿಂಹ(ಕ್ರಿ.ಶ.೧೧೪೯), ಇಮ್ಮಡಿಬಲ್ಲಾಳ(ಕ್ರಿ.ಶ.೧೧೭೩-೧೨೨೦) ನಂತರ ಎರಡನೇ ನಾರಸಿಂಹ(ಕ್ರಿ.ಶ.೧೨೨೦-೧೨೩೫), ಸೋಮೇಶ್ವರ(೧೨೩೫-೧೨೫೩), ಮುಮ್ಮಡಿನರಸಿಂಹ, ರಾಮನಾಥ, ಮುಮ್ಮಡಿ ನರಸಿಂಹರ ನಂತರ ಮುಮ್ಮಡಿಬಲ್ಲಾಳ(ಕ್ರಿ.ಶ.೧೨೯೧-೧೩೪೨)ರವರೆಗೂ ಆಳ್ವಿಕೆ ಮಾಡಿದನು. ಇವನನ್ನು ಅಲ್ಲಾವುದ್ದೀನ್ ಖಿಲ್ಜಿ ದಂಡನಾಯಕ ಮಲ್ಲಿಕಾಫರ ಸೋಲಿಸಿದನು. ಮುತ್ತತ್ತಿ ಪರಿಸರದ ಹೊಯ್ಸಳರ ಶಾಸನಗಳು ಕನ್ನಡ, ತಮಿಳು, ಸಂಸ್ಕೃತ ಭಾಷೆಗಳಲ್ಲಿ ದೊರೆಯುತ್ತವೆ. ಹಲಗೂರಿನ ವೀರಗಾರರ ಗುಡಿಯ ಬಳಿ ಇವರ ಕನ್ನಡ ಲಿಪಿಯಿರುವ ಶಿಲಾಶಾಸನವೊಂದು ಮಣ್ಣಿನಲ್ಲಿ ಮುಚ್ಚಿಹೋಗಿದ್ದು ಮತ್ತಷ್ಟು ವಿಷಯಗಳು ಕಣ್ಮರೆಯಾಗಿವೆ.

**ವಿಜಯನಗರ ಸಾಮ್ರಾಜ್ಯ** :- ಹೊಯ್ಸಳರ ಪತನಾನಂತರ ಈ ಭಾಗವನ್ನು ಆಳಿದವರು ವಿಜಯನಗರದ ಅರಸರು. ಇವರ ಆಳ್ವಿಕೆಗೆ ಸಂಬಂಧಿಸಿದ ಶಿಲಾ ಮತ್ತು ತಾಮ್ರಶಾಸನಗಳು ವಿಪುಲವಾಗಿ ದೊರೆಯುತ್ತವೆ. ಕ್ರಿ.ಶ.ಸುಮಾರು ೧೩೩೬ರಲ್ಲಿ ಹಕ್ಕ ಇಲ್ಲವೇ ಒಂದನೇ ಹರಿಹರ ಮತ್ತು ಬುಕ್ಕರಿಂದ ಸ್ಥಾಪನೆಗೊಂಡ ಈ ಸಾಮ್ರಾಜ್ಯವು ದಕ್ಷಿಣ ಭಾರತದಾದ್ಯಂತ ತನ್ನ ಸಾಮ್ರಾಜ್ಯ ವಿಸ್ತರಣೆಯನ್ನು ಕಂಡಿತು. ಮೊದಲನೇಯ ದೇವರಾಯ(ಕ್ರಿ.ಶ.೧೪೦೬ರಿಂದ೧೪೨೨) ವಿಜಯಜಯರಾಮ (ಕ್ರಿ.ಶ.೧೪೨೪), ಪ್ರೌಢದೇವರಾಯ, ಮಲ್ಲಿಕಾರ್ಜುನ (೧೪೪೬-೧೪೬೫), ಮುಮ್ಮಡಿವಿರೂಪಾಕ್ಷ(೧೪೬೫-೧೪೮೫), ಸಾಳುವ ನರಸಿಂಹ, ನರಸನಾಯಕ, ತಿಮ್ಮ ಇಮ್ಮಡಿ ನರಸಿಂಹ, ವೀರನರಸಿಂಹ(೧೫೦೫-೧೫೦೯), ಕೃಷ್ಣದೇವರಾಯ(೧೫೦೯), ನರಸನಾಯಕ, ಅಚ್ಯುತರಾಯ(ಕ್ರಿ.ಶ.ಸುಮಾರು ೧೫೨೯-೧೫೪೨), ವೆಂಕಟ, ತಿರುಮಲಸದಾಶಿವರಾಯ(೧೫೪೩-೧೫೭೨) ಈ ಅವಧಿಯಲ್ಲಿ ರಾಮರಾಯನೇ ಆಳ್ವಿಕೆ ನಡೆಸಿದಂತೆ ತೋರಿಬರುತ್ತದೆ. ೧೫೬೪ರ ಡಿಸೆಂಬರ್ ೨೫ರಂದು ಮಹಮ್ಮದೀಯ ಐವರು ಸುಲ್ತಾನರ ಜೊತೆಯ ಯುದ್ಧದಲ್ಲಿ ರಕ್ಕಸತಂಗಡಿಯಲ್ಲಿ ಸೋಲುಂಡು ಸಾವನ್ನಪ್ಪಿದ ನಂತರ ವಿಜಯನಗರದ ಸಾಮ್ರಾಜ್ಯ ನಾಶಹೊಂದುತ್ತದೆ. ಈ ಅವಧಿಯಲ್ಲಿ ಈ ಪ್ರಾಂತ್ಯವನ್ನು ನಾಗಮಂಗಲ ಪ್ರಭುಗಳು, ಅದಿನಾಡು ಪಾಳೆಯಗಾರರು, ಉಮ್ಮತ್ತೂರು ಪಾಳೆಯಗಾರರು ಹಾಗೂ ಹಲಗೂರಿನ ಪಾಳೆಯಗಾರರು ಆಳಿದರು. ನಂತರ ಮೈಸೂರು ಒಡೆಯರ ಆಳ್ವಿಕೆ ಪ್ರಾರಂಭವಾಯಿತು.

**ಮೈಸೂರು ಅರಸರು** :- ಕ್ರಿ.ಶ.೧೩೯೯ರಲ್ಲಿ ಮೈಸೂರು ಅರಸು ಮನೆತನವು ಅಸ್ತಿತ್ವಕ್ಕೆ ಬಂದಿತು. ಚಾಮರಾಜ ಮೊದಲ ಮೈಸೂರು ರಾಜನೆಂದು ಹೇಳಿದರೂ ಕ್ರಿ.ಶ.೧೬೧೦ರಲ್ಲಿ ಆಳ್ವಿಕೆ ಮಾಡಿದ ರಾಜಒಡೆಯರ್‌ರವರಿಂದಲೇ ಆಗಿದೆ. ಈ ವೇಳೆಯಲ್ಲಿ ಶ್ರೀರಂಗಪಟ್ಟಣವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದ ವಿಚಾರವು ತಿಳಿದುಬರುತ್ತದೆ. ಟಿಪ್ಪುವಿನ ನಂತರ ೧೭೯೯ರಲ್ಲಿ ಶ್ರೀರಂಗಪಟ್ಟಣದಿಂದ ಮೈಸೂರಿಗೆ ರಾಜಧಾನಿ ಸ್ಥಳಾಂತರಿಸಲ್ಪಟ್ಟಿತು. ಇಮ್ಮಡಿರಾಜ ಒಡೆಯರ್, ಒಂದನೇಯ ಕಂಠೀರವ ನರಸರಾಜ, ಕಂಠೀರವ ನರಸರಾಜ, ಚಿಕ್ಕದೇವರಾಯ, ಇಮ್ಮಡಿ ಕಂಠೀರವ ನರಸರಾಜ ಒಡೆಯರ್, ಮೊದಲನೆಯ ಕೃಷ್ಣರಾಜ ಒಡೆಯರ್, ಮುಮ್ಮಡಿ ಕೃಷ್ಣರಾಜ ಒಡೆಯರ್, ಆಳ್ವಿಕೆ ನಡೆಸಿದಂತೆ ಇತಿಹಾಸದ ದಾಖಲೆಗಳು ತಿಳಿಸುತ್ತವೆ. ನಂತರ ದಿವಾನ್‌ರ ಆಡಳಿತ ಪ್ರಾರಂಭವಾಗುತ್ತದೆ. ಹೈದರಾಲಿ ಮತ್ತು ಟಿಪ್ಪುಸುಲ್ತಾನರು ಈ ಭಾಗದಲ್ಲಿ ಆಳ್ವಿಕೆ ನಡೆಸಿದರು.

## ೧.೩ ಶಾಸನಗಳು

**ಅ) ವೀರಗಲ್ಲುಗಳು :-**

ಕರ್ನಾಟಕದ ವೀರ ಪರಂಪರೆಯ ಸಾಕ್ಷಿ ಆಧಾರಗಳಾಗಿ ಈ ವೀರಗಲ್ಲುಗಳು ಉಳಿದುಬಂದಿದೆ. ಕರ್ನಾಟಕದಲ್ಲಿ ಈವರೆವಿಗೆ ದೊರೆತಿರುವ ವೀರಗಲ್ಲುಗಳನ್ನು ಏಳು ಪ್ರಕಾರಗಳಲ್ಲಿ ವಿಂಗಡಿಸಲಾಗಿದೆ. "೧.ಯುದ್ಧದಲ್ಲಿ ಮಡಿದ ವೀರರ ವೀರಗಲ್ಲುಗಳು ೨.ತುರುಗಾಳಗ ಅಂದರೆ, ಗೋಗ್ರಹಣದಲ್ಲಿ ಮಡಿದ ವೀರರ ವೀರಗಲ್ಲುಗಳು ೩.ಬೇಟೆಯಲ್ಲಿ ಮಡಿದ ವೀರರ ವೀರಗಲ್ಲುಗಳು ೪.ಹೆಂಗಸರ ಮಾನಭಂಗ ಪ್ರಸಂಗಗಳಲ್ಲಿ ಹೋರಾಡಿ ಮಡಿದ ವೀರರ ವೀರಗಲ್ಲುಗಳು ೫.ಊರ ನೆರವಿಗಾಗಿ ಮಡಿದ ವೀರರ ವೀರಗಲ್ಲುಗಳು ೬.ಕಳ್ಳರು ಮತ್ತು ದಾರಿಗಳ್ಳರೊಡನೆ ಹೋರಾಡಿ ಮಡಿದ ವೀರರ ವೀರಗಲ್ಲುಗಳು ೭. ಸೀಮಾ ಸಂಬಂಧದಲ್ಲಿ ಮಡಿದ ವೀರರ ವೀರಗಲ್ಲುಗಳು[೧೮]"

ಕರ್ನಾಟಕದಾದ್ಯಂತ ಈವರೆಗೆ ದೊರೆತಿರುವ ವೀರಗಲ್ಲುಗಳ ಅಲ್ಪಭಾಗದ ಅಧ್ಯಯನದ ಮೇಲೆ ಈ ಮೇಲಿನ ವಿಂಗಡಣೆಯನ್ನು ಮಾಡಲಾಗಿದೆ. ಉಳಿದಿರುವ ಅಪ್ರಕಟಿತ ವೀರಗಲ್ಲುಗಳು ಲಕ್ಷಗಳಿಗೂ ಮಿಗಿಲಾಗಿವೆ ಎಂದರೆ ಅದು ಉತ್ಪ್ರೇಕ್ಷೆಯ ಮಾತಲ್ಲ. ಯಾವುದೇ ಹೋರಾಟದಲ್ಲಿ ಮಡಿದ ವೀರನ ಸ್ಮಾರಕವಾಗಿ ನೆಟ್ಟಕಲ್ಲುಗಳನ್ನು ವೀರಗಲ್ಲುಗಳು ಎಂಬುದಾಗಿ ಕರೆಯುತ್ತಾರೆ. ಈ ವೀರಗಲ್ಲುಗಳು ಬರಹವನ್ನು ಮಾತ್ರವಲ್ಲದೆ ಶಿಲ್ಪದ ವಿವರಗಳನ್ನೂ ಹೊಂದಿರುತ್ತವೆ. ಅಂದರೆ, ಶಾಸನ ಮತ್ತು ಶಿಲ್ಪ, ಆ ವೀರಗಲ್ಲು ಯಾವ ವೀರನ ಸ್ಮಾರಕವಾಗಿದೆಯೋ ಆ ವೀರನ ಪರಾಕ್ರಮವನ್ನು ಸಾರುವಂತಹದೇ ಆಗಿರುತ್ತದೆ[೧೯]"

"ಕರ್ನಾಟಕದಲ್ಲಿ ದೊರಕುವ ವೀರಗಲ್ಲುಗಳು ತಮ್ಮ ಸಂಖ್ಯೆ, ಶಿಲ್ಪ ಮತ್ತು ಶೈಲಿಗಳಿಂದ ಇಡೀ ಭಾರತದಲ್ಲಿ ತಮ್ಮದೇ ಆದ ವೈಶಿಷ್ಟ್ಯವನ್ನು ಪಡೆದಿವೆ. ಎಷ್ಟೋ ವೀರಗಲ್ಲುಗಳ ಮೇಲಿನ ಶಾಸನ ಬರಹಗಳು ರೋಮಾಂಚನವನ್ನು ಹುಟ್ಟಿಸುವ ವೀರಗಾಥೆಗಳಾಗಿವೆ. ವೀರರಪೌರುಷ, ಕೆಚ್ಚು ಸ್ವಾಭಿಮಾನ, ತ್ಯಾಗಗಳು ಕನ್ನಡ ಜನದ ಹೆಮ್ಮೆಗೆ ಪಾತ್ರವಾಗಿವೆ. ಕರ್ನಾಟಕ ಮೊದಲಿನಿಂದ ಧರ್ಮವೀರರ, ಯುದ್ಧವೀರರ ತವರೂರು ಎನ್ನಿಸಿದೆ[೨೦]" ಮಂಡ್ಯಜಿಲ್ಲೆ ಶಾಸನಗಳಲ್ಲಿ ಹಾಗೂ

ದೇವಾಲಯಗಳಲ್ಲಿ ಹೇಗೆ ವಿಶಿಷ್ಟತೆಯನ್ನು ಪಡೆದುಕೊಂಡಿದೆಯೋ ಹಾಗೆ ವೀರಗಲ್ಲುಗಳಲ್ಲೂ ತನ್ನ ವಿಶಿಷ್ಟತನವನ್ನು ಮೆರೆಸಿಕೊಂಡು ಬಂದಿದೆ. ಮುತ್ತತ್ತಿ ನೆರೆಯ ಮದ್ದೂರು ತಾಲ್ಲೂಕಿನ ಆತಕೂರು

ಶಾಸನವು "ಕಾಡುಹಂದಿಯನ್ನು ಬೇಟೆಯಲ್ಲಿ ಕೊಂದು ತಾನೂ ಸತ್ತ ಕಾಳಿ ಎಂಬ ನಾಯಿಯ ಸ್ಮಾರಕವೇ ಆಗಿದೆ. ಶಾಸನದ ಮೇಲು ತುದಿಯಲ್ಲಿ ನಾಯಿ ಹಂದಿಗಳು ಕಾದಾಡುತ್ತಿರುವಂತೆ ಶಿಲ್ಪಿ ಕೊರೆದಿದ್ದಾನೆ.[೨೦]" ಅತ್ಯಂತ ಗಮನಾರ್ಹವಾದ ಶಿಲ್ಪ ಮತ್ತು ಶಾಸನಗಳ ಜೊತೆಗೆ ಇದೇ ಜಿಲ್ಲೆಯ ಮುತ್ತತ್ತಿಯ ವೀರಗಲ್ಲುಗಳ ಅಪೂರ್ವವು ವಿಶಿಷ್ಟವೂ ಆದ ಮೊಸಳೆ ಮತ್ತು ಕರಡಿ ವೀರಗಲ್ಲುಗಳ ಕೊಡುಗೆಯಿಂದ ತನ್ನ ಕಾಣಿಕೆಯನ್ನು ಮಂಡ್ಯ ಜಿಲ್ಲೆಯು ಕರ್ನಾಟಕದ ವೀರಪರಂಪರೆಗೆ ನೀಡಿದೆ.

'ಮುತ್ತತ್ತಿ' ಸ್ಥಳದಲ್ಲಿ ಅಪಾರವಾದ ವೀರಗಲ್ಲುಗಳು ಇದ್ದು ಮಾನವರ ಅಜ್ಞಾನಕ್ಕೆ ತುತ್ತಾಗಿ ನಾಶವಾಗಿವೆ. ದೇವಾಲಯದ ಎದುರಿಗೆ ತುಸು ದೂರದಲ್ಲಿ ಪಶ್ಚಿಮಾಭಿಮುಖವಾಗಿ ಈ ವೀರಗಲ್ಲುಗಳನ್ನು ನಿಲ್ಲಿಸಲಾಗಿತ್ತು. ಅಲ್ಲದೇ ದೇವಾಲಯವಿರುವ ಗರ್ಭಗುಡಿಯ ಬಳಿಯಲ್ಲು ಹಲವಾರು ವೀರಗಲ್ಲು ಸ್ಮಾರಕಗಳಿದ್ದು ಅವುಗಳಲ್ಲಿ ಬಹುತೇಕ ಸ್ಮಾರಕಗಳನ್ನು ಗರ್ಭಗುಡಿ ನಿರ್ಮಾಣದ ವೇಳೆಯಲ್ಲಿ ತಳಪಾಯಕ್ಕೆ ಹಾಕಲಾಗಿದೆ ಎಂಬ ಹೇಳಿಕೆ ಇದೆ. ಈಗ ಈ ಸ್ಥಳದಲ್ಲಿ ನಾಲ್ಕು ವೀರಗಲ್ಲುಗಳು ಮಾತ್ರ ಉಳಿದುಬಂದಿದೆ. ದೇವಾಲಯದ ಮುಂದೆ ಪಶ್ಚಿಮಾಭಿಮುಖವಾಗಿ ನಿಲ್ಲಿಸಿದ್ದ ಮೊಸಳೆ ಕಾಳಗದ ವೀರಗಲ್ಲನ್ನು ರಸ್ತೆ ಅಗಲ ಮಾಡುವ ವೇಳೆಯಲ್ಲಿ ಅದನ್ನು ತಂದು ದೇವಾಲಯದ ಆವರಣದಲ್ಲಿರುವ ಅರಳಿಮರದ ಬುಡದಲ್ಲಿ ಇಡಲಾಗಿದೆ. ಮೇಲೆ ತಿಳಿಸಿದ ವೀರಗಲ್ಲುಗಳ ಪ್ರಕಾರಗಳಲ್ಲೇ ವಿಶಿಷ್ಟವಾದ ಈ ವೀರಗಲ್ಲುವು ಮೊಸಳೆಯ ಜೊತೆಗೆ ವೀರನೊಬ್ಬ ಹೋರಾಡುತ್ತಿರುವ ಸ್ಮಾರಕವಾಗಿದೆ. ಮೇಲೆ ಉಲ್ಲೇಖಿತ ಏಳು ವೀರಗಲ್ಲು ಪ್ರಕಾರಗಳ ಜೊತೆಗೆ ೮ನೇ ಪ್ರಕಾರವಾಗಿ ಈ 'ಮೊಸಳೆ ಜೊತೆಗೆ ಹೋರಾಡುತ್ತಿರುವ' ಪ್ರಕಾರವನ್ನು ಸೇರಿಸಬಹುದಾಗಿದೆ. "ಈ ವೀರಗಲ್ಲು ೪೦ ಅಂಗುಲ ಉದ್ದ, ೨೬ ಅಂಗುಲ ಅಗಲ, ೪.೧/೨ ಅಂಗುಲ ದಪ್ಪದಿಂದ ಕೂಡಿದ್ದು ಕೆಳಭಾಗಕ್ಕೆ ಬಂದಂತೆಲ್ಲ ದಪ್ಪ ಕಡಿಮೆಯಾಗುತ್ತ ೩ ಅಂಗುಲಕ್ಕೆ ಇಳಿದು ಅಂತ್ಯದಲ್ಲಿ ೪ ಅಂಗುಲಕ್ಕೆ ಏರಿದೆ. ಕೆಂಪು ಮಿಶ್ರಿತ ಬಿಳಿಬಣ್ಣದ ಈ ವೀರಗಲ್ಲಿನಲ್ಲಿ ೧೯ ಅಂಗುಲ ಅಗಲ ಮತ್ತು ೧೧ ಅಂಗುಲ ಉದ್ದದ ಭಾಗದಲ್ಲಿ ೫ ಸಾಲುಗಳ ಗ್ರಂಥಾಕ್ಷರವುಳ್ಳ ಶಾಸನವಿದೆ[೨೧]" ಶಾಸನ ಭಾಗದಿಂದ ಮೇಲೆ ೧೫ ಅಂಗುಲ ಉದ್ದ ಮತ್ತು ೨೪ ಅಂಗುಲ ಅಗಲದ ಒಂದು ಶಿಲ್ಪವಿದ್ದು; ಅದರ ವಿವರ ಹೀಗಿದೆ; ಒಬ್ಬನ

ಎಡಗಾಲನ್ನು ಮೊಸಳೆಯು ಸೆಳೆಯುತ್ತಿದೆ, ಮತ್ತೊಬ್ಬ ಅವನನ್ನು ಎಳೆಯುತ್ತಿದ್ದಾನೆ. ಎರಡು ನಾಯಿಗಳು ಅವರ ಜೊತೆ ಇವೆ.

ಮುತ್ತತ್ತಿಯ ಈ ಅರಣ್ಯಭಾಗದ ಕಾವೇರಿ ನದಿಯ ನೀರಿಗಾಗಿ ಶಿಲ್ಪದಲ್ಲಿರುವ ಇಬ್ಬರು ವೀರರು ನಾಯಿಗಳ ಜೊತೆಯಲ್ಲಿ ಬಂದಾಗ (ಬೇಟೆಗಾಗಿ) ಮೊಸಳೆಯೊಂದು ಓರ್ವನ ಕಾಲನ್ನು ಸೆಳೆಯಲು ಬಂದಾಗ ಮತ್ತೊಬ್ಬ ಅವನನ್ನು ರಕ್ಷಿಸಲು ಬಂದು ವಿಫಲನಾಗಿದ್ದಾನೆ. ಇಬ್ಬರನ್ನು ಮೊಸಳೆ ಕೊಂದು ಹಾಕಿದೆ. ಇವರ ಸ್ಮಾರಕವಾಗಿ ಈ ವೀರಗಲ್ಲನ್ನು ಹಾಕಿಸಲಾಗಿದೆ. ಇವರು ಮೊಸಳೆ ಜೊತೆಗೆ ಹೋರಾಟವನ್ನೇ ಮಾಡಿದ್ದಾರೆ. ಅಂತಿಮವಾಗಿ ವಿಫಲರಾಗಿ ಮೊಸಳೆ ಬಾಯಿಗೆ ತುತ್ತಾಗಿದ್ದಾರೆ. ಈ ವೀರಗಲ್ಲುವಿನ ಎರಡನೆಯ ಹಂತ ಮತ್ತು ಎಡಭಾಗ ಹೊಡೆದು ಹೋಗಿರುವುದರಿಂದ ಎರಡನೇ ಹಂತದ ಪ್ರಾರಂಭದಲ್ಲಿ ಚಾಮರಧಾರಿಣಿಯೋರ್ವಳ ಹಾಗೂ ಸಿದ್ಧಾಸನದಲ್ಲಿ ಕುಳಿತಿರುವ ಇಬ್ಬರ ಪಾದಗಳು ಕಾಣುತ್ತಿವೆ. ಅಂದರೆ ಮೊಸಳೆ ಜೊತೆ ಇಬ್ಬರೂ ವೀರರು ವೀರಾವೇಶದಿಂದ ಹೋರಾಡಿ ಪ್ರಾಣ ತೆತ್ತಿದ್ದಾರೆ. ಇವರ ಬಳಿಯಲ್ಲಿ ಯಾವುದೇ ಆಯುಧಗಳಿಲ್ಲ. ಶಿರೋಮುಡಿ ಮತ್ತು ಸಾಧಾರಣ ಉಡುಗೆಯ ಕಚ್ಚೆಪಂಚೆಗಳಿವೆ. ಸಾಮಾನ್ಯ ಮನುಜರಾದ ಇವರು ಇಲ್ಲಿ ಮೆರೆದಿರುವ ಸಾಹಸದಿಂದ ಅಮರರಾಗಿದ್ದಾರೆ. ಇವರ ಮುಂದೆ ನಾಯಿಗಳೆರಡರ ಸ್ಪಷ್ಟ ಚಿತ್ರಗಳಿವೆ. ಆದರ ಲಿಪಿಯು ತೃಟಿತವಾಗಿದ್ದು ನಕಲು ತೆಗೆಯಲು ಮತ್ತು ಓದಲು ಕಷ್ಟವಾಗಿದೆ. ಲಿಪಿ ಆಧಾರ ಮತ್ತು ಶಿಲ್ಪದ ಆಧಾರದ ಮೇಲೆ ಈ ವೀರಗಲ್ಲಿನ ಕಾಲ ಸುಮಾರು ೧೨ನೆಯ ಶತಮಾನದೆಂದು ನಿರ್ಧರಿಸಬಹುದಾಗಿದೆ. ಇಲ್ಲಿನ ದನದದೊಡ್ಡಿಯ ಗೋವಳರೋ ಅಥವಾ ಬೇಟೆಗಾಗಿ ಬಂದವರೋ ಈ ವೀರರಾಗಿದ್ದಾರೆ. 'ಮುತ್ತತ್ತಿ' ಸ್ಥಳದ ಕಾವೇರಿ ನದಿಯಲ್ಲಿ ನಡೆದ ಈ ಪ್ರಾಚೀನ ಘಟನೆ, ಮುತ್ತತ್ತಿ ಹಾಗೂ ಕರ್ನಾಟಕದ ವೀರ ಪರಂಪರೆಯ ಕುರುಹು ಆಗಿದೆ. ಇದರ ಬಳಿಯಲ್ಲಿಯೇ ಎರಡನೆಯ ಗ್ರಾನೈಟ್ ವೀರಗಲ್ಲುವೊಂದನ್ನು ಇರಿಸಿದ್ದು ಇದು ಕೇವಲ ೧ ಅಡಿ ಎತ್ತರ ೧/೪ ಅಡಿ ಅಗಲವನ್ನು ಹೊಂದಿದೆ. ಓರ್ವ ಪುರುಷ, ಓರ್ವ ಹೆಂಗಸು ಹಾಗೂ ಒಂದು ಪ್ರಾಣಿ ಪ್ರಾಯಶಃ ಕ್ರೂರ ಪ್ರಾಣಿಯಾದ ಹುಲಿಯೇ ಇರಬೇಕು. ಚಿತ್ರಣಗಳಿದ್ದು ಪತಿಪತ್ನಿಯರ ಬಳಿ ಬಂದ ಹುಲಿ ಪತಿಯನ್ನು ಅಥವಾ ಸತಿಯನ್ನು ಕೊಂದು ತಿಂದಿರಬೇಕು. ಅದರ ಸ್ಮಾರಕವಾಗಿ ಈ ವೀರಗಲ್ಲು ನಿರ್ಮಾಣವಾಗಿದೆ. ಕ್ರಿ.ಶ.ಸುಮಾರು ೧೫ನೆ ಶತಮಾನಕ್ಕೆ ಈ ವೀರಗಲ್ಲು ಸೇರುತ್ತದೆ.

ಇಲ್ಲಿನ ಮೂರನೇಯ ವೀರಗಲ್ಲು ಮುತ್ತತ್ತಿರಾಯ ದೇವಾಲಯದ ಹಿಂದೆ ಇರುವ ಮುತ್ತತ್ತಿರಾಯನ ಕಾಲೋನಿ ಎಂಬ ಸೋಲಿಗರ ಬೀದಿಯಲ್ಲಿದ್ದು ಗಮನಾರ್ಹವಾಗಿದೆ. ಇದು ನೆಲದಲ್ಲಿ ಬಹುತೇಕ ಹುದುಗಿಹೋಗಿದ್ದು, ನೆಲದಿಂದ ಮೇಲಕ್ಕೆ ೧೭ ಅಂಗುಲ ಉದ್ದ, ೧೫ ಅಂಗುಲ ಅಗಲ ಮತ್ತು ೬ ಅಂಗುಲ ದಪ್ಪದಿಂದ ಕೂಡಿದೆ. ಕಲ್ಲಿನ ಬಲಭಾಗದ ಮೇಲುತುದಿ ಸ್ವಲ್ಪ ಹೊಡೆದಿದೆ. ಈ ಸ್ಮಾರಕದ ಕಲ್ಲು ಸಹ ಕೆಂಪುಮಿಶ್ರಿತ ಬಿಳಿಬಣ್ಣವನ್ನು ಹೊಂದಿದೆ. ಸೂರ್ಯಚಂದ್ರರ ಚಿತ್ರಗಳು ಮೇಲೆ ಇವೆ. ಈ ಶಿಲ್ಪ ಚಿತ್ರಣದಲ್ಲಿ ಪುರುಷನೊಬ್ಬನು ಪ್ರಾಣಿಯೊಂದನ್ನು ಕೊಲ್ಲಲು ಕೊಡಲಿಯನ್ನು ಮೇಲಕ್ಕೆ ಎತ್ತಿದ್ದಾನೆ. ಪಕ್ಕದಲ್ಲಿ ಈತನ ಸತಿ ನಿಂತಿದ್ದಾಳೆ. ಈ ಪ್ರಾಣಿಯ ಚಿತ್ರಣ ಸ್ಪಷ್ಟವಾದುದಾಗಿಲ್ಲ. ಎರಡು ಕಾಲುಗಳಲ್ಲಿ ಆಸರೆಯಾಗಿ ನಿಂತು ಕೈಗಳಿಂದ ಪುರುಷನ ಮೇಲೆ ಹಲ್ಲೆ ಮಾಡುತ್ತಿದೆ. ಕಾಲು ಉದರ ಶರೀರಗಳಿಂದಾಗಿ ಕರಡಿಯ ಹಾಗೆ ಕಾಣುತ್ತಿದ್ದರು, ಶಿರೋಭಾಗವು ಹುಲಿಯನ್ನು ಸೂಚಿಸುತ್ತದೆ. ಬಾಲವೂ ಸಹ ಸ್ಪಷ್ಟವಾಗಿದೆ. ಹುಲಿಯ ದೇಹವಿನ್ಯಾಸ ಕಡಿಮೆ ಇರುವುದರಿಂದ ಈ ಪ್ರಾಣಿಯನ್ನು ಕರಡಿ ಎಂದು ನಿರ್ಧರಿಸಬಹುದು. ಮರ ಕಡಿಯಲು ಬಂದ ಈ ದಂಪತಿಗಳ ಮೇಲೆ ಕರಡಿ ಬಂದು ಎರಗಿದೆ. ಪುರುಷನು ವೀರತನದಿಂದ ತನ್ನ ಕೈಯಲ್ಲಿರುವ ಕೊಡಲಿಯಿಂದ ಹೋರಾಡಿದ್ದನಾದರೂ ಅಂತ್ಯದಲ್ಲಿ ಸಾವನ್ನು ಅಪ್ಪಿದ್ದಾನೆ. ಈ ಘಟನೆಯ ಸ್ಮಾರಕವೇ ಈ ವೀರಗಲ್ಲು ವೀರನು ಚಿತ್ರಣದಲ್ಲಿ ಬಲಿಷ್ಠವಾದ ತೊಡೆಗಳನ್ನು ಹೊಂದಿದ್ದಾನೆ. ಉತ್ತಮವಾದ ದೇಹಭಾಗವಿದೆ. ಕಚ್ಚೆಯನ್ನು ಮಾತ್ರ ಧರಿಸಿದ್ದಾನೆ. ಉದ್ದನೆಯ ಲೋಹದ ಕೊಡಲಿಯನ್ನು ಎತ್ತಿಹಿಡಿದಿದ್ದಾನೆ. ಈ ಭಾಗದಲ್ಲಿನ ಹಲಗೂರಿನಲ್ಲಿ ಕಬ್ಬಿಣದ ಲೋಹಗಾರಿಕೆ ಪ್ರಸಿದ್ಧಿ ಪಡೆದಿದ್ದು ಇದನ್ನು ಅಲ್ಲಿಯೇ ತಯಾರಿಸಲಾಗಿದೆ. ಇವನ ಬಳಿಯ ಹೆಂಗಸು ಆಶ್ಚರ್ಯಚಕಿತಳಾಗಿ ಕೈ ಮಡಚಿ ನೋಡುತ್ತಿದ್ದಾಳೆ. ಕ್ರಿ.ಶ.ಸುಮಾರು ೧೩ನೇ ಶತಮಾನದಲ್ಲಿ ನಡೆದ ಘಟನೆಯ ಸ್ಮಾರಕ ಈ ವೀರಗಲ್ಲು ಆಗಿದೆ. ಮೇಲೆ ತಿಳಿಸಿದ ಎಂಟು ವೀರಗಲ್ಲು ಪ್ರಕಾರಗಳ ಜೊತೆಗೆ "ಕರಡಿ ಜೊತೆಗೆ ಮಾನವರ ಹೋರಾಟದ ವೀರಗಲ್ಲುಗಳು" ಎಂಬ ೯ನೇ ಪ್ರಕಾರವನ್ನು ಸೇರಿಸಬಹುದಾಗಿದೆ. ಇದರ ಬಳಿಯಲ್ಲಿಯೇ ಇರುವ ಎರಡೂವರೆ ಅಡಿ ಅಗಲ ಮತ್ತು ಎರಡು ಅಡಿ ಎತ್ತರದ ವೀರಗಲ್ಲಿನ ಭಾಗವೊಂದಿದ್ದು ವೀರನ ಪಾದಗಳ ಚಿತ್ರಗಳು ಮಾತ್ರವಿದ್ದು ಅಸ್ಪಷ್ಟವಾಗಿದೆ. ಮುತ್ತತ್ತಿಯ ಹೋಬಳಿ ಕೇಂದ್ರವಾದ ಹಲಗೂರಿನಲ್ಲಿ ಏಳು ವೀರಗಲ್ಲು ಮತ್ತು ಮಾಸ್ತಿಕಲ್ಲುಗಳು ದೊರೆತಿವೆ. "ಕ್ರಿ.ಶ.ಸುಮಾರು ೧೨ನೇ ಶತಮಾನದಿಂದ ೧೬ನೇ ಶತಮಾನದ ಅವಧಿಯ ಈ ವೀರ ಮತ್ತು ಮಾಸ್ತಿಕಲ್ಲುಗಳು ರಾಜಕೀಯ, ತುರುಗೋಳು, ವಿಷಯಗಳನ್ನು ತಿಳಿಸುವ ಇವುಗಳಲ್ಲಿ ಗೋವನ್ನು ರಕ್ಷಿಸಲು ನಾಯಿಯೊಂದು ಹೋರಾಡುತ್ತಿರುವ ಅಪೂರ್ವ ಚಿತ್ರಣವೂ ಇಲ್ಲಿದೆ[೨೫]" ಪಾದ್ದಾರೆ ಬಳಿಯ ವೀರಭದ್ರನ ಒಡ್ಡು ಎಂಬಲ್ಲಿ ವೀರಗಲ್ಲು

ಒಂದಿದ್ದು ೩ ಅಡಿ ಎತ್ತರ ಮತ್ತು ಅಷ್ಟೇ ಅಗಲವನ್ನು ಹೊಂದಿದೆ. ವೀರನು ಉತ್ತಮ ಪೋಷಾಕನ್ನು ಧರಿಸಿದ್ದು ಮುಂಗೈ, ತೋಳು, ಕೊರಳುಗಳಲ್ಲಿ ಆಭರಣಗಳನ್ನು ಧರಿಸಿದ್ದಾನೆ.

ನಡುವಿನಲ್ಲಿ ದೊಡ್ಡದಾದ ಬಿಚ್ಚುಗತ್ತಿ ಇದೆ. ಎತ್ತರದ ಶಿರೋಮುಡಿ ಉದ್ದನೆಯ ಗಡ್ಡ ಮೀಸೆಗಳು ಮುಖದಲ್ಲಿದ್ದು ಕಿವಿಯಲ್ಲಿ ಕುಂಡಲಗಳಿವೆ. ಎರಡೂ ಕೈಗಳಲ್ಲೂ ಆಯುಧಗಳನ್ನು ಹಿಡಿದಿದ್ದಾನೆ. ಎಡಗೈಯಲ್ಲಿ ಉದ್ದನೆಯ ಬಿಲ್ಲುವೊಂದನ್ನು ಹಿಡಿದಿದ್ದರೆ ಬಲದಕೈನಲ್ಲಿ ಖಡ್ಗವನ್ನು ಎತ್ತಿ ಹಿಡಿದಿದ್ದಾನೆ. ಅಂದರೆ ಈ ವೀರನು ಬಿಲ್ವಿದ್ಯೆ ಮತ್ತು ಖಡ್ಗ ಕಾಳಗಗಳೆರಡರಲ್ಲೂ ಪ್ರವೀಣನಾಗಿದ್ದನೆಂದು ತೋರುತ್ತದೆ. ಶಿಲ್ಪದಲ್ಲಿ ವಿವರಗಳ ಕೊರತೆಯಿಂದ ಯುದ್ಧ ಯಾರ ಜೊತೆ ನಡೆಯಿತೆಂಬುದು ಸ್ಪಷ್ಟವಿಲ್ಲ. ಆದರೂ ಅರಣ್ಯದ ಈ ಸ್ಥಳದಲ್ಲಿ ಈ ವೀರನು ಶತ್ರುಗಳ ಜೊತೆ ಹೋರಾಡಿ ಹತನಾಗಿದ್ದಾನೆ. ಕ್ರಿ.ಶ.ಸುಮಾರು ೧೧ನೇ ಶತಮಾನಕ್ಕೆ ಈ ವೀರಗಲ್ಲು ಸೇರುತ್ತದೆ ಬಳಿಯಲ್ಲಿರುವ ಹರಿಹರ ಗ್ರಾಮ ಮತ್ತು ಕುಪ್ಪೆದೊಡ್ಡಿಗಳಲ್ಲೂ ೧೬ ವೀರ ಮತ್ತು ಮಾಸ್ತಿಕಲ್ಲುಗಳಿವೆ. "ರಾಜಕೀಯ, ತುರುಕಾಳಗ ವಿಷಯಗಳಿಗಾಗಿ ನಡೆದ ಈ ಸ್ಮಾರಕಗಳೂ ಸಹ ಅಪೂರ್ವವಾದವುಗಳಾಗಿವೆ[೨೪]" ಇಲ್ಲಿನ "ಕಾಡಹಳ್ಳಿ, ಹಲಸೂರು, ನಾಗರಸನಕೋಟೆ, ದಳವಾಯಿ ಕೋಡಿಹಳ್ಳಿ, ಬಾಳೆಹೊನ್ನಿಗ ಪ್ರದೇಶದಲ್ಲಿ ಯುದ್ಧ ಮತ್ತು ತುರುಕಾಳಗದ ವೀರಗಲ್ಲು, ಮಾಸ್ತಿಕಲ್ಲುಗಳು ದೊರೆತಿವೆ[೨೫]" ಕ್ರಿ.ಶ.ಸುಮಾರು ೧೦ನೇ ಶತಮಾನದಿಂದ ಇಂದಿನವರೆಗಿನ ಮುತ್ತತ್ತಿ ಪರಿಸರದ ವೀರ ಮತ್ತು ತ್ಯಾಗದ ಪರಂಪರೆಗೆ ಉತ್ತಮ ಕೊಡುಗೆಗಳಾಗಿವೆ.

ಅ) ತಾಮ್ರಶಾಸನ :-

"ಮುತ್ತತ್ತಿಯ ಮುತ್ತತ್ತಿರಾಯ ದೇವಾಲಯವನ್ನು ಕುರಿತ ತಾಮ್ರಶಾಸನವೊಂದು ಕನಕಪುರ ತಾಲ್ಲೂಕಿನ ನಾಯಕನಹಳ್ಳಿಯ ಸಂಜೀವಯ್ಯ ಎಂಬ ಆದಿಜಾಂಬವ ಮತಕ್ಕೆ ಸೇರಿರುವ ಮುತ್ತತ್ತಿರಾಯನ ಸೇವಾಕರ್ತರ ವಶದಲ್ಲಿದೆ. ಇದು ತಮ್ಮ ಪೂರ್ವಿಕರಿಂದ ತಮಗೆ ಬಂದಿದ್ದೆಂದು ತಿಳಿಸುತ್ತಾರೆ. ಮುತ್ತತ್ತಿ ದೇವಾಲಯಕ್ಕೆ ಸಂಬಂಧಿಸಿದಂತೆ ದೊರೆತ್ತಿರುವ ಏಕೈಕ ತಾಮ್ರಶಾಸನವು ೮.೫ ಅಂಗುಲ ಉದ್ದ ಮತ್ತು ೫.೧ ಅಂಗುಲ ಅಗಲವನ್ನು ಉಳ್ಳ ಒಂದೇ ಹಲಗೆಯಲ್ಲಿ ರಚಿತವಾಗಿದೆ. ಹಲಗೆಯ ಮೇಲ್ಭಾಗದಲ್ಲಿ ಒಂದು ರಂಧ್ರವನ್ನು ಮಾಡಿದ್ದಾರೆ. ಈ ಹಲಗೆಯ ಒಟ್ಟು ತೂಕ ೧೭೫ಗ್ರಾಂಗಳಾಗಿದ್ದು, ಹಲಗೆಯ ಎರಡೂ ಕಡೆಗಳಲ್ಲೂ ಬರಹವಿದ್ದು ಮೊದಲ ಕಡೆ ೨೬ ಪಂಕ್ತಿಗಳನ್ನು, ಎರಡನೆಯ ಕಡೆ ೧೭ ಪಂಕ್ತಿಗಳನ್ನು ಕೊರೆಯಲಾಗಿದೆ.

ಈ ತಾಮ್ರಶಾಸನದಲ್ಲಿ ಕಾಲದ ಉಲ್ಲೇಖವಿಲ್ಲ. ಶ್ರೀರಂಗರಾಯನು ಶಿವನಸಮುದ್ರವನ್ನು ಆಳುವ ಸಮಯದಲ್ಲಿ ಎಂದು ಹೇಳಿರುವುದರಿಂದ ವಿಜಯನಗರದ ಅರಸರ ಕಾಲದ ಅರಸುಗಳಲ್ಲಿ ಒಬ್ಬನಾದ ಕ್ರಿ.ಶ.ಸುಮಾರು ೧೬೬೦ರಲ್ಲಿ ಆಳಿದ ಶ್ರೀರಂಗರಾಯನೇ ಆಗಿರಬಹುದು. ೧೮ನೇ ಶತಮಾನದ ಅಂತ್ಯಕಾಲದ ಲಿಪಿಸ್ವರೂಪವು ಇದಕ್ಕೆ ಪೂರಕವಾಗಿದ್ದು, ಮುತ್ತತ್ತಿ ದೇವಾಲಯದ ಸ್ವಾಮ್ಯವನ್ನು ತಮ್ಮದೆಂದು ಹೇಳಿಕೊಳ್ಳಲು ಸೃಷ್ಟಿಸಿಕೊಂಡಂತಹ ಶಾಸನವಾಗಿದೆ.

ಈ ತಾಮ್ರಶಾಸನದ ಎರಡನೆಯ ಪಂಕ್ತಿಯಲ್ಲಿ ಶ್ರೀರಂಗರಾಯನಿಗೂ ದ್ವಾಪರಯುಗಕ್ಕೂ ಸಂಬಂಧ ಕಲ್ಪಿಸಿ ಗೊಂಡಲಕ್ಕೀಡು ಮಾಡಿದ್ದಾರೆ. ಆದರೂ ಮುಂದಿನ ಪಂಕ್ತಿಗಳನ್ನು ಸುಲಭವಾಗಿ ಅರ್ಥೈಸಬಹುದು. ಶ್ರೀರಂಗರಾಯರ ಅರಮನೆಯಲ್ಲಿ ಸ್ವಾಮಿಯು ವ್ಯಾಘ್ರ ರೂಪದಲ್ಲಿ ಮಲಗಿದ್ದು, ನಂತರ ಮೈದುಂಬಿಬಂದು ತನ್ನ ನಿಜನಾಮಧೇಯ ಮುತ್ತತ್ತಿರಾಯ ಎಂದು ಹೇಳಿಕೊಂಡು ತನಗೆ ಮುಳುಪಲ್ಲಕ್ಕಿ ಆಗಬೇಕು ಎಂದು ಕೇಳಲು ಆಗ ಶ್ರೀರಂಗರಾಯನು ತಾನು ಏರಿ ಬರುತ್ತಿದ್ದಂತಹ ಪಲ್ಲಕ್ಕಿಯನ್ನು ಕೊಟ್ಟು ಜೊತೆಗೆ ಮುಳುಪಲ್ಲಕ್ಕಿ(ವಿಶೇಷಪಲ್ಲಕ್ಕಿ)ಯನ್ನು ಮಾಡಿಸಿಕೊಟ್ಟು, ಸ್ವಾಮಿಯನ್ನು ಮುತ್ತತ್ತಿಗೆ ಕಳುಹಿಸಿಕೊಟ್ಟನು. ಹಲಗೂರು ನಾರಾಯಣೈಯ್ಯಗೆ ಹೇಳಿ ಸ್ವಾಮಿಯ ದೀಪಾರಾಧನೆಗೆ ಬ್ಯಾಡರಹಳ್ಳಿಯ ಬಳಿ ಹೊಲವನ್ನು ಕೊಡುಗೆ ಹಾಕಿಸಿದನು.

ಆ ಸಮಯದಲ್ಲಿ ಕಾಳಮುತ್ತದಾಸ ಎಂಬುವವನು ಕಕ್ಕೆಯ ಸೊಪ್ಪಿನಿಂದ ಗುಡಿಸಲನ್ನು ಕಟ್ಟಿಕೊಂಡು ಸ್ವಾಮಿಯನ್ನು ಕಾದುಕೊಂಡು ಇದ್ದನು. (೧೯೮೬ನೇ ಇಸವಿ ತನಕ ಕಕ್ಕೆಮರದ ಮೂರ್ತಿಯನ್ನೇ ಪೂಜಿಸುತ್ತಿದ್ದರು. ನಂತರ ಶಿವಾರಪಟ್ಟಣದಿಂದ ಶಿಲಾಮೂರ್ತಿ ಮಾಡಿಸಿ ಪ್ರತಿಷ್ಠಾಪಿಸಲಾಯಿತು). ಹೀಗೆ ಕಾಳಮುತ್ತದಾಸನು ದೇವರನ್ನು ಕಾಯುತ್ತಿರುವಾಗ ಮಾಯಗಗೌಡ, ಸಿಗೇಗೌಡರ ಹಸುವು ಸ್ವಾಮಿ ಇದ್ದಂತಹ ಹುತ್ತಕ್ಕೆ ಹಾಲು ಎರೆಯುತ್ತಾ ಇತ್ತು. ಆಗ ಹಲಗೂರಿನ ಕಾಳೇಗೌಡ, ಕೆಂಚೇಗೌಡ ಎಂಬ ಅಣ್ಣ ತಮ್ಮಂದಿರು ದನ ಕಾಯುತ್ತಿರುವಾಗ ಹುಚ್ಚುಗಿಕ್ಕಿ ಹಿಡಿ ತಂದು ಆ ಕಾಳಮುತ್ತದಾಸನ ಕೈಗೆ ಕೊಟ್ಟರು.(ಈ ಹುಚ್ಚುಗಿಕ್ಕಿ ಹಿಡಿ ಶಬ್ದದ ಅರ್ಥ ಸ್ಪಷ್ಟವಾಗುವುದಿಲ್ಲ. ದೇವರಿಗೆ ಪ್ರಿಯವಾದ ಯಾವುದೋ ವಸ್ತುವಿರಬಹುದು). ಆಗ ಸ್ವಾಮಿಯ ಸಕಲಾಚರರೆಲ್ಲರೂ ಮುತ್ತತ್ತಿಯಲ್ಲಿ ಸೇರಿ ಈ ಕೆಂಚೇಗೌಡ, ಕಾಳೇಗೌಡ ಎಂಬ ಹೆಸರನ್ನು ತೆಗೆದು ಅವರಿಗೆ ಕಾಳಮುತ್ತ, ಕೆಂಚಮುತ್ತ ಎಂಬ ಹೆಸರನ್ನು ಇಟ್ಟು ಅವರನ್ನು ಕಾಳಮುತ್ತದಾಸನ ಹವಾಲು ಮಾಡಿ ದೇವರ ಪೂಜೆಗೆ ಎಡೆ ಮಾಡಿ ಇಟ್ಟುಕೊಂಡು ಇರಿ ಎಂದು ನಾಲ್ಕು ಮಂದಿಯ ಸಹಿ ಹಾಕಿಸಿ ಚಪ್ಪೊಡನ್ನು ಬರೆಯಿಸಿ ಕಾಳಮುತ್ತದಾಸನ ಕೈಗೆ ಕೊಟ್ಟರು.

## ಶಾಸನಪಾಠ

## ಹಲಗೆಯ ಮುಂಭಾಗ

೧. ಶ್ರಿ ಮತು ಶ್ರಿ ರಾಮಾನುಜ್ಯಯ ನಮ
೨. ಹ ದೊಪರಾ ಯುಗದಲ್ಲಿ ಸಂಜಿವ ರಾ
೩. ಯ್ಯನು ಬಂದು ಹುತ್ತದಲಿ ನಿತ್ತರೂ ಆ ಸ
೪. ಮೆಯ್ಯದಂಲ್ಲಿ ಶ್ರೀರಂಗರಾಯ್ಯರು ಸಿವನ
೫. ಸಮುದ್ರ ಆಳುವಲ್ಲಿ । ಅರಮನೆಯ್ಯಲಿ । ಬಲ
೬. ನ ತೊಟ್ಟಲ ತೊಲೆಯ್ಯ ಮೆಲೆ ವೆಗ್ರ ಮಲಗಿರ
೭. ಲು ಆ ಸಮಯ್ಯದಲ್ಲಿ । ಸ್ರಿ ರಂಗರಾಯರೂ
೮. ಆಂಲ್ಲಿ । ಯ್ಯಡ ಬಲದಲ್ಲಿ । ಯಿಥ ಸಾ
೯. ಮಾಜಿಕರು ಬಂದು ನೊಡಿದಲ್ಲಿ । ಶ್ವಮಿ ಮೈ
೧೦. ದುಂಬಿ ಬಂದು । ನಾನು ಮುತ್ತತ್ತಿರಾಯ್ಯ
೧೧. ಯ್ಯಂದು । ತಮ ನಾಮದಯ್ಯವಂನು ಹೆಳಿ
೧೨. ಕೊಂಡರೂ । ಆ ಸಮೆಯ್ಯದಲ್ಲಿ ಸ್ರಿ ರಂಗರಾ
೧೩. ಯ್ಯರು ಶ್ವಮಿ ನಿಉ ಬಂದ ಬಗೆಯೆನೆಂದು ಬಿ
೧೪. ಂನೈಸಿದಲ್ಲಿ ಶ್ವಮಿ ನಮಗೆ ಮುಳುಪಂಲ
೧೫. ಕಿ ಆಗಬೆಕೂಯಂದು ಕೆಳಿದಲ್ಲಿ ಆ ಕ್ಷಣ
೧೬. ದಲ್ಲಿ ಶ್ರಿ ರಂಗರಾಯ್ಯರು ತಾಉಯೆ
೧೭. ರಿ ಬರುವ ಪಂಲ್ಲಕ್ಕಿನೆ ಕೊಟು । ಮುಳು
೧೮. ಪಲ್ಲಕ್ಕಿಯ್ಯನು ಮಾಡಿಸಿಕೊಟು । ಮುಳು
೧೯. ವರ ಮುಂತತಿಗೆ ಕಳುಹಿದರೂ ।
೨೦. ಆ ಸಮಯಾದಲ್ಲಿ ಹಲಗೂರು ನಾರಣೈಯ್ಯಗೆ
೨೧. ಹೆಳಿಸಿ ಶ್ವಮಿಯ್ಯವರು ದಿಪರಾದನೆಗೆ ಬೈ
೨೨. ಡರ ಹಳ್ಳಿಯ್ಯಲಿ ಹೊಲ ಕೊಡುಗೆ ಹಾಕಿ
೨೩. ದು ಶ್ವಮಿಯ್ಯವರು ಹುತ್ತದಂಲ್ಲಿಯಿರು
೨೪. ವಾಗ್ಗೆ ಮಾಯ್ಯಗೌಡ ಸಿಗೆಗೌಡನ ಹ
೨೫. ಹಸು ಹುತ್ತಕ್ಕೆ ಹಲುಯರೆ
೨೬. ಯುತಯಿತು ಆಗ್ಗೆ ಕಾಳಮುತ್ತ

ಅದೇ ಹಲಗೆಯ ಹಿಂಭಾಗ

೨೭. ದಾಸನು ಕಂಕೆಸೊಪ್ಪು । ಗುಡಲು

೨೮. ಕಟಕೊಂಡು ಶ್ವಮಿಯ್ಯ । ಕಾದುಕೊಂ

೨೯. ಡು । ಯಿದ್ದನು ಹಲಗೂರ ಕಾ

೩೦. ಳೆಗೌಡ । ಕೆಂಚೆಗೌಡ ಅಚಣ ತಂಮದಿ

೩೧. ರೂ ದನ ಕಾಯುವಂಲ್ಲಿ ಹುಚುಗ್ಗಿಕ್ಕಿ ಹಿ

೩೨. ಡಿ ತಂದು । ಕಾಳಮುಂತದಾಸನ ಕೈವಸ

೩೩. ಕ್ಕೆ ಕೊಟರು ಆಗ ಶ್ವಮಿ ಸಕಲಾಚಾ

೩೪. ರೂ ಮುತಾತ್ತಿಯಲ್ಲಿ ಕೂಡಿ ಕೆಂ

೩೫. ಚ್ಚೆಗೌಡ ಕಾಳೇಗೌಡಯಂಬ ಹೆಸರ ಬಿ

೩೬. ಟು ಕಾಳಮುತ್ತ ಕೆಂಚ್ಚಮುತ್ತಯಂ

೩೭. ಬ ಹೆಸರಿಟ್ಟು ಯಿ ಕಾಳಮುತ್ತದಾಸ

೩೮. ನ ಹವಲು ಮಾಡಿ ಯಿ ದೆವ ಪುಜೆ ಮು

೩೯. ರು ಮುಉರುಯೆಡೆಯಾಗಿ ಯಿದುಕೊಂಡು

೪೦. ಯಿರಿಯಂದು ನಾಕ್ಲು ಮಂದಿ

೪೧. ಯಶಂ ಹಾಕಿ ಸನಪತಿಗಳು ಕೂಡಿ

೪೨. ಯಿ ಚಂಪೊಡು ಬರಸಿ ಕಾಳಮುಂತ ದಾ

೪೩. ಸನ ಕೈಗೆ ಕೊಂಟರೂ

ಮುತ್ತತ್ತಿಯ ಬಗ್ಗೆ ಬೆಳಕು ಚೆಲ್ಲುವಲ್ಲಿ ಈ ತಾಮ್ರಶಾಸನವು ಮಾಹಿತಿಯನ್ನು ಒದಗಿಸುತ್ತದೆ.[೨೬]

## ಅಡಿಟಿಪ್ಪಣಿ

೧. ಪಂಡಿತ ಮ.ಮಲ್ಲಪ್ಪ : ಒರುಗಲ್ಲು ಸೂರೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ಪುಟ-೩ ೧೯೭೯

೨.೩,೪,೫,೬, ಅದೇ ಪುಟ-೪೪-೯೧

೭. ಡಾ.ಡಿ.ಶಿವಸ್ವಾಮಿ, ಕಾವೇರಿ ಸೀಮೆಯ ಗ್ರಾಮದೇವತೆಗಳ ಅಧ್ಯಯನ, ಮಾನಸ ಪ್ರಕಾಶನ, ಬೆಂಗಳೂರು ಪುಟ- ೧೪೭

೮. ಡಾ.ಎ.ವಿ.ವೆಂಕಟರತ್ನಂ, ಡಾ.ಎಂ.ಬಿ.ಪದ್ಮ : ಇತಿಹಾಸ ಸಂಶೋಧನ ಮಾರ್ಗ, ಬಾಪ್ಕೋ ಪ್ರಕಾಶನ, ಬೆಂಗಳೂರು, ಪುಟ-೧೫, ೧೯೦೫

೯. ಮುತ್ತುರಾಜು ; ಮಳವಳ್ಳಿ ತಾಲ್ಲೂಕಿನ ಕೆಲವು ನವಶೋಧಿತ ಪ್ರಾಚ್ಯಾವಶೇಷಗಳು, ಇತಿಹಾಸ ದರ್ಶನ, ಸಂಪುಟ- ೨೨, ಪುಟ-೨೧, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ೨೦೦೭

೧೦. ಮುತ್ತುರಾಜು ; ಬಸವನಬೆಟ್ಟ ಅರಣ್ಯದಲ್ಲಿ ಪ್ರಾಗೈತಿಹಾಸಿಕ ಅವಶೇಷಗಳ ಪತ್ತೆ, ಕನ್ನಡಪ್ರಭ, ಬೆಂಗಳೂರು ಪುಟ-೫, ೪-೧೧-೧೯೯೭

೧೧. ಮುತ್ತುರಾಜು ; ಬೆಂಗಳೂರು ನಗರ ಮತ್ತು ರಾಮನಗರ ಜಿಲ್ಲೆಯ ಕೆಲವು ನವಶೋಧಿತ ಪ್ರಾಚ್ಯಾವಶೇಷಗಳು, ಇತಿಹಾಸ ದರ್ಶನ, ಸಂಪುಟ-೨೩, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ಪುಟ-೯, ೨೦೦೮

೧೨. ಮುತ್ತುರಾಜು ; ಸೂಳೆಕಲ್ ಮಠದ ಗುಹಾಚಿತ್ರಗಳು, ಇತಿಹಾಸದರ್ಶನ, ಸಂಪುಟ-೧೦, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ಪುಟ-೭೧, ೭೩, ೧೯೯೫

೧೩. ಮುತ್ತುರಾಜು ; ಕನಕಪುರದ ತಾಲ್ಲೂಕಿನ ಕೆಲವು ಬೃಹತ್ ಶಿಲಾಯುಗದ ಶಿಲಾಗೋರಿಗಳು ಹೊಸ ಶೋಧನೆ, ಇತಿಹಾಸದರ್ಶನ, ಸಂಪುಟ-೧೧, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ಪುಟ- ೩೯, ೧೯೯೬

೧೪. ಮುತ್ತುರಾಜು ; ಮಳವಳ್ಳಿ ತಾಲ್ಲೂಕಿನ ಕೆಲವು ನವಶೋಧಿತ ಪ್ರಾಚ್ಯಾವಶೇಷಗಳು, ಇತಿಹಾಸ ದರ್ಶನ, ಸಂಪುಟ-೨೨, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ಪುಟ-೨೧, ೨೦೦೭

೧೫. ಮುತ್ತುರಾಜು ; ಸಂಬಾಪುರದ ಪ್ರಾಗೈತಿಹಾಸಿಕ ಕಾಲದಿಂದ (ಸು.ಕ್ರಿ.ಪೂ.೨೦೦೦) ಇಂದಿನವರೆವಿಗೆ ಒಂದು ಶೋಧನೆ, ಇತಿಹಾಸ ದರ್ಶನ, ಸಂಪುಟ-೧೫, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ಪುಟ-೩೩, ೨೦೦೦

೧೬. ೧೭ಮುತ್ತುರಾಜು ; ಕನಕಪುರ ತಾಲ್ಲೂಕಿನ ಕೆಲವು ಬೃಹತ್ ಶಿಲಾಯುಗದ ಶಿಲಾಗೋರಿಗಳು, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ಪುಟ-೪೩,೪೨

೧೮,೧೯ ಆರ್. ಶೇಷಶಾಸ್ತ್ರೀ ; ಶಾಸನ ಪರಿಚಯ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ಪುಟ-೨೧, ೧೯, ೧೯೮೨

೨೦,೨೧.ಡಾ.ಎಂ.ಚಿದಾನಂದಮೂರ್ತಿ; ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪುಟ-೨೫,೧೪ ೧೯೮೪

೨೨.ಮುತ್ತುರಾಜು ; ಮುತ್ತತ್ತಿವೀರಗಲ್ಲುಗಳು ಒಂದು ಟಿಪ್ಪಣಿ, ಸತ್ಯಶುದ್ಧಕಾಯಕ, ಸಂಪುಟ-೨, ಸಂಚಿಕೆ ೫-೬, ಶ್ರೀಜಗದ್ಗುರು ಮುರುಘಾರಾಜೇಂದ್ರ ವಿದ್ಯಾಪೀಠ, ಶ್ರೀಬೃಹನ್ಮಠ, ಚಿತ್ರದುರ್ಗ, ಪುಟ-೭೩, ೧೯೯೨

೨೩ ಮುತ್ತುರಾಜು ; ಮಳವಳ್ಳಿ ತಾಲ್ಲೂಕಿನ ಕೆಲವು ನವಶೋಧಿತ ಪ್ರಾಚ್ಯಾವಶೇಷಗಳು, ಇತಿಹಾಸದರ್ಶನ, ಸಂಪುಟ-೨೨, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ಪುಟ-೨೨, ೨೦೦೭

೨೪ ಮುತ್ತುರಾಜು ; ಬೆಂಗಳೂರು ನಗರ ಮತ್ತು ರಾಮನಗರ ಜಿಲ್ಲೆಯ ಕೆಲವು ನವಶೋಧಿತ ಪ್ರಾಚ್ಯಾವಶೇಷಗಳು, ಇತಿಹಾಸದರ್ಶನ, ಸಂಪುಟ-೨೩, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ಪುಟ-೯, ೨೦೦೮

೨೫. ಮುತ್ತುರಾಜು ; ಕನಕಪುರ ತಾಲ್ಲೂಕಿನ ಅಲಸೂರು ಮತ್ತು ಕಾಡಹಳ್ಳಿಯ ಪ್ರಾಚೀನ ವೀರಗಲ್ಲುಗಳು ಹಾಗೂ ಮೂರ್ತಿಗಳು ಒಂದು ನವಶೋಧನೆ, ಕರ್ನಾಟಕ ಲೋಚನ, ಸಂಪುಟ-೨೦, ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ಪುಟ-೧೨,೧೬, ೨೦೦೯

೨೬ ಮುತ್ತುರಾಜು : "ಮುತ್ತತ್ತಿಯ ತಾಮ್ರಶಾಸನ", ಇತಿಹಾಸ ದರ್ಶನ, ಸಂಪುಟ-೯, ೧೯೯೪ ಕರ್ನಾಟಕ ಇತಿಹಾಸ ಅಕಾಡೆಮಿ(ರಿ), ಬೆಂಗಳೂರು, ಪುಟ-೩೬,೩೯

## ಅಧ್ಯಾಯ-೨

## ಮುತ್ತತ್ತಿಯ ಜಾನಪದ

'ಜಾನಪದ' ಎಂಬ ಶಬ್ದ ಜನಪದದ ಹಲವು ಪ್ರಕಾರಗಳನ್ನು ಒಳಗೊಂಡಿದೆ. ಕೇವಲ ದನಗಳ ದೊಡ್ಡಿಯಿಂದ ಉಗಮಿಸಿ ಮಂದಗತಿಯಲ್ಲಿ ಬೆಳೆದು ವಿಶ್ವಮಾಧ್ಯಮಕ್ಕೆ ಸೇರಿದ ಮುತ್ತತ್ತಿಯ ಜಾನಪದ ಹಲವು ವೈವಿಧ್ಯತೆಗಳನ್ನು ಒಳಗೊಂಡಿರುವುದಾಗಿದೆ. ಇಲ್ಲಿನ ಮೂಲನಿವಾಸಿಗಳು ಯಾರೂ ಇಲ್ಲದೆ ಇಲ್ಲಿ ವಾಸಿಸುವ ಎಲ್ಲಾ ಜನರೂ ನಾನಾಕಾರಣಗಳಿಗಾಗಿ ಹೊರಗಿನಿಂದ ಬಂದು ನೆಲೆಸಿರುವವರೇ ಆಗಿದ್ದಾರೆ ಹಾಗೂ ಇಲ್ಲಿನ ಮುತ್ತತ್ತಿಯರಾಯ ದೇವರಿಗೆ ನಡೆದುಕೊಳ್ಳುವ ಭಕ್ತರು ಹತ್ತು ಹಲವು ಗ್ರಾಮಗಳಲ್ಲಿ ನೆಲೆಸಿದ್ದಾರೆ. "ಮುತ್ತತ್ತಿ" ಎಂಬ ಸ್ಥಳನಾಮ ಶಬ್ದವು ಜನಪದ ಐತಿಹ್ಯಕ್ಕೆ ಒಳಪಟ್ಟಿರುವುದಾಗಿದೆ. ಇನ್ನು ಮುತ್ತತ್ತಿಯಲ್ಲಿ ನೆಲೆಗೊಂಡ ಮುತ್ತತ್ತಿರಾಯನ ಸುತ್ತ ಐತಿಹ್ಯ ಜನನಿರುಕ್ತಿಗಳು ಹೆಣೆಯಲ್ಪಟ್ಟವೆ. ಮಹಾಕಾವ್ಯಗಳಲ್ಲಿ ಒಂದಾದ ರಾಮಾಯಣದ ನಂಟು ಈ ಐತಿಹ್ಯದಲ್ಲಿ ಬೆಸೆದಿದೆ. ಈ ಐತಿಹ್ಯವೇ ಈ ಕ್ಷೇತ್ರದ ಅಭಿವೃದ್ಧಿಗೆ ಕಾರಣವಾಗಿದೆ.

ಈ ದೇವರ ಕೇಂದ್ರ ಮುತ್ತತ್ತಿರಾಯನ ಗುಡಿ ಆಗಿದ್ದು, ಮುತ್ತತ್ತಿರಾಯನ ಕುರಿತು 'ಜನಪದ ಗೀತೆಗಳು' ರಚಿತವಾಗಿವೆ. ಮಂಟೇಸ್ವಾಮಿ ಕಾವ್ಯದಲ್ಲಿ ಬರುವ ಸಿದ್ಧಾಪ್ಪಾಜಿಯ ಜೊತೆಗೆ ಮುತ್ತತ್ತಿರಾಯನ ನಂಟು ಇರುವುದರಿಂದ ಮಂಟೇಸ್ವಾಮಿ ಅಥವಾ ಸಿದ್ಧಾಪ್ಪಾಜಿ ಕುರಿತು ನಾಟಕಗಳು ಪ್ರಚುರದಲ್ಲಿದೆ. ಇಂತಹ ಜನಪದ ನಾಟಕಗಳಲ್ಲಿ ಮುತ್ತತ್ತಿರಾಯನಿಗೆ ಸಂಬಂಧಿಸಿದ ಪ್ರಸಂಗವೂ ಸಹ ಬರುತ್ತದೆ. ಗ್ರಾಮೀಣ ಪ್ರದೇಶಗಳಲ್ಲಿ ಪ್ರದರ್ಶಿಸಲ್ಪಡುವ ಈ ನಾಟಕದಲ್ಲಿ ಮುತ್ತತ್ತಿರಾಯನ ಪಾತ್ರವೂ ಸಹ ಬಂದು ಹೋಗುತ್ತದೆ. ಇದೇ ವಸ್ತುವನ್ನು ಇರಿಸಿಕೊಂಡು ರಚಿತವಾಗಿರುವ ಶ್ರೀಎಚ್.ಎಸ್.ಶಿವಪ್ರಕಾಶ್‌ರವರ ಮಂಟೇಸ್ವಾಮಿ ಪ್ರಸಂಗ ನಾಟಕದಲ್ಲಿಯೂ ಈ ಪ್ರಸಂಗ ಬಂದಿದೆ. ಜನಪದ ಗಾದೆಗಳಲ್ಲಿಯೂ ಸಹ ಮುತ್ತತ್ತಿಯ ಉಲ್ಲೇಖ ಬಂದಿದೆ. ಈ ದೇವರಿಗೆ ಸಂಬಂಧಿಸಿದ ಜನಪದ ನಂಬಿಕೆಗಳು ಹಲವಾರು ಹುಟ್ಟಿಕೊಂಡಿವೆ.

**ಹುಲಿವೇಷ** :- ಜಾತ್ರೆಯ ಸಮಯದಲ್ಲಿ ಹುಲಿವೇಷ ಹಾಕಿ ಕುಣಿಯುವವರನ್ನು ಇಲ್ಲಿ ನೋಡಬಹುದು. ಮುತ್ತತ್ತಿರಾಯನ ವಾಹನ ಹುಲಿ ಎಂಬುದು ಇಲ್ಲಿ ಗಮನಾರ್ಹ. "ಈ ಹುಲಿವೇಷದಲ್ಲಿ ಪ್ರಮುಖವಾದದು ಬಣ್ಣಗಾರಿಕೆ ಕಲಾವಿದ ಚಡ್ಡಿಯೊಂದನ್ನು ಬಿಟ್ಟು ಬರಿಮೈಯಲ್ಲೇ ಇರುತ್ತಾನೆ. ಮುಖಕ್ಕೆ ಹುಲಿಯ ಮುಖವಾಡವನ್ನು ಧರಿಸಿರುತ್ತಾನೆ. ಮೈಗೆ ಹುಲಿಚರ್ಮ ಹೋಲುವ ಪಟ್ಟೆಗಳನ್ನು ಹಳದಿ, ಕಪ್ಪು ಬಣ್ಣಗಳಿಂದ ಬಳಿದುಕೊಂಡು ಇರುತ್ತಾನೆ.[೧]" ಹುಲಿಯ ಉಗುರುನ್ನು ಹೋಲುವ ಉಗುರುಗಳನ್ನು ಧರಿಸಿ ತಮಟೆಯ ಗತ್ತಿಗೆ ವಿವಿಧ ಭಂಗಿಗಳಲ್ಲಿ ಕುಣಿಯುತ್ತಾನೆ.

**ಆಂಜನೇಯ ವೇಷ** :- ಶ್ರೀರಾಮನ ಭಕ್ತನಾದ ಆಂಜನೇಯನ ವೇಷಗಳನ್ನು ಗ್ರಾಮೀಣ ಭಕ್ತರು ಅನುಕರಿಸುವುದುಂಟು. ಈ ವೇಷವನ್ನು ಸಹ ನಾವು ಮುತ್ತತ್ತಿಯ ಜಾತ್ರೆಯಲ್ಲಿ ಕಾಣಬಹುದು. "ಬಾಯಿಯ ಸುತ್ತ ಕೆಂಪುಬಣ್ಣ ಹಚ್ಚಿಕೊಂಡಿರುತ್ತಾರೆ. ತಲೆಗೆ ಕಿರೀಟ ಧರಿಸಿರುತ್ತಾರೆ. ಕಬ್ಬಿಣದ ತಂತಿಯನ್ನು ಬಾಲದ ಆಕಾರಕ್ಕೆ ಮಾಡಿ ಹಸಿರು ಬಟ್ಟೆ ಸುತ್ತಿ ಬಾಲವನ್ನು ಮಾಡಿಕೊಂಡಿರುತ್ತಾರೆ. ಹಣೆಯ ಮೇಲೆ ವೈಷ್ಣವನಾಮವನ್ನು ಹಚ್ಚಿಕೊಂಡಿರುತ್ತಾರೆ. ಕಾಲಿಗೆ ಗೆಜ್ಜೆ ಕಟ್ಟಿದ್ದು ಹೆಜ್ಜೆ ಹಾಕುತ್ತಾ ಕುಣಿಯುತ್ತಿರುತ್ತಾರೆ. ಕೈಯಲ್ಲಿ ರಟ್ಟಿನಲ್ಲಿ ಮಾಡಿದ ಗದೆ ಇಟ್ಟುಕೊಂಡಿರುತ್ತಾರೆ. ಕೊರಳಲ್ಲಿ ತುಳಸಿಮಾಲೆ, ಹೂವಿನಹಾರ, ಕೈಗೆ ತೋಳಿಗೆ ಮಣಿಸರ ಕಟ್ಟಿರುತ್ತಾರೆ. ಉದ್ದನೆಯ ಅಂಗಿ ಬಿಗಿಯಾದ ಪ್ಯಾಂಟ್ ಧರಿಸಿರುತ್ತಾರ.[೨]" ಚಿಕ್ಕ ಮಕ್ಕಳಿಗೂ ಸಹ ಈ ವೇಷ ಹಾಕಿಸುವುದುಂಟು. ನೋಡುಗರಿಗೆ ವಿನೋದವಾದರು. ಆಂಜನೇಯನ ಸ್ವಭಾವ ಈ ಕಲೆಯಲ್ಲಿ ವ್ಯಕ್ತವಾಗುವುದು ಗಮನಾರ್ಹ

**ಪೂಜಾಕುಣಿತ** :- "ಶಕ್ತಿದೇವತೆಗೆ ಸಂಬಂಧಿಸಿದ ಕುಣಿತ ಇದು. ಆಯಾ ಗ್ರಾಮದೇವತೆಗಳ ಪ್ರತೀಕಗಳೇ ಈ ಪೂಜೆಗಳು. ಹಬ್ಬದ ಸಂದರ್ಭದಲ್ಲಿ ಗುಡಿಯೊಳಗಿನ ದೇವತೆ 'ಪೂಜೆ'ಯ ರೂಪದಲ್ಲಿ ಹೊರಬರುತ್ತಾಳೆ. ಬಿದಿರಿನ ತಳಿ ಮಧ್ಯೆ ದೇವತೆಯ ಮುಖವಾಡ ಇರಿಸಿ ಕುಣಿಯುವುದಕ್ಕೆ ಪೂಜಾಕುಣಿತ ಎನ್ನುವರು.[೩]" "ಪೂಜೆಯನ್ನು ಸುಮಾರು ೫ಅಡಿ ಉದ್ದ, ೪ಅಡಿ ಅಗಲವಿರುವ ಬಿದಿರುಗಳು ಮತ್ತು ಹಚ್ಚೆಗಳನ್ನು ಜೋಡಿಸಿ ಮಾಡಿರುತ್ತಾರೆ. ಮಧ್ಯಭಾಗದಲ್ಲಿ ಮರದ ಹಲಗೆಯನ್ನು ಜೋಡಿಸಿ, ಅದಕ್ಕೆ ದೇವತೆಯ ಮುಖವಾಡವನ್ನು ಕಟ್ಟಿ, ಇದರ ಎರಡೂ ಕಡೆಯೂ ತಳಿಯ ಉದ್ದಕ್ಕೂ ತುದಿಯ ಕಳಸದ ಕತ್ತಿನಿಂದ ಬಣ್ಣದ ಸೀರೆಗಳನ್ನು ಇಳಿಬಿಟ್ಟಿರುತ್ತಾರೆ.

ತಳಿಯ ಮೇಲ್ತುದಿ ಸಾಮಾನ್ಯವಾಗಿ ಬೆಳ್ಳಿಯಿಂದ ತಯಾರಿಸಿದ ಏಳು ಅಥವಾ ಒಂಭತ್ತು ಕಳಸಗಳಿಂದ ಅಲಂಕರಿಸಲ್ಪಟ್ಟಿರುತ್ತದೆ. ತಳಿಯ ಮೇಲ್ಭಾಗದಲ್ಲಿ ಅರ್ಧಚಂದ್ರಾಕಾರದ ಹಿತ್ತಾಳೆ ಪ್ರಭಾವಳಿ ಕಟ್ಟಿರುತ್ತಾರೆ. ಭಕ್ತಾದಿಗಳು ಹರಕೆ ಹೊತ್ತು ಸಲ್ಲಿಸಿರುವ ಕಡಗ, ಕಾಲಮುರಿ, ಹಸ್ತ, ಓಲೆ, ಡಾಬು ಮೊದಲಾದ ಆಭರಣಗಳನ್ನು ಇಟ್ಟು ಅಲಂಕರಿಸಿ ದೇವಿಯ ವಿಗ್ರಹ ಮತ್ತು ತಳಿ ತುಂಬಾ ಹೂವಿನ ಮಾಲೆಯನ್ನು ಇಳಿಬಿಟ್ಟು ಅಲಂಕರಿಸಿರುತ್ತಾರೆ. ತಳಿಯ ಹಿಂಭಾಗಕ್ಕೂ 'ಬೆನ್‌ಬಟ್ಟೆ' ಕಟ್ಟಿರುತ್ತಾರೆ. ಇದನ್ನು ಹೊತ್ತು ಕುಣಿಯಲು ಅನುಕೂಲವಾಗುವಂತೆ ತಳಿಯ ಕೆಳಭಾಗದಲ್ಲಿ ಮಧ್ಯೆ ಕಂಚು ಅಥವಾ ಹಿತ್ತಾಳೆಯ ಒಂದು ಗಿಂಡಿಯನ್ನು ಸೇರಿಸಿ ಬಿಗಿದಿರುತ್ತಾರೆ. ಇದು ತಲೆಯ ಮೇಲೆ ಅಲುಗಾಡದಂತೆ ಕೂರುತ್ತದೆ.[೪]" "ಈ ಪೂಜೆಯ ಮಧ್ಯಭಾಗದಲ್ಲಿ ಅವರವರ ಗ್ರಾಮದೇವತೆಯ ವಿಗ್ರಹಗಳನ್ನಿರಿಸಿ ದೇವರ ಪೂಜಾಕುಣಿತ ಮಾಡುವರು. ಈ ಪೂಜೆಯನ್ನು ಹೊತ್ತು ಕುಣಿಯುವವರು ಬಿಳಿ ಅಂಗಿ ತೊಟ್ಟು ವೀರಗಾಸೆಯ ರೀತಿಯಲ್ಲಿ ಪಂಚೆ ಧರಿಸಿ ಕಾಲಿಗೆ ಗೆಜ್ಜೆ ಕಟ್ಟಿರುತ್ತಾರೆ. ಹಣೆಗೆ ಕುಂಕುಮ ಇಟ್ಟುಕೊಂಡಿರುತ್ತಾರೆ. ತಮಟೆ, ನಗಾರಿ, ಡೋಲು ಬಡಿತಕ್ಕೆ ಅನುಗುಣವಾಗಿ ಹೆಜ್ಜೆ ಹಾಕಿ ವಿವಿಧ ಮಟ್ಟುಗಳಲ್ಲಿ ಕುಣಿಯುತ್ತಾರೆ.[೫]" ಮುತ್ತತ್ತಿರಾಯ, ಕಬ್ಬಾಳಮ್ಮ, ಮದ್ದೂರಮ್ಮ, ಕಾಳಿಕಾದೇವಿಯರೆಲ್ಲಾ ಅಣ್ಣತಂಗಿಯರೆಂದು ನಂಬುತ್ತಾರೆ. ಆದ್ದರಿಂದ ಪಾದ್ದಾರೆ ಮತ್ತು ಮುತ್ತತ್ತಿ ಜಾತ್ರೆಗಳಲ್ಲಿ ಈ ಗ್ರಾಮದೇವತೆಗಳನ್ನು ತಂದು ಪೂಜಾಕುಣಿತದ ಮೂಲಕ ಪೂಜಿಸುತ್ತಾರೆ. ಕಾಯಿ ಹೊಡೆಯುವ ಮತ್ತು ದೇವರವಾಹನ ಮೆರವಣಿಗೆಗೆ ಹೊರಡುವ ವೇಳೆಯಲ್ಲಿ ಮುಂದುಗಡೆ ಇವರ ಕಲಾ ಪ್ರದರ್ಶನ ನಡೆಯುತ್ತಿರುತ್ತದೆ.

**ಪಟದಕುಣಿತ** :- "ವೈಷ್ಣವ ಸಂಪ್ರದಾಯದ ಕುಣಿತಗಳಲ್ಲಿ ಒಂದೆಂದು ಹೇಳಲಾಗುವ 'ಪಟದಕುಣಿತ' ದಕ್ಷಿಣ ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ಮಾತ್ರ ಕಂಡುಬರುತ್ತದೆ. ಕಲಾವಿದರು ಕೈಯಲ್ಲಿ ಹಿಡಿಯುವ 'ಪಟ'ಗಳಿಂದಾಗಿ ಈ ಕಲೆ ವಿಶಿಷ್ಟವೆನಿಸಿದೆ. ಸುಮಾರು ಹತ್ತು ಹದಿನೈದು ಅಡಿ ಉದ್ದದ ಬಿದಿರಿನ ಜವಳೆ(ಕೋಲು)ಗಳಿಗೆ ಬಣ್ಣ ಬಣ್ಣದ ರೇಷ್ಮೆ ಜಾಲರಿ ಬಟ್ಟೆಯ ಪಟ್ಟಿಗಳನ್ನು ಸುತ್ತಿ ಅಲಂಕಾರ ಮಾಡುವುದೇ 'ಪಟ'. ಇದರ ತುದಿಯಲ್ಲಿ ಹಿತ್ತಾಳೆ ಅಥವಾ ಬೆಳ್ಳಿಯ ಛತ್ರಿ ಅಳವಡಿಸಿರುವುದು ಪಟಕ್ಕೆ ಒಂದು ಕಳೆ ಕೊಡುತ್ತದೆ. ಈ ಭಾಗದಲ್ಲಿ ಕಲಾವಿದರು ನಿಕ್ಕರು, ಬನಿಯನ್ನು ಧರಿಸಿ ಸೊಂಟಕ್ಕೊಂದು ಪಟ್ಟಿ ಕಟ್ಟಿಕೊಂಡು ತಲೆಗೊಂದು ಪಟ್ಟಿ ಕಟ್ಟಿಕೊಂಡಿರುತ್ತಾರೆ.

ಹೊಟ್ಟೆ ಎದೆಗೆ ತಾಗುವಂತೆ ಬಿದಿರಿನ ಕೋಲನ್ನು ಹೊಟ್ಟೆಯ ಬಳಿಯ ಬಟ್ಟೆಯೊಳಗೆ ಇರಿಸಿ ಒಂದು ಕೈಯಲ್ಲಿ ಹಿಡಿದುಕೊಂಡು ಮತ್ತೊಂದು ಕೈನಲ್ಲಿ ಪುಟ್ಟವಸ್ತ್ರವಿಡಿದು ತಮಟೆಗಳ ಸದ್ದಿಗೆ ಹೆಜ್ಜೆ ಹಾಕಿ ಕುಣಿಯುತ್ತಿರುತ್ತಾರೆ. ಕಾಲಿಗೆ ಗೆಜ್ಜೆಗಳಿರುತ್ತವೆ."" ಭಗವಂತನ ಆರಾಧನೆಯ ಒಂದು ಕಲೆಯಾಗಿ ಬೆಳೆದು ಬಂದಿರುವ ಈ ಕಲೆಯು ಪಾದ್ದಾರೆ ಮತ್ತು ಮುತ್ತತ್ತಿಯ ಜಾತ್ರೆಗಳಲ್ಲಿ ಪ್ರದರ್ಶಿತಗೊಳ್ಳುತ್ತದೆ. ಮಹದೇಶ್ವರ ಬೆಟ್ಟದ ಗುಡ್ಡರು, ಸಿದ್ಧಾಪ್ಪಾಜಿಯ ನೀಲಗಾರರು ಇಲ್ಲಿ ಬಹುಸಂಖ್ಯೆಯಲ್ಲಿ ಸುಳಿದಾಡುತ್ತಾ ತಮ್ಮ ಕಲೆಯನ್ನು ಪ್ರದರ್ಶಿಸಿಕೊಂಡು ಹಾಡುತ್ತಿರುತ್ತಾರೆ. ಮಣೇವುಸೇವೆ ಕಲೆಯು ಸಹ ಅನೇಕ ಭಕ್ತರಿಂದ ಪ್ರದರ್ಶಿತಗೊಳ್ಳುತ್ತಿರುತ್ತದೆ. ಬಳಿಯ ಲಂಬಾಣಿ ತಾಂಡ್ಯಗಳಿಂದ ಬಂದಿರುವ ಲಂಬಾಣಿ ಮಹಿಳೆಯರು ತಮ್ಮ ಸಾಂಪ್ರದಾಯಕ ಉಡುಗೆಗಳನ್ನು ಧರಿಸಿ ಸಾಮೂಹಿಕ ನೃತ್ಯ ಮಾಡುತ್ತಿರುತ್ತಾರೆ. ಮುತ್ತತ್ತಿಯ ಸ್ಥಳೀಯ ಭಕ್ತರು ಕಡಿಮೆ ಇದ್ದು ಅನ್ಯಗ್ರಾಮೀಣದ ಕಲಾವಿದರು ಕಲಾ ಪ್ರದರ್ಶನದಲ್ಲಿ ಭಾಗವಹಿಸುತ್ತಾರೆ.

## ೨.೧ ಜನಪದ ಐತಿಹ್ಯ

'ಮುತ್ತತ್ತಿ' ಎಂಬ ಈ ಪ್ರದೇಶ ಪ್ರಸಿದ್ಧಿಗೆ ಬಂದಿರುವುದೇ ಭಾರತದ ಮಹಾಕಾವ್ಯಗಳಲ್ಲಿ ಒಂದಾದ ರಾಮಾಯಣದ ಐತಿಹ್ಯದಿಂದ ಅದೂ ಸಹ ರಾಮಾಯಣದ ರಾವಣನ ಜೊತೆಗಿನ ಯುದ್ಧವೆಲ್ಲ ಮುಗಿದು ಶ್ರೀರಾಮನ, ಲಕ್ಷ್ಮಣ, ಸೀತೆ ಮತ್ತು ಆಂಜನೇಯರಿಗೆ ಸಂಬಂಧಿಸಿರುವಂತಹದು. ಭಾರತದ ಉದ್ದಗಲಕ್ಕೂ ಹರಡಿಕೊಂಡಿರುವ ಈ ಬಗೆಯ ಐತಿಹ್ಯಗಳು ಕೆಲವೊಮ್ಮೆ ಐತಿಹಾಸಿಕ ಒಳಸುಳಿವುಗಳನ್ನು ಒಳಗೊಂಡಿರುತ್ತವೆ. ಈ ಐತಿಹ್ಯವು ಈಗಾಗಲೇ ಗ್ರಂಥಸ್ಥ ಸ್ಥಾನವನ್ನೂ ಸಹ ಪಡೆದುಕೊಂಡಿದೆ.

"ಮುತ್ತತ್ತಿ' ಜಿಲ್ಲೆಯ ರಮ್ಯ ವನ ಪ್ರಾಂತವೆಂದೇ ಪ್ರಸಿದ್ಧವಾದ ಬಸವನಬೆಟ್ಟ ಕಾಯ್ದಿಟ್ಟ ಅರಣ್ಯಪ್ರದೇಶದ ನಡುವೆ ಕಾವೇರಿ ನದಿಯ ಎಡದಂಡೆಯ ಮೇಲಿದ್ದು, ತಾಲ್ಲೂಕು ಕೇಂದ್ರ ಮಳವಳ್ಳಿಯಿಂದ ೪೫.ಕಿ.ಮೀ.ಆಗ್ನೇಯಕ್ಕಿದೆ. ರಾಮಾಯಣ ಕಾಲದಷ್ಟು ಪ್ರಾಚೀನ, ಪೌರಾಣಿಕ ಪರಂಪರೆಯುಳ್ಳ ಇಲ್ಲಿಗೆ ಶ್ರೀರಾಮ, ಲಕ್ಷ್ಮಣ, ಸೀತೆ ಹಾಗೂ ಹನುಮಂತಾದಿಗಳು ಅಯೋಧ್ಯೆಗೆ ಹಿಂದಿರುಗುವಾಗ ಮಾರ್ಗದಲ್ಲಿ ಬಂದು ತಂಗಿದ್ದರಂತೆ. ಆಗ ಕಾವೇರಿಯಲ್ಲಿ ಸ್ನಾನ ಮಾಡುತ್ತಿದ್ದ ಸೀತೆಯ ಮುತ್ತಿನ ಮೂಗುತಿ ಜಾರಿದಾಗ ಸೀತೆಯ ಕೋರಿಕೆಯಂತೆ ಹನುಮಂತನು ತನ್ನ ಬಾಲವನ್ನು ಬೆಳಸಿ, ಇಳಿಬಿಟ್ಟು ಕಾವೇರಿ ಜಲವನ್ನು ಕಡೆದು ಮೂಗುತಿಯನ್ನು ಮೇಲೆತ್ತಿಕೊಟ್ಟನಂತೆ ಅದರಿಂದಾಗಿ ಈ ಸ್ಥಳಕ್ಕೆ 'ಮುತ್ತತ್ತಿ' ಎಂದು ಕ್ಷೇತ್ರದೇವತೆಯಾಗಿ ಅಲ್ಲೇ ನೆಲಸಿರುವ ಹನುಮಂತನಿಗೆ 'ಮುತ್ತೆತ್ತರಾಯ'ನೆಂಬ ಅಭಿದಾನವು ಬರಲೆಂದು ಹನುಮಂತನಿಗೆ ಸೀತೆ ವಚನ ಕೊಟ್ಟಳೆಂಬ ಜನಪದ ನಂಬಿಕೆಯಿದೆ.[೭]" "ಶ್ರೀರಾಮನು ರಾವಣನನ್ನು ಸಂಹರಿಸಿ ಸೀತಾಲಕ್ಷ್ಮಣ ಹನುಮರೊಡಗೂಡಿ ಅಯೋಧ್ಯೆಗೆ ಹಿಂತಿರುಗುವಾಗ ಕಾವೇರಿ ತೀರದ ಆ ಅರಣ್ಯ ಮಾರ್ಗವಾಗಿದಲ್ಲಿ ಪ್ರಯಾಣ ಬೆಳೆಸಿದನಂತೆ. ಕಾವೇರಿಯ ತಿಳಿಜಲವು ಪ್ರಿಯವಾಗಿ ಸೀತೆಯು ಅಲ್ಲಿ ಸ್ನಾನ ಮಾಡಿದಳು. ಆಗ ಯಾವುದೋ ಮಾಯದಲ್ಲಿ ಅವಳ ಮುತ್ತಿನ ಮೂಗುತಿಯು ಕಳಚಿ, ನೀರಿನಲ್ಲಿ ಬಿದ್ದುಹೋಯಿತು. ಆಗ ಮುತ್ತತ್ತಿಯ ದೇವಾಲಯವಿರುವ ಜಾಗಕ್ಕೆ ಬಂದಾಗ ಸೀತೆ ಮೂಗಿನ ಮೇಲೆ ಬೆರಳಾಡಿಸಿದಳು ಮೂಗುತಿಯನ್ನು ಕಾಣದೆ ಹನುಮನನ್ನು ಹತ್ತಿರ ಕರೆದು ತಾನು ಸ್ನಾನ ಮಾಡಿದ ಜಾಗದಲ್ಲಿ ಅದು ಜಾರಿಹೋಗಿರಬೇಕೆಂಬ ಶಂಕೆಯನ್ನು ವ್ಯಕ್ತಪಡಿಸಿದಳು.

ಒಡನೆಯೇ ಹನುಮನು ತಾನಿದ್ದಲ್ಲಿಂದಲೇ ಬಾಲವನ್ನು ಬೆಳೆಯಬಿಟ್ಟು ಕಾವೇರಿಯ ಜಲವನ್ನು ಕಡೆದು, ಮೂಗುತಿಯನ್ನು ಮೇಲೆತ್ತಿ ಸೀತೆಯ ಕೈಗಿತ್ತನು. ಅವಳಿಗಾದ ಆನಂದ ಅಷ್ಟಿಷ್ಟಲ್ಲ. ನನ್ನ ಮೂಗುತಿಯನ್ನು ಎತ್ತಿಕೊಟ್ಟ ಕುರುಹಾಗಿ ನೀನಿಲ್ಲಿ ನೆಲಸು ಎಂದು ಆಜ್ಞೆ ಮಾಡಿದಳು. ಮುತ್ತಿನ ಮೂಗುತಿಯನ್ನು ಎತ್ತಿಕೊಟ್ಟ ರಾಯನು ಮುತ್ತತ್ತಿರಾಯ ಅಥವಾ ಮುತ್ರಾಯ ಎಂಬ ಹೆಸರಿನಿಂದ ಅಲ್ಲಿನ ಒಂದು ಹುತ್ತದಲ್ಲಿ ನೆಲಸಿದನು.[೮]"

"ರಾವಣನನ್ನು ಸಂಹರಿಸಿ ಸೀತಾಲಕ್ಷ್ಮಣರ ಸಂಗಡ ರಾಮನು ಅಯೋಧ್ಯೆಗೆ ಬರುತ್ತಿರುತ್ತಾನೆ. ದಾರಿ ಸಾಗುತ್ತಿದ್ದಂತೆಯೇ ಕಾವೇರಿ ನದಿಯನ್ನು ಕಾಣುತ್ತಾನೆ. ಕಾವೇರಿ ನದಿಯ ತಿಳಿಜಲಕ್ಕೆ ಮಾರುಹೋದ ಸೀತಾದೇವಿಯು ಆ ನದಿಯಲ್ಲಿ ಸ್ನಾನ ಮಾಡುತ್ತಾಳೆ. ನದಿಯಲ್ಲಿ ಮಿಂದು ಮೇಲೆದ್ದು ಬಂದ ಸೀತೆಯು ಸಾಗುತ್ತಿದ್ದಂತೆಯೇ ಮೂಗುತಿಯನ್ನು ಕಳೆದುಕೊಂಡಿರುವ ಸಮಾಚಾರವನ್ನು ತಿಳಿಸುತ್ತಾಳೆ. ಪತಿವ್ರತೆಯರ ಮುತ್ತೈದೆತನದ, ಮಂಗಳದ ಕುರುಹು ಮೂಗುತಿ, ಈ ಬಗೆಯ ಸತೀ ಸಿಂಧುವು ಕೈಬಿಟ್ಟು ಹೋಯಿತು ಎಂದರೆ ಅಪಘಾತವು ಆವರಿಸುವ ಮುನ್ಸೂಚನೆಯೇ ಸರಿ! ಈಗಾಗಲೇ ಕಷ್ಟಕಾರ್ಪಣ್ಯದ ಕಾನನದಲ್ಲಿ ಸಾಗಿ ಮತ್ತೆ ಮರುಕಳಿಸುವ ಸಂಕಷ್ಟಕ್ಕೆ ರಾಮನು ಮಮ್ಮಲ ಮರುಗಿ ಚಿಂತಾಕ್ರಾಂತನಾಗುತ್ತಾನೆ. ಅಧೋಮುಖಿಯಾದ ರಾಮನ ಚಿಂತೆಯ ಕಾರಣವು ಹನುಮಂತನಿಗೆ ಗೊತ್ತಾಗುತ್ತದೆ. ಈ ಚಿಂತೆಯನ್ನು ಪರಿಹರಿಸಲು ತೊಡಗಿದ, ಈತನು ಮೂಗುತಿಯ ಪ್ರಾಪ್ತಿಯ ಬಗ್ಗೆ ಭರವಸೆ ಕೊಡುತ್ತಾನೆ. ತಕ್ಷಣವೇ ನದಿಗೆ ಇಳಿಯುತ್ತಾನೆ. ನದಿಯ ತಳವನ್ನು ತನ್ನ ಬಾಲದಿಂದ ಜಾಲಿಸುತ್ತಾನೆ ಕಳೆದುಹೋಗಿದ್ದ ಮೂಗುತಿಯನ್ನು ಈತನು ಈ ದಂಪತಿಗಳಿಗೆ ತಂದು ಕೊಡುತ್ತಾನೆ. ಇದರಿಂದ ಪರಮ ಸಂತೋಷಗೊಂಡ ಸೀತಾರಾಮರು ಹನುಮಂತನನ್ನು ಹರಸುತ್ತಾರೆ. ಈ ಜಾಗವು ನಿನ್ನ ನಾಮದಲ್ಲಿಯೇ ಪರಮ ಪವಿತ್ರವಾಗಲಿ, ನಿನ್ನ ನಿತ್ಯ ಸ್ಮರಣೆಯು ಸಾಗುವ ಯಾತ್ರಾ ಸ್ಥಳವು ಇದಾಗಲಿ.[೯]" ಮುತ್ತನ್ನು ಎತ್ತಿದ ಜಾಗವೇ ಮುತ್ತತ್ತಿ ಅಂದಿನ ಮುತ್ತತ್ತಿಯೇ ಇಂದಿನ 'ಮುತ್ತತ್ತಿ'ಯಾಗಿ ಈ ಜಾಗದಲ್ಲಿಯೇ ಮುತ್ತತ್ತಿಯರಾಯನ ದೇವಸ್ಥಾನವು ರೂಪುಗೊಂಡಿದೆ.

ಮೇಲೆ ಉಲ್ಲೇಖಿತ ಮೂರು ಐತಿಹ್ಯಗಳು ಜನಪದ ವಾಕ್‌ಪರಂಪರೆಯಿಂದ ಹರಿದು ಬಂದು ಗ್ರಂಥಸ್ಥ ಭಾಷೆಯಲ್ಲಿ ದಾಖಲಿತವಾಗಿವೆ. ಶ್ರೀಮಂಟೇಸ್ವಾಮಿ ಕಾವ್ಯದಲ್ಲಿ ಉಲ್ಲೇಖಿತ ಐತಿಹ್ಯ ಹೀಗಿದೆ.

"ನಾ ಅಂಜಣಾದೇವಿಯ ಕುಮಾರ
ನೀಲವೇಗದ ಸಂಜೀವ
ರಾಮದೇವರ ಬಂಟ
ರಾವಳನ ವೈರಿ ನಾನು
ಲೆಂಕೆಯ ದಾವಾಂತರನೆಲ್ಲ
ಧಾಮಧೂಮ ಮಾಡಿಬಿಟ್ಟು
ನನ್ನ ಬಾಲದಲ್ಲಿ ಕಟ್ಟಿಹರ ವಿದನೆಲ್ಲ
ನಮ್ಮ ಪಟ್ಟದ ಸೀತಮ್ಮನವರ
ಸೆರೆಯ ಬಂಧ ಬಿಡಿಸಿಕಂಡು
ನಮ್ಮ ಪಟ್ಟದ ಸೀತಮ್ಮನವರ
ಸಮುದ್ರದ ಕರೆಯ ಒಳಗೆ
ತಾನ ಮಾಡೊ ಯಾಳ್ಯದಲ್ಲಿ
ನಮ್ಮ ತಾಯಿಯ ಕೊರಳಿನ ಪದಕ ಕಿತ್ತು
ಸಮುದ್ರಕ್ಕೆ ಬಿದ್ದುಹೋಯಿತು ಸ್ವಾಮಿ
ನಮ್ಮ ತಾಯಿ ಸೀತಮ್ಮನವರ ತಿರುದುಕ್ಕ ನೋಡಿ
ಸಮುದ್ರದ ಉದ್ಧಕ್ಕೂ ಬಾಲನೀಡಿ
ಬಾಲದಲ್ಲಿ ಎತ್ತಿಕೊಟ್ಟೆ
ಮುತ್ತುರಾಯ ಎನ್ನುವ ಹೆಸರು ಕೊಟ್ಟರು
ಅಡವಿನಿದ್ರೆ ಕೊಟ್ಟರು
ಅರಣ್ಯ ತಬಸ ಕೊಟ್ಟರಯ್ಯೊ"[೧೦]

ಮಂಟೇಸ್ವಾಮಿಗೆ ಸಂಬಂಧಿಸಿದ 'ಮಂಟೇಸ್ವಾಮಿ', 'ಧರೆಗೆ ದೊಡ್ಡವರ ಕಥೆ', 'ಧರೆಗೆ ದೊಡ್ಡವರ ವಚನ'ಗಳಲ್ಲಿ ಈ ಮೇಲಿನ ಸಂಗತಿ ಉಲ್ಲೇಖಿತವಾಗದೆ ಶ್ರೀ.ಜೀ.ಶಂ.ಪರಮಶಿವಯ್ಯನವರು ಸಂಪಾದಿಸಿರುವ ಪುಸ್ತಕದಲ್ಲಿ ಮಾತ್ರ ಉಲ್ಲೇಖಿತವಾಗಿದೆ. ಈ ಮೂಲಕ ಪ್ರಚಲಿತವಿರುವ ಐತಿಹ್ಯಕ್ಕೂ

ಜನಪದ ಮಹಾಕಾವ್ಯದಲ್ಲಿ ಉಕ್ತವಾದ ಐತಿಹ್ಯಕ್ಕೂ ಇರುವ ಸಾಮ್ಯ ವೈಷಮ್ಯಗಳ ಚರ್ಚೆಗೆ ಎಡೆಯಾಗಿದೆ.

ಈ ಘಟನೆಯ ನಂತರದ ಸಂಗತಿಗಳು ಐತಿಹ್ಯಕ್ಕೆ ಸಂಬಂಧಿಸಿದಂತೆ ಎಲ್ಲೂ ಪ್ರಕಟವಾಗಿಲ್ಲ. ಅದು ಹೀಗಿದೆ 'ತಾನು ನೆಲೆಸಲು ಯೋಗ್ಯ ಸ್ಥಳದ ಹುಡುಕಾಟವನ್ನು ಹನುಮಂತನು ಈ ಅರಣ್ಯದಲ್ಲಿ ನಡೆಸುತ್ತಾನೆ. ಅದು ಮುತ್ತತ್ತಿಯಿಂದ ಹಾರಿ ಒಂದು ಪಾದವನ್ನು ಹನುಮನಗುಂಡು ಎಂಬ ದೊಡ್ಡ ಕಲ್ಲು ಬಂಡೆಯ ಮೇಲೆ ಇರಿಸುತ್ತಾನೆ. ಅಲ್ಲಿ ಜಾಗ ಕಿರಿದಾದುದರಿಂದ ಪಾದ್ದಾರೆಯ ಅಳವಾದ ಕಮರಿಯಲ್ಲಿ ಮತ್ತೊಂದು ಪಾದವನ್ನು ಇಡುತ್ತಾನೆ. ಕಮರಿಯೂ ಕಿರಿದಾದುದರಿಂದ ಬಳಿಯಲ್ಲಿರುವ ಬೆಟ್ಟದ ಮೇಲೆ ಮತ್ತೊಂದು ಜಿಗಿತ ಜಿಗಿದು ಪಾದ ಇಡುತ್ತಾನೆ. ಅಲ್ಲೂ ಸರಿಕಾಣದೆ ದಾರಿಯಲ್ಲಿರುವ ಬಂಡೆಯ ಮೇಲೆ ಒಂದು ಪಾದ ಇಡುತ್ತಾನೆ. ಆದುದರಿಂದ 'ಪಾದದ ಅರಿ' 'ಪಾದ್ದಾರೆ' ಎಂಬ ಹೆಸರು ಬಂದಿತು. ನಂತರ ಅಲ್ಲಿಂದ ಜಿಗಿದು ಮುಳಬಾಗಿಲಿನಲ್ಲೊಂದು ಪಾದ ಇಡುತ್ತಾನೆ. ಸರಿಕಾಣದೆ ಮುತ್ತತ್ತಿಯ ಈಗಿನ ರಮ್ಯವೂ, ವಿಶಾಲವೂ ಆದ ಸ್ಥಳದಲ್ಲಿ ನೆಲೆಸುತ್ತಾನೆ ಎಂಬುದಾಗಿದೆ.

ಶ್ರೀ.ಜೀ.ಶಂ.ಪರಮಶಿವಯ್ಯನವರು ಶ್ರೀಮಂಟೇಸ್ವಾಮಿಕಾವ್ಯ ಪುಸ್ತಕದಲ್ಲಿ ಉಕ್ತವಾಗಿರುವಂತೆ ಮುತ್ತತ್ತಿರಾಯ ಎತ್ತಿ ಕೊಟ್ಟಿರುವುದು, ಮೂಗುತಿಯನ್ನಲ್ಲದೆ ಕೊರಳಪದಕವಾಗಿದೆ. ಇದು ಜನಪದರ ನಿಷ್ಪತ್ತಿಯಾದರೆ ಈಗ ಪ್ರಚಲಿತವಾಗಿರುವ ಮೂಗುತಿಯ ವಿಚಾರ ನಂತರದ ಪರಿವರ್ತನೆಯದಾಗಿದೆ. "ಐತಿಹ್ಯ ಪದವನ್ನು 'Legend' ಎಂಬುದಕ್ಕೆ ಸಂವಾದಿಯಾಗಿ ಬಳಸಲಾಗುತ್ತಿದೆ. ಕರ್ನಾಟಕದ ಜನತೆಗೆ ಐತಿಹ್ಯ ಕುರಿತು ಸಾಕಷ್ಟು ಖಚಿತತೆ ಇತ್ತು ಎಂಬುದಾಗಿ ನಾಚಿರಾಜ ಮತ್ತು ನಿಜಗುಣಶಿವಯೋಗಿಯವರ ಹೇಳಿಕೆಗಳಿಂದ ತಿಳಿದುಬರುತ್ತದೆ[11]"

"ಐತಿಹ್ಯ ಮತ್ತು ಇತಿಹಾಸ ಇವೆರಡೂ ಒಂದೇ ಮೂಲದ ಸಂಸ್ಕೃತ ಪದಗಳು, 'ಹೀಗೆ ಇತ್ತು' ಎಂಬುದು ಅದರ ಸಾಮಾನ್ಯ ಅರ್ಥ. ಇವು ಪೂರ್ಣವಾಗಿ ಭೂತಕಾಲಕ್ಕೆ ಸೇರಿದವು. ಒಂದು ಕಾಲದಲ್ಲಿ 'ಇದ್ದದ್ದು' ನಿರೂಪಣೆಯ ಕಾಲಕ್ಕಾಗುವಾಗ ಸಾಕಷ್ಟು ಕಲ್ಪನಾಂಶಗಳು ಸೇರಿಕೊಂಡು 'ವೈಭವದಿಂದ ಇದ್ದದ್ದು' ಆಗಿ ಮಾರ್ಪಡುತ್ತದೆ. ಈ ಬಗ್ಗೆ 'Legends from Indian history' ಎಂಬ ಚಿಕ್ಕ ಕೃತಿಯೊಂದರಲ್ಲಿ ಎ.ಕೆ.ಘೋಷ್ ಎಂಬುವರು ಹೀಗೆ ಬರೆದಿದ್ದಾರೆ. "History

becomes much more exciting and interesting when we read stories of what people said and did. No one knows if those stories are true. But they are generally believed to be true, they are legends"(Ghosh 1985)[೧೨]" ಮುತ್ತತ್ತಿಯ ಐತಿಹ್ಯಕ್ಕೆ ಸಂಬಂಧಿಸಿದಂತೆ ತ್ರೇತಾಯುಗದ ರಾಮಾಯಣಕ್ಕೆ ಕತೆಯಾಗಿದ್ದು ರಾಮಾಯಣವು ನಮ್ಮ ದೇಶದಲ್ಲಿ ಘಟಿಸಿರುವ ಇತಿಹಾಸವೆಂದು ನಂಬಲಾಗಿದೆ. ಭಾರತದಾದ್ಯಂತ ಮಾನವೀಯತೆಯ ಈ ಮಹಾಕಾವ್ಯದ ಭಾಗಗಳು ದೇಶದ ಮೂಲೆ ಮೂಲೆಗಳಾದ ಹಳ್ಳ, ಕೊಳ್ಳ, ಕಮರಿ, ಬಂಡೆ, ನದಿ, ಬೆಟ್ಟ, ಗುಡ್ಡ, ಪರ್ವತ ಇತ್ಯಾದಿಗಳಿಗೆ ಅನ್ವಯಿಸಿ ಹೇಳಲಾಗುತ್ತದೆ. ಇದರ ಹಿಂದೆ ಇರುವ ಆಶಯವೆಂದರೆ ಜನಪ್ರಿಯವಾದ ರಾಮಾಯಣದ ಪಾತ್ರಗಳ ಜೊತೆಗೆ ತಾವು ಉದ್ದೇಶಿಸಿರುವ ಪ್ರದೇಶ ಮತ್ತು ವಸ್ತುಗಳ ಜನಪ್ರಿಯವಾಗುತ್ತದೆ. ಜನರು ಇದರ ಬಗ್ಗೆಯು ಭಕ್ತಿಭಾವನೆಯನ್ನೂ ಬೆಳಸಿಕೊಳ್ಳುತ್ತಾರೆ ಎಂಬ ಭಾವನೆಯೇ ಆಗಿದೆ. ಇದೇ ಬಗೆಯ ಹಲವಾರು ಕಥೆಗಳು ಕರ್ನಾಟಕವೇ ಅಲ್ಲದೇ ಭಾರತದಾದ್ಯಂತ ಕಾಣಬಹುದು. ಮುತ್ತತ್ತಿಯಲ್ಲಿ ನೆಲೆಸಿದ ಮುತ್ತತ್ತಿರಾಯನ ಮಹಿಮೆಯನ್ನು ಸಾರಲು 'ಮುತ್ತೆತ್ತಿರಾಯ' ಎಂಬ ಬದಲಾವಣೆಯನ್ನು ಮಾಡಲಾಗಿದೆ. ಅದರಿಂದ ಮುತ್ತುರಾಯ, ಮುತ್ತರಾಯ, ಮುತ್ರಾಯ ಎಂಬ ಜನಪ್ರಿಯ ನಿಷ್ಪತ್ತಿಗಳು ಬಂದಿವೆ. ಇದೇ ಐತಿಹ್ಯವು ಮಂಟೇಸ್ವಾಮಿ ಕಾವ್ಯದಲ್ಲಿಯೂ ನುಸುಳಿ ಬಳಕೆಯಲ್ಲಿ ಬಂದಿದೆ.

ಇಲ್ಲಿನ ಮತ್ತೊಂದು ಐತಿಹ್ಯವೆಂದರೆ "ಹಸುವೊಂದು ದಿನವೂ ಹೋಗಿ ಹುತ್ತವೊಂದಕ್ಕೆ ಹಾಲು ಕರೆಯುತ್ತಿದ್ದು ಅದರ ಯಜಮಾನ ಹಾಲು ಕರೆಯದೆ ಇರುವ ಈ ಹಸುವನ್ನು ಗಮನಿಸುವಂತೆ ತನ್ನ ಆಳಾದ ಕಾಳದಾಸನಿಗೆ ಹೇಳುವುದು. ಆತ ಹಸುವನ್ನು ಗಮನಿಸಿದಾಗ ಹುತ್ತಕ್ಕೆ ಹಾಲು ಎರೆಯುವುದನ್ನು ಗುರುತಿಸಿ. ದೇವರಿಗೆ ಕಕ್ಕೆಸೊಪ್ಪಿನ ಗುಡಿಸಲನ್ನು ನಿರ್ಮಿಸುವುದು[೧೩]" ಇದು ಕರ್ನಾಟಕದ ಬಹುತೇಕ ದೇವಾಲಯಗಳ ಉಗಮದ ಕಥೆಯೇ ಆಗಿದೆ. ಆದರೂ ಇದರಲ್ಲಿನ ಸತ್ಯಾಂಶವೆಂದರೆ ಕಾಳದಾಸನು ಯಾವುದೋ ಒಂದು ಮಾನಸಿಕ ಸ್ಥಿತಿಯಲ್ಲಿ ಹುತ್ತದಲ್ಲಿ ದೇವರು ನೆಲೆಸಿದ್ದಾನೆಂದು ಕೊಳ್ಳುವುದು ನಂತರ ಬಳಿಯಲ್ಲಿ ಕ್ಷಣಕ್ಕೆ ಅಲ್ಲಿ ದೊರೆತ ಕಲ್ಲೊಂದನ್ನು ಇರಿಸಿ ಮುತ್ತತ್ತಿರಾಯ, ಸಂಜೀವಯ್ಯ, ಉಚ್ಚಯ್ಯನೆಂದು ಕರೆದು ಪೂಜಿಸುವುದು.

ಇಲ್ಲಿನ ಐತಿಹ್ಯದಲ್ಲಿ ವಾಸ್ತವಾಂಶದಲ್ಲಿ ಗೊಂದಲವಿದೆ. ಒಂದು ಐತಿಹ್ಯ ಪ್ರಕಾರ "ದೊಡ್ಡ ಗಂಗರಾಜ ಶಿವನಸಮುದ್ರವನ್ನು ಆಳುವಾಗ ಎಂದಿದ್ದರೆ, ಇನ್ನೊಂದು ಐತಿಹ್ಯದ ಪ್ರಕಾರ ಶ್ರೀರಂಗರಾಯನು ಶಿವನಸಮುದ್ರವನ್ನು ಆಳುವಾಗ ಎಂದಿದೆ. ಶ್ರೀರಂಗರಾಯನೇ ಇತ್ತೀಚಿನವನಾದುದರಿಂದ ದೇವಾಲಯ ಸ್ಥಾಪನೆ ಇತ್ತೀಚಿನದಾದುದರಿಂದ ಶ್ರೀರಂಗರಾಯನೇ ಐತಿಹ್ಯದ ಐತಿಹ್ಯ ವ್ಯಕ್ತಿ ಎಂದು ಪರಿಗಣಿಸಬಹುದು. ತನ್ನ ಕುಟುಂಬದ ಕಷ್ಟ ಪರಿಹಾರಕ್ಕಾಗಿ ದೇವಾಲಯ ಕಟ್ಟಿಸಿ ಪಲ್ಲಕಿ ಮಾಡಿಸಿಕೊಟ್ಟು ಇತರ ವಸ್ತುಗಳನ್ನು ಕೊಡಿಸಿದ್ದಾನೆ. ಈ ಎಲ್ಲ ಐತಿಹ್ಯಗಳ ನಡುವೆ ವಾಸ್ತವಾಂಶಗಳೂ ಸಹ ಕೆಲಸ ಮಾಡಿ ಮುತ್ತತ್ತಿಯ ಮುತ್ತತ್ತಿರಾಯ ದೇವಾಲಯದ ಬೆಳವಣಿಗೆಗೆ ಕಾರಣವಾಗಿದೆ[೧೪]" ಈ ಐತಿಹ್ಯದಿಂದಲೇ ಕರ್ನಾಟಕದಾದ್ಯಂತ ಮುತ್ತತ್ತಿಯು ಪ್ರಸಿದ್ಧಿಯಾಗಿದೆ. ಈ ಐತಿಹ್ಯವನ್ನು ಕುರಿತು ಚಲನಚಿತ್ರ ಸಾಹಿತಿ ಚಿ.ಉದಯಶಂಕರರವರು ಗೀತೆಯೊಂದನ್ನು ರಚಿಸಿದ್ದು, ಡಾ.ರಾಜಕುಮಾರ್ ಈ ಗೀತೆ ಹಾಡಿದ್ದಾರೆ.

ಮೂಗುತಿ, ಮೂಗತಿ, ಮೂಗ್ತಿ ಇದು ನಾಮಪದವಾಗಿದ್ದು ಮೂಗಿನಲ್ಲಿ ಧರಿಸುವ ಆಭರಣವಾಗಿದೆ. ಇದು ಮುತ್ತೈದೆತನ ಸೂಚಕದ ಒಡವೆಯಾಗಿದೆ. ಇದನ್ನು ಮುತ್ತಿನಲ್ಲಿ ಮಾಡಿರುವುದು ಎಂದು ಐತಿಹ್ಯಗಳಲ್ಲಿ ಉಲ್ಲೇಖಿಸಲಾಗಿದೆ. ಆದುದರಿಂದ ಈ ಪವಿತ್ರ ವಸ್ತುವನ್ನು ಮುತ್ತತ್ತಿಯ ಐತಿಹ್ಯಗಳಲ್ಲಿ ಬಳಸಿಕೊಳ್ಳಲಾಗಿದೆ.

## ೨.೨ ಮಂಟೇಸ್ವಾಮಿ ಜನಪದ ಕಾವ್ಯಗಳಲ್ಲಿ ಮುತ್ತತ್ತಿರಾಯನ ಪ್ರಸಂಗ

ಐತಿಹಾಸಿಕ ವ್ಯಕ್ತಿಯ ಹಾಗೆ ಚಿತ್ರಿತವಾಗಿರುವ ಮುತ್ತತ್ತಿರಾಯನು ಮಂಟೇಸ್ವಾಮಿಗೆ ಸಂಬಂಧಿಸಿರುವ ಕಾವ್ಯಗಳಲ್ಲಿ ಸಿದ್ಧಾಪ್ಪಾಜಿಯ ಜೊತೆಗೆ ಸಂವಾದ ಮಾಡುವುದರ ಮೂಲಕ ಕಾಣಿಸಿಕೊಳ್ಳುತ್ತಾನೆ. ಡಾ.ಜೀ.ಶಂ.ಪರಮಶಿವಯ್ಯನವರು ಸಂಪಾದಿಸಿರುವ ಶ್ರೀಮಂಟೇಸ್ವಾಮಿ ಕಾವ್ಯದಲ್ಲಿ

"ಹೋಗಿ ನೀಲಿ ಸಿದ್ಧಯ್ನ
ತಲೆದಸಿಯಲ್ಲಿ ಕುಂತಗಂಡರು
ಅವನ ಸಪನ ಸಂದಾನದಲಿ
ಮೂರು ಮಾತ ಹೇಳುತರೆ
ಯಾಕೆ ಸಿದ್ಧಯ್ಯನವರೆ
ಬಹಳ ಯೋಚನೆ ಮಾಡುತಾರೆ
ಕಾದಗಟ್ಟ ಮಾಡಿ ಬರ್ತರಂತೆ
ಅಂಜಿಕೊಂಡ್ಯ ನನ್ನಕಂದ
ಹೆದರ ಬೇಡ ನನ್ನ ಕಂದ ನೀಲಿಯ ಸಿದ್ದಯ್ಯನವರೆ
ನೀ ಮುತ್ತತ್ತಿಗೋಗೊ
ಮುತ್ತತ್ತಿರಾಯನ ಬಳಿಗೋಗೊ
ಭಂಗಿ ಫಲಾರವ ಮಾಡಿಕೊಂಡು ಬನ್ನಿರಯ್ಯ
ನೀನು ಹೆದರಬೇಡ ಘನನೀಲಿ ಸಿದ್ದಯ್ಯ
ನೀಲಿ ಸಿದ್ಧಯ್ಯನಿಗೆ
ಕಟ್ಟಪ್ಪಣೆ ಕೊಟ್ಟು ಬಿಟ್ಟು
ತಕ್ಕೊಂಡೋಗಿದ್ದ ಫಲಾರವ
ತಲೆದಸಿಯಲ್ಲಿ ಸಿಕ್ಕಿಸಿ
ಗರುಡನ ವಾನ ಏರಿಕೊಂಡು
ಬೊಪ್ಪಣ ಪುರಕೆ ಬಂದರಂತೆ
ನಮ್ಮ ನೀಲಿಯ ಸಿದ್ಧಯ್ಯನವರು
ನಿದ್ರೆ ತಿಳಿದು ಎದ್ದರಂತೆ
ತಲೆದಸಿಯಲ್ಲಿರುವ

ಫಲಾರದ ಗಂಟು ನೋಡಿದರು
ಮೂರು ತಿಂಗಳಿಂದ ಏನು ಎತ್ತ ಅನ್ನಲಿಲ್ಲ
ಇಂದು ನಿಮ್ಮ ಪಾದದ ಕರಣ
ಮಂಡೆ ಮೇಲೆ ಒದಗತಯ್ಯ
ಅವರು ಎಂದೆಂದಿನಾಗೆ
ಬಿರುದು ಭಿಕ್ಷ ಧರಿಸಿಕೊಂಡು
ಅವರು ಕಾಳಮ್ಮನ ಗುಡಿಯ
ಕಡದು ಬರುತ್ತಾರೆ
ಪರದೇಶಿ ಕದ್ದೋದ ಅಂತ ಹೇಳಿ
ಅಲ್ಲೆ ಮಾತಾಡುತಾರೆ
ಕಾಳಮ್ಮನ ಗುಡಿಯ ತಾವು
ಒಂದು ಗುಟರು ಹೊಡೆದರಂತೆ
ಹಲಗೂರು ಪಾಂಚಾಳಗೇರಿಗೆ
ಬರಸಿಡಿಲು ಬಡಿದಂತಾಯಿತು
ಅವರು ಹೊನ್ನರಳಿ ಭಾಮದಲಿ
ಫಲಫಲನೆ ಕಡೆದರಂತೆ
ಮುತ್ತತ್ತಿಗೋದರೆ
ಮುತ್ತತ್ತಿರಾಯನ ಜಾಗಕ್ಕೆ ಹೋದರಂತೆ
ಆ ತಿರಗಣೆ ಮಡಿನತ್ತ ಹೋದರು ನಮ್ಮ ಸ್ವಾಮಿ
ಅಲ್ಲಿ ಆ ಮೂರಾಳುದ್ದ ಗಂಗೆ ಒಳಗೆ
ತಾನ ಮಡಿಯ ಮಾಡುತಾರೆ
ಬಸವಣ್ಣನವರ ಹೆಸರ ಹೇಳಿ
ಭಸ್ಮಾಂಗ ಧರಿಸುತಾರೆ
ರಾಚರಾಯರ ಹೆಸರ ಹೇಳಿ
ಮಟ್ಟಿಕಪ್ಪ ಧರಿಸುತಾರೆ
ತಂದ ಫಲಾರವ ಚಿತ್ರಿಸಿ ಪೂಜೆಯ ಮಾಡಿ
ಮೂರು ಮೂರ್ತಿಗಳಿಗೆ ಸರಿಯಾಗಿ
ಮೂರು ಎಡೆಯ ಮಡಗುತಾರೆ
ಬೇಟೆರಾಯನ ಹೆಸರಹೇಳಿ

ಒಂದು ಎಡೆಯ ಮಡಗುತಾರೆ

ಒಂದು ಕಂಡುಗ ಸಾಂಬ್ರಾಣಿ

ಬೆಳಗಿದರು ಸಿದ್ಧಯ್ಯನವರು

ಹರಹರ ಶಿವಶಿವ ಅಂತ

ಶಿವಪೂಜೆ ಮಾಡಿಕೊಂಡು

ಬೇಟೆರಾಯನ ಎಡಯ

ಬೇಟೆರಾಯನಿಗೆ ಕಟ್ಟಕೊಂಡು

ಮುತ್ತತ್ತಿರಾಯನ ಎಡೆಯ

ಮುತ್ತತ್ತಿರಾಯನಿಗೆ ಕಟ್ಟಗಂಡು

ಮೂವರು ಮೂರ್ತ ಭೋಜನ ಎಡೆಯ ಮಾಡಿ

ಇವರು ಊಟ ಭೋಜನ ಮಾಡಿಕೊಂಡು

ಆಗ ನೂರೊಂದು ಬಿರುದನೆಲ್ಲ

ಧರಿಸಿಕೊಂಡು ನಮ್ಮಗುರುವು

ಮುತ್ತತ್ತಿರಾಯನ ಬಳಿಗೆ ಹೋಗಿ

ಮೂರುಮಾತ ಆಡಬೇಕು ಎನುತೇಳಿ

ಮುತ್ತತ್ತಿರಾಯನ ಗುಡಿಯ ಬಾಕಲಲ್ಲಿ

ಬಂದು ನಿಂತೇಗಂಡರಂತೆ

ಮುತ್ತತ್ತಿರಾಯ ಅಂತ

ಮೂರು ಸೊಲ್ಲ ಕರೆದರಂತೆ

ಮೂರು ಸೊಲ್ಲ ಕರೆದರೆ

ಮಾತನಾದರೆ ಆಡಲಿಲ್ಲ

ನೀಲಿ ಸಿದ್ದಯ್ಯನಿಗೆ

ಬಹಳ ಕ್ವಾಪ ಬಂದಿತಂತೆ

ನಾವು ಬಂದು

ಬಹಳ ಹೊತ್ತಿನಿಂದ ನಿಂತ್ಗಂಡು

ಮಾತಾಡುತೀವಿ

ನಿಂತಗಂಡು ಮಾತಾಡಿದರೆ

ನೀ ಮನಿಕಂಡು ಮಾತಾಡಬಹುದ

ನಿನನಗೆ ಒಂದು ಕುಟ್ಟ ಕುಟ್ಟದರೆ

ನಿನ್ನ ಪಟ್ಟೆ ನಾಮ ಬೆವರಬೇಕು
ಪಟ್ಟೆನಾವು ಬೆವರಬೇಕು
ಕಕ್ಕೆಸೊಪ್ಪು ಹಾರಾಡಬೇಕು
ನೀಲಿ ಸಿದ್ದಯ್ಯ್ನ ಮಾತ ಕೇಳಿದ ಮುತ್ತತ್ತಿರಾಯ
ದಡಬಡನೆ ಎದ್ದನಂತೆ
ಗುಡಿಯ ಬಾಗಲ ತಗದನಂತೆ
ಇವರು ಅವರಿಗೆ ಶರಣು ಅಂದರು
ಅವರು ಇವರಿಗೆ ದಾಸನು ಅಂದರು
ಯಾವ ಬೆಟ್ಟದಿಂದ ಬಂದಿರಿ
ಹೆಚ್ಚಿನವರೆ ಘನಸಿದ್ಧರೆ
ನಾನು ಬಂದ ತೆರವ ನಾ ಹೇಳ್ತೀನಿ
ಮುತ್ತತ್ತಿರಾಯ
ನೀನು ಬರುವ ತೆರವ ಹೇಳು
ನಿನಗೆ ಮುತ್ತತ್ತಿರಾಯ ಅಂತ
ನಾಮಕರಣ ಕರೆದವರಾರು
ಹುಲಿಯನೂವೆ ಗೋವನೂವೆ
ಹೊಂದಕ್ಕೂಡಿ ಮೇಯಿಸುವಂತೆ
ಹದಿನೆಂಟು ಜಾತಿಯನ್ನು
ಒಂದೇ ಭಾಂಡದಲ್ಲಿ ಅಟ್ಟಿಣಿಸುವಂತೆ
ನಿನಗೆ ಅಡವಿನಿದ್ರೆ ಕೊಟ್ಟವರಾರು
ಅವಣ್ಯ ತಬಸ ಕೊಟ್ಟೋರ್ಯಾರು
ನೀವು ಗ್ಯಾನವಾಗಿ ಕೇಳಿರಯ್ಯ
ಹೆಚ್ಚಿನವರೇ ಘನನೀಲಿ ಸಿದ್ದರೇ
ನಾ ಅಂಜಣದೇವಿಯ ಕುಮಾರ
ನೀಲವೇಗದ ಸಂಜೀವ
ರಾಮದೇವರ ಬಂಟ
ರಾವಳನ ವೈರಿ ನಾನು
ಲೆಂಕೆದಾವಾಂತರನೆಲ್ಲ
ಧಾಮಧೂಮ ಮಾಡಿಬಿಟ್ಟು
ನನ್ನ ಬಾಲದಲ್ಲಿ ಕಟ್ಟಿಹರ ಎದನೆಲ್ಲ

ನಮ್ಮ ಪಟ್ಟದ ಸೀತಮ್ಮನವರ
ಸೆರೆಯ ಬಂಧ ಬಿಡಿಸಿಕಂಡು
ನಮ್ಮ ಪಟ್ಟದ ಸೀತಮ್ಮನವರು
ಸಮುದ್ರದ ಕರೆಯ ಒಳಗೆ
ತಾನ ಮಾಡೊ ಯ್ಯಾಳದಲ್ಲಿ
ನಮ್ಮ ತಾಯಿಯ ಕೊರಳಿನ ಪದಕ ಕಿತ್ತು
ಸಮುದ್ರಕ್ಕೆ ಬಿದ್ದುಹೋಯಿತು ಸ್ವಾಮಿ
ನಮ್ಮ ತಾಯಿ ಸೀತಮ್ಮನವರ ತಿರುದುಕ್ಕ ನೋಡಿ
ಸಮುದ್ರದ ಉದ್ದಕ್ಕೂ ಬಾಲನೀಡಿ
ಬಾಲದಲ್ಲಿ ಎತ್ತಿಕೊಟ್ಟೆ
ಮುತ್ತುರಾಯ ಎನ್ನುವ ಹೆಸರ ಕೊಟ್ಟರು
ಅಡವಿನಿದ್ರೆ ಕೊಟ್ಟರು
ಅರಣ್ಯ ತಬಸ ಕೊಟ್ಟರಯ್ಯೊ
ನಾನು ಬಂದ ತರವ
ಹೇಳಿದೆನಲ್ಲೊ ಘನಸಿದ್ದರೆ
ನೀವು ಬಂದ ತರವ
ಹೇಳಿಕೊಡಿ ಘನಸಿದ್ದರೆ
ಧರೆಗೆ ದೊಡ್ಡೋರು ಈಗ
ನಡುರಾಜ್ಯದಲ್ಲಿ ಪಾವಾಡಸವರೆ
ಹಲಗೂರು ಪಾಂಚಾಳಗೇರಿಗೆ
ಒಬ್ಬನಾದರೆ ಭಿಕ್ಷಕೆ ಕಳಿವವರೆ
ಹಲಗೂರು ಪಾಂಚಾಳದವರ
ಕಬ್ಬಿಣದ ಭಿಕ್ಷ ಕೇಳೋವತ್ಗೆ
ಏಳು ಸಾವಿರ ವರಕೆ
ದೊಡ್ಡಗಟ್ಟೆ ಹೆರದವರೆ
ನಮ್ಮ ಆರು ಲಾಂಛಾಣಕೆ
ಒಳಗಾದರೆ ಮುತ್ತತ್ತಿರಾಯ
ನಾನು ನೀನು ಹೋಗಬೇಕು
ಹಲಗೂರಲ್ಲಿ ಕಾದಗಟ್ಟೆ ಗೆಲಬೇಕು

ಆ ಲಾಂಛಾಣಕೆ ಹೊರಗಾದರೆ
ಮುತ್ತತ್ತಿರಾಯ
ನೀನು ನಿನ್ನ ಗುಡೀಲಿರು
ನಾನು ತಾನೆ ಹೋಗುತಿನಿ
ಗುಡುಗುಡನೆ ಹೋದನಂತೆ
ಸುಂಗಾರವಾದನಂತೆ
ಕಾಲಗಗ್ಗರ ತಿರುಮಣಿ ಧರಿಸುತಾನೆ
ಜಗದಗಲ ಜಾಗಟೆ
ಮುಗಿಲುದ್ದ ತಿರುಶಂಕು
ಎತ್ತುಬಾರದ ರಾಮಬಾಣ ಧರಿಸಿಕೊಂಡ
ನೀಲಿಯ ಸಿದ್ದಯ್ಯನ ಹೊಂದಿಗೆ
ಗಲಗಲನೆ ಕಡೆದುಬಿಟ್ಟ
ಕರೆವಾಗ ಕರೆದುಬಿಟ್ರು
ಬಾಳ ಯೋಚನೆ ಮಾಡುತಾರೆ
ನನ್ನ ಸರಿಯ ಲಾಂಛಾಣವ
ಹೊಂದಿಗೆ ಕರಕಂಡ್ಯೊದ ಮ್ಯಾಲೆ
ಹಲಗೂರ ಪಾಂಚಾಳಗೇರಿ
ಸಮಪಾಲ ಕೇಳುತಾನೆ
ನಮ್ಮ ಭೂಮಿಗೆ ದೊಡ್ಡೋರು
ಬಾಳ ಕ್ವಾಪ ಮಾಡುತಾರೆ
ಅವರು ನೀಲಿ ಸಿದ್ದಯ್ಯನವರು
ಆಳುಯೋಚನೆ ಮಾಡುತಾರೆ
ಬಂದಂಥ ಮುತ್ತತ್ತಿರಾಯರಿಗೆ
ಮನ್ನಣೆ ಮಾತ ಹೇಳುತಾರೆ
ನೀ ಕರೆದಯೇಟಗಿ ಬಂದ್ಯಲ್ಲೋ
ಜಾಣ ಮುತ್ತತ್ತಿರಾಯ
ಅಯ್ಯ ಹಲಗೂರು ಪಾಂಚಾಳಗೇರಿಲಿ
ಪವಾಡ ಗೆಲುತೀವಿ
ಹಲಗೂರು ಪಾಂಚಾಳದವರು

ನಿಂದನೆಯ ಮಾಡುತಾರೆ
ತನ್ನ ಕೈಲಿ ಪಡೆದಿದೆ
ಹೊಂದಿಗೊಬ್ಬರ ಕರೆತಂದ
ಹಾಗೆಂದು
ಹಲಗೂರು ಪಾಂಚಾಳದವರು
ಬಹಳನಿಂದಕ ಮಾಡುತಾರೆ
ನೀ ಬಂದಂಗೆ ಆಯಿತು ಕಾಣೋ
ಜಾಣ ಮುತ್ತತ್ತಿರಾಯ
ನೀನು ನಿನ್ನ ಗುಡೀಲಿರೊ
ನಾನು ತಾನೆ ಹೋಗುತೀನಿ
ನಾನು ನೀನು ಸೇರಿ
ಅಡವಿನಿದ್ರೆ ಮಾಡಬೇಕು
ಚಿಕ್ಕಲ್ಲೂರಿನಲ್ಲಿ ನಾನು ಇರುತೀನಿ
ಮುತ್ತತ್ತೀಲಿ ನೀನು ಇರು
ಆಚೆಕರೆಯಲಿ ನಾನು ಇರುತೀನಿ
ಈಚೆಕರೆಯಲಿ ನೀನು ಇರು
ನಾನಿಲ್ಲಿಗೆ ಬಂದುದಕೆ ಗುರುತೇನು ಅಂದ್ರೆ
ನಿನ್ನ ನಾಮದ ಭಕ್ತರಿಗೆ
ಗೋಕುಲಾಷ್ಟಮಿ ಜಾತ್ರೆ ಅಗುವಾಗಿ
ಕಡೇದಿನ ಸಿದ್ದಪ್ಪಾಜಿ ಸ್ಯಾವೆಯ
ನೀ ಮಾಡಸೋ ಮುತ್ತತ್ತಿರಾಯ
ಚಿಕ್ಕಲ್ಲೂರಿನಲ್ಲಿ ಜಾತ್ರೆ ಆಗುವಾಗ
ನಾನು ಮುತ್ತತ್ತಿರಾಯನ ಸೇವೆ
ಕಡೆಬಾಗಿಲ ಸೇವೆ ಮಣಸೇವೆ
ಮಾಡಿಸುತೀನಿ
ಇಲ್ಲಿ ಏನಪ್ಪ ಅಂದ್ರೆ
ನಾನು ಇಲ್ಲಿಗೆ ಬಂದದ್ದಕ್ಕೆ
ನಾನು ಭಾವಕಾಣೊ
ನೀನೇ ಭಾವಮೈದ ಕಾಣೊ

ಮುತ್ತತ್ತಿರಾಯನಿಗೆ

ಮನ್ನಣೆ ಮಾತ ಹೇಳಿ ಬಿಟ್ಟು

ಬ್ಯಾಟೆರಾಯನ

ಗುಡಿಯ ಹತ್ತಿರ ಬಂದರು ಸಿದ್ಧಾಪ್ಪಾಜಿ

ಬ್ಯಾಟೆರಾಯನ ಎಡೆಯ

ಬ್ಯಾಡೆರಾಯನಿಗೆ ಕೊಟ್ಟು

ಅಲ್ಲಿ ಭಂಗಿ ಫಲಾರ

ಆರು ಕಂಡುಗ ಭಂಗಿಸೊಪ್ಪು

ಮೂರು ದಮ್ಮು

ಮೂರು ಗಳಿಗ್ಗಂಡ ತಮ್ಮ ಹೃದಯದಲ್ಲಿ ಸೇವಿಸಿ

ಹಲಗೂರು ಪಾಂಚಾಳಗೇರಿಗೆ

ಉರುಬೆ ಬಿಟ್ಟರಂತೆ”[೧೫]

ರಾ.ವೆಂಕಟೇಶ್ ಇಂದ್ವಾಡಿಯವರು ಸಂಪಾದಿಸಿರುವ ತಮ್ಮ ಪುಸ್ತಕದಲ್ಲಿ ಮುತ್ತತ್ತಿರಾಯನನ್ನು ಕುರಿತು ಈ ಅಂಶಗಳನ್ನು ನೀಡುತ್ತಾರೆ.

“ಹುಲಿಯ ಮೇಲಾ ಕುತ್ಕಂಡು

ಅಪ್ಪ ಪರಂಜ್ಯೋತಿ

ಹುಲ್ಲ ಚರ್ಮ ಹೊದ್ಕ ಕಂಡು

ಬರುವರು ಸಿದ್ಧಾಪ್ಪಾಜಿ

ಮೂಡಲ ಮುತ್ತತ್ತಿರಾಯ

ಮೂರು ನಾಮದ ಒಡೆಯ

ಹೊಂಗ ಅಳ್ಳದ ಒಳಗಾ

ಶಂಕು ಬೋಗಾಸಿ ಹೊತ್ಕಂಡು

ಹೊಂಗ ಅಳ್ಳದ ಒಳಗಾ

ನಾಮಸೇವ ಮಾಡುವಾಗ

ಸಿದ್ಧಾಪ್ಪಾಜಿ ಕಂಡನಂತಾ

ಬಿದ್ದು-ಕೆದ್ದು ಓಡಿದನಂತಾ

॥ಸಿದ್ದಯ್ಯ ಸ್ವಾಮಿ ಬನ್ನಿ

ಮುತ್ತತ್ತಿರಾಯ

ಲಿಂಗಯ್ಯ ನೀವೇ ಬನ್ನಿ

ಹೊಂಗ ಅಳ್ಳದಲ್ಲಿ ನಾಮದ ಸೇವಾ ಮಾಡುವಾಗ ಸಿದ್ಧಾಪ್ಪಾಜಿಯವರು ಕಂಡ ಮೂಡಲ್ ಮುತ್ತತ್ತಿರಾಯ ಶಂಕು ಬೋನಾಸಿಯನ್ನು ಬಿಟ್ಟು ಒಡ್ಡ 'ಏಯ್ ಎಲ್ಲಿಗೆ ಹೋಯ್ತಿಯಾ ಸ್ವಲ್ಪ ನಿಂಕ್ಕೊ ಅಂದ್ರ' ತಾವ್ ಯಾರ್ ಬುಧ್ಧಿ' ಅಂದಾ ನಾನೊಬ್ಬ ಬೀದಿಯೊಳಗಾ ಭಿಕ್ಷಾ ಮಾಡುವ ತಿರುಕಾ ಕಾಣೋ' ತಾವ್ ಎಲ್ಲಿಗೋಗ್ತೀರಿ ಅಂದಾ_. ಹಲಗೂರಗಾ ಹೋಗ್ತಿನಿ' ಅಂದ್ರು ಮುತ್ತತ್ತಿರಾಯ ಹೇಳ್ದ ಹೊಂಗ ತೋಪಿನ ಒಳಗಾ, ಕುರುಬರ ದೊಡ್ಡಿಯೊಳಗಾ ಮಂಡಲದ ಮಾಲಿ ಎಂಬತ್ತ ಮೊಳದ ಕೊಂಡವಾ ಎದದೂದ್ದ ಹಾಕ್ಕಂಡು ಬೇವಿನಮರ ಬೀಸ್ಕತ್ತಿದ್ದಾಗ ಆ ಎಂಭತ್ತು ಮೊಳದ ಕೊಂಡ್ವಾ ಏಳುಸಾರಿ ಆಯ್ದ್ರಿ ಹಲಗೂರು ಏಳ ಪವಾಡ ಗೆಲ್ಲತ್ತಿದ್ದರಿ ಬುಧ್ಧಿ' ಮುತ್ತತ್ತಿರಾಯ ಹೇಳ್ದ ಇವೊತ್ತು ನಾ ಖಂಡಿತವಾಗಿ ಬರಾದಿಲ್ಲಾ 'ಅಂದಾ_. ಅಂದಾ.

'ಏಕೋ ಮುತ್ತತ್ತಿರಾಯ' ಅಂದಾ 'ನಮ್ಮಪ್ಪಾಜಿ, ಶಂಕು ಬೋನಾಸ ಎತ್ಕಂಡು ಶನಿವಾರ ದಿವ್ಸ ಸಣ್ಣನಾಮ ಹಾಕ್ಕಂಡು ಚಾಗಟೆ ತೆಗ್ದು ಕಂಕಳ್ಗ ಹಾಕ್ಕಂಡು, ಕೊಣಮಿಣಿ ಹಾಕ್ಕಂಡು 'ಬೋ' ಅಂಥಾ ಶಂಕಾ ಊದ್ವಿ, ಹಲಗೂರುಗೊ ಭಿಕ್ಷುಕ ಹೋದಿ ಕೆಂಗೇರಿ ಏರಿಮೇಲಾ ಕುಂತಿದ್ದಾಳ ಮಂಡಲದ ಮಾರಮ್ಮ ಕೆಂಗೇರಿ ಮಾರಿ ಒಂದು ಸಾರಿ ಕಾಕ್ ಹೊಡ್ದ. ಆ ಶಂಕು ಬೋನಾಸ ತೆಗ್ದು ಮುಂಡಗಳ್ಳಿ ಬೇಲಿಗಾ ಎಸ್ದಬಿಟ್ಟು ಹನ್ನೆರಡು ವರ್ಷವಾಯ್ತು ತಂದೆ, ಇಂದಿಗೂ ಆ ಕಡೆ ತಿರ್ಗನೋಡಿಲ್ಲಾ. ಎಲ್ಲಗಾದ್ರು ಕರರೀ ಬತ್ತೀನಿ ಹಲಗೂರುಗಾ ಮಾತ್ರ ಬರನಾರಿ. ಸಿದ್ಧಾಪ್ಪಾಜಿಯವರು ಮುತ್ತತ್ತಿರಾಯ ಆಡತಿರುವ ಮಾತ ಕೇಳ್ಕಂಡು ಹೊಂಗ ಹಳ್ಳದಲ್ಲಿ ಕಂಡಾಯ ಬೆಳಗಿ ಹೂವು ಹೊಂಬಾಳಾ ಮಾಡ್ತಿದ್ದಾರ. ಅಲ್ಲಿ ನೆತ್ತಿದಂತಾ ಕಂಡಾಯಕ ಕವಡ ಸಾಂಬ್ರಾಣಿ ಹಾಕಿ ಮಂಗಳಾರತಿ ಬೆಳಗಿದ್ದರು ಅಲ್ಲಿ ಬಂದ್ರ__ ಹಲಗೂರಗ ಹೋಗಮು ಇಲ್ಲದಿದ್ರಬ್ಯಾಡ, ಯಾವಾಗ ಹೊಂಗಹಳ್ಳದಲ್ಲಿ ಕಂಡಾಯ ಬೆಳಗಿ ಹೂವು ಹೊಂಬಾಳಮಾಡಿ ಕವಡ, ಸಾಂಬ್ರಾಣಿ ಹಾಕಿದ್ದಾರೆ. ಧರೆಗೆ ದೊಡ್ಡವರ್ಗ ಕರವೆತ್ತಿ ಕೈಮುಗಿದು ಶಿರಬಾಗಿ ಶರಣ ಮಾಡುವರೆ "ಅಪ್ಪಾಜಿ ಇವೊತ್ತು ಹಲಗೂರುಗಾ ನಾ ಪ್ರಯಾಣ ಮಾಡ್ತಿದ್ದೀನಿ.

ಅಣ್ಣನಾಸ ನನಗಿಲ್ಲಾ

ತಮ್ಮನಾಸ ನನಗಿಲ್ಲಾ

ತಂದೆಯಾಸ ನನಗಿಲ್ಲಾ

ಯಾರು ಇಲ್ಲದ ಅನಾಥರಿ ಗಾ

ನಿನ್ನದೇ ಸಕಾರಪ್ಪ

॥ಸಿದ್ಧಯ್ಯ ಸ್ವಾಮಿ ಬನ್ನಿ

ಪವಾಡ ಲಿಂಗಯ್ಯ ನೀವೇ ಬನ್ನಿ॥

ಯಾರು ಇಲ್ಲದಾ ಅನಾಥರಿಗೆ ನಿನ್ನದೇ ಸಕಾರವಪ್ಪಾ ಅಂದನಂತಾ ಸಿದ್ಧಾಪ್ಪಾಜಿ. ಆ ಹೊಂಗಹಳ್ಳದಲ್ಲಿ ಎರಡು ಕಣ್ಣಲ್ಲಿ ನೀರು ತುಂಬ್ಕಂಡು ದುಃಖ ಮಾಡುವಾಗ

ಎಡದ ಮಂಡ ಮೇಲಾ

ಹಿರಿ ಚನ್ನಜಮ್ಮಾ

ಬಲದ ಮಂಡಾ ಮೇಲಾ

ನನ್ನ ಕಿಡುಗಣ್ಣ ರೇಚಣ್ಣ

ಮಂಟೇಸ್ವಾಮಿ ಬಂದಾರಂತಾ

॥ಸಿದ್ಧಯ್ಯ ಸ್ವಾಮಿ ಬನ್ನಿ

ಗುರುದೇವ ಗಂಗಾಧರ ನೀವೇ ಬನ್ನಿ॥

ಬೆಚ್ಚಬೇಡ ಕಂದಾ ಬೆದರಬೇಡ ಮಗನೆ ನಾನು ಸಾಕಿದ ಮಗ್ನ ನಾನು ಮರೆತನಪ್ಪ ಬೇಟಮಣ ಮಾಡ್ಕಂಡು ಹಲಗೂರಗೆ ಪ್ರಯಾಣ ಮಾಡಿ ಅಂದ್ರು. ಯಾವಾಗ ಮೂಡಲ ಮುತ್ತತ್ತಿರಾಯ ಸಂಕು ಬೋನಾಸಿಯನ್ನು ಎಡಗಡೆಗೆ ಹಾಕ್ಕಂಡ. ಕೊಣಮಿಣೆ ತೆಗ್ದು ಹೆಗಲಗ ಕಟ್ಕಂಡಾ

ಫಲಹಾರ ತಕ್ಕಂಡು

ಮೂಡಲ ಮುತ್ತತ್ತಿರಾಯ

ಮಣೆಯನ್ನು ಹಾಕ್ಕಂಡು

ಹೌ-ಉ.ಅಂಥಾ ಬ್ಯಾಟ

ಮಣೆಯ ಮಾಡುತಾರ

॥ಸಿದ್ದಯ್ಯ ಸ್ವಾಮಿ ಬನ್ನಿ
ಮುತ್ತತ್ತಿರಾಯ ಲಿಂಗಯ್ಯ ನೀವೇ ಬನ್ನಿ॥

ಬ್ಯಾಡಮಣೆಯನ್ನು ಆಡ್ಕಂಡು ಬರುವಾಗ ಧರೆಗೆ ದೊಡ್ಡವರು ಹೇಳಿದ್ರು, ಚಿಕ್ಕಲ್ಲೂರು ಜಾತ್ರೆಯಲ್ಲಿ ಚಂದ್ರಮಂಡಲ ಅನ್ನಾದು ಚನ್ನಾಜಮ್ಮನೇ ಆಗಲಿ. ಮುಡಿಸೇವಾ ರೇಚಪ್ಪಾಜಿಗೆ ಆಗಲಿ, ದೊಡ್ಡವರ ಸೇವಾ ದೊಡ್ಡಮ್ಮತಾಯಿಯೇ ಆಗಲಿ, ಸಿದ್ಧರಾಮನ ಸೇವಾ ಸಿದ್ಧ ಋಷಿಗೆ ಆಗೆಲೆಪ್ಪ. ಎಲ್ಲ ತೀರ್ಥಾ ಮೇಲಾ ಹಳ್ಳದ ಕರವೊಳಗ ಮರಿಕುರಿಕೂದು ಮಾಡೋ ಪಂತಿಸೇವಾ ಅನ್ನಾದು ಮಾರ ಮಾರಿಗೆಲ್ಲಾ ರಕ್ತ ಶಾಂತಿ ಆಗಲಿ, ಇವೆಲ್ಲಾ ತೀರದ ಮೇಲಾ

ಮೂರು ನಾಮದ ಒಡೆಯ
ಮೂಡಲ ಮುತ್ತತ್ತಿರಾಯ
ಮುತ್ತತ್ತಿರಾಯನ ಸೇವಾಂತ
ನಿನ್ಗ ನಾಮಕರಣವಾಗಲೆಪ್ಪಾ॥
॥ಸಿದ್ದಯ್ಯ ಸ್ವಾಮಿ ಬನ್ನಿ
ಪವಾಡ ಲಿಂಗಯ್ಯ ನೀವೇ ಬನ್ನಿ॥
ಹೊಂಗತೋಪ ಬಿಟ್ಟರಂತಾ
ಕುರುಬರ ದೊಡ್ಡಗ ಬಂದರಂತಾ॥
॥ಸಿದ್ದಯ್ಯ ಸ್ವಾಮಿ ಬನ್ನಿ
ಸಿದ್ಧಾಪ್ಪಾಜಿ ಲಿಂಗಯ್ಯ ನೀವೇ ಬನ್ನಿ[೧೫]"

ಪ್ರೊ.ಹಿ.ಚಿ.ಬೋರಲಿಂಗಯ್ಯ ಅವರು ಸಂಪಾದಿಸಿರುವ ಪುಸ್ತಕದಲ್ಲಿ ಸಿದ್ಧಾಪ್ಪಾಜಿಗೂ, ಮುತ್ತತ್ತಿರಾಯನಿಗೂ ದೀರ್ಘ ಸಂಭಾಷಣೆ ನಡೆಯುತ್ತದೆ ಅದು ಹೀಗಿದೆ.

"ಏಳುನೂರು ಹೆಗ್ಗುಲುಮೆಗಳ ಬೆಂಕಿ
ಹೊಗೆ ಮಾತ್ರ ಆಕಾಶಕ್ಕೆ ಹೊಯ್ತಿತ್ತಂತೆ
ಚನ್ನಬೆಂಕಿ ಹೊಗೆ ಆಕಾಶಕ್ಕೆ ಹೋಗುವುದ
ನೋಡುಬುಟ್ಟು ಸಿದ್ಧಪ್ಪಾಜಿ
ಆಗಲೀಗ ಆಕಾಶದಲ್ಲಿರ್‍ತಕ್ಕಂಥ ಹಕ್ಕಿಪಕ್ಷಿ ಜೀವಜಂತು ಪ್ರಾಣಿಗಳೆಲ್ಲ
ಹೊಗೆಗೆ ಸಿಕ್ಕಿ ರೆಕ್ಕೆ ಪುಕ್ಕವೆಲ್ಲ ಬೆಂದೋಗಿ

ಸತ್ತು ಸತ್ತು ಭೂಮಿಗೆ ಉದುರುತ್ತಿದ್ದುವಂತೆ
ಉದುರುವಂಥ ಪಕ್ಷಿಗಳ ನೋಡುಬುಟ್ಟು
ಆಕಾಶಕ್ಕೆ ಹೋಗುವಂಥ ಹೊಗೆ ನೋಡ್ಬುಟ್ಟು ಸಿದ್ಧಪ್ಪಾಜಿ
ಅದು ಹಲಗೂರು ಪಾಂಚಾಳಗೇರಿ ಹೊಗೆಯೇ ಇರಬೇಕು ಅಂತೇಳಿ
ಅಯ್ಯಾ ಹೊಗೆಯನ್ನೇ ನೋಡುತಾನೆ
ಬಾಳ ಭಯ ಪಟ್ಟನಲ್ಲ ॥ಸಿದ್ಧಯ್ಯ॥
ಬಾಳ ಭಯ ಕಂದ
ಪಟ್ಟುಕೊಂಡು ನನ್ನಪ್ಪ
ನೀಲಿ ಸಿದ್ಧಪ್ಪಾಜಿ
ಅವರು ಹಲಗೂರು ನೆನಕೊಂಡು
ಬಾಳಚಿಂತೆ ಮಾಡುತಾರೆ ॥ಸಿದ್ಧಯ್ಯ॥
ಸಿದ್ಧಪ್ಪಾಜಿ ಹೊಗೆ ನೋಡ್ಕಂಡು ದುಃಖಿಸಿ ದುಃಖಪಡ್ತ
ಎಡಬಲ ಸುತ್ತಮುತ್ತ ನೋಡುದ್ರಂತೆ
ಆಗಲೀಗ ಮೂರ್‍ನಾಮದ ದಾಸಯ್ಯ ಮೂಲಲ್ಲಿ ಮುತ್ತತ್ತಿರಾಯ
ಅವನು ಕಕ್ಕೆ ಮರದ ಅಂಡಲ್ಲಿ
ತಟ್ಟವೊತ್ತನೆ ಒದ್ದಾಡುತಾನೆ ॥ಸಿದ್ಧಯ್ಯ॥
ಗುರುವೇ ಕಕ್ಕೆ ಮರದಂಡಲ್ಲಿ
ಮೂಲೇಲಿ ಮುತ್ತತ್ತಿರಾಯ
ಮೂರ್‍ನಾಮದ ದಾಸಪ್ಪ
ಕಕ್ಕೆಮರದ ಅಂಡಲ್ಲಿ
ಸಿದ್ಧಪ್ಪಾಜಿಯವರ
ನೋಡ್ಬುಟ್ಟು ನನ್ನ ಗುರುವು
ಅಯ್ಯೋ ಹಲಗೂರು ದೊರೆ ಗೋಳು
ಇವರು ಅಂತ ನನ್ನ ಗುರುವು
ಅಂಡತ್ಕಂಡು ಮಲಗಿಕೊಂಡ ॥ಸಿದ್ಧಯ್ಯ॥
ಕಕ್ಕೆಮರದ ಅಂಡಲ್ಲಿ ದೇವ
ಸಿದ್ಧಪ್ಪಾಜಿಯವರ ನೋಡ್ಬುಟು
ಅದುತ್ಕಂಡು ಗಡಗಡನೆ ನಡುಗ್ತ ಥರಥರನೆ ಒದರುತ್ತ
ಆಗಲೀಗ ಮೂಲಿಗ ಮುತ್ತತ್ತಿರಾಯ ಮೊಕ್ಕಡನಾಗಿ ಮಲಗಿದ್ದ

ಮನುಗಿದ್ದಂಥ ಮೂರ್‍ನಾಮದ ದಾಸಪ್ಪನನ್ನು
ಕಣ್ಣಿಂದ ನೋಡ್ಬುಟ್ಟು ಸಿದ್ಧಪ್ಪಾಜಿ
ಏನಪ್ಪ ಮೂರ್‍ನಾಮದ ದಾಸಯ್ಯ
ಯಕೋ ಕಕ್ಕೆ ಮರದಂಡಲ್ಲಿ ಬಿದ್ದುಕೊಂಡು ಯಾಕೆ ಒದ್ದಾಡಿಯಪ್ಪ
ಲೋಕಕ್ಕೆ ಮರ ಬಿಟ್ಟು ನೀನು
ಹೊರಗೆ ಬಪ್ಪಾ ಎಂದರಲ್ಲ ॥ಸಿದ್ಧಯ್ಯ॥
ಕಕ್ಕೆ ಮರ ಬುಟ್ಟು ಬುಟ್ಟು ಹೊರಗೆ ಬಪ್ಪಾ
ಬಾಕಂದ ಎಂದರು
ಅಯ್ಯೋ ಗುರುದೇವ ಅಯ್ಯೋ ನನ್ನಪ್ಪ
ನೀವು ಯಾರು ಬುದ್ಧಿ
ನೀವು ಎಂತು ಹಲಗೂರವರೋ ಯಾವೂರಪ್ಪ ಎಂದರು
ಲೋ ದಾಸಪ್ಪ
ನಾನು ಹಲಗೂರವ್ನಲ್ಲ ಕಣಪ್ಪ
ಧರೆಗೆ ದೊಡ್ಡವರ ಮಗ ಸಿದ್ಧಪ್ಪಾಜಿ
ನಮ್ಮ ತಂದೆ ರಾಚಪ್ಪಾಜಿ
ತಾಯಿ ದೊಡ್ಡಮ್ಮ ತಾಯಿ
ಅವರು ಮೂರು ಜನಕ್ಕೂ ನಾನು ಒಬ್ಬ ಮಗ ಕಣೋ
ನನ್ನ ಹೆಸ್ರು ಸಿದ್ಧಪ್ಪಾಜಿ ಕಣಪ್ಪ ಎಂದರು
ಅಯ್ಯೋ ಸಿದ್ಧಪ್ಪಾಜಿಯವರೇ
ಇಲ್ಲಿಗಂಟ ಯಾಕೆ ಬಂದ್ಬುಟ್ರಿ ನೀವು?
ಈವೊತ್ತು ಸಟ್ಟ ಸನುವಾರ ಎನುಕೇಳಿ ಗುರುದೇವ
ಎದ್ದು ಸ್ನಾನ ಮಾಡ್ಕೊಂಡು ಸ್ವಾಮಿ
ಹಳದಿ ಅಂಗರೀಕ ಇಕ್ಕೊಂಡು
ಈ ಬೆರೆಬೆರೆತ ಕಾವಿ ಸುತ್ಕೊಂಡು
ನಾಮನೇಮನೆ ಮಾಡ್ಕೊಂಡು
ಈ ಜಾಗಟೇ ತಕ್ಕೊಂಡು
ಈ ಸಂಕನೇ ಹೊತಕೊಂಡು
ಈ ಗಂಟೇನೇ ತಕ್ಕೊಂಡು
ಎಲ್ಲಾ ಊರ್‍ಗೂ ಹೊಯ್ತೀನಿ ಒಸೊಸಿ ಸಿಗ್ತದೆ ಭಿಕ್ಷಾ

ಹಲಗೂರ್ಗೆಂಟೋಗ್ಬುಟ್ರೆ ದೊಡ್ಡ ಪಟ್ನವಾಗದೆ
ಅಲ್ಲಿಗೊಂಟೋಗ್ಬುಟ್ರೆ ನನಗೆ
ಜೋಳ್ಗೆ ತುಂಬ ಭಿಕ್ಸ ಸಿಕ್ಬುಡ್ತದೆ ಅಂತೇಳಿ
ಯಾವೂರ್ನೂ ಬಿಟ್ಬು ಬುಟ್ಬು
ಹಲಗೂರ ಬಿಕ್ಸಕೆ ನಾ
ಹೋದಿ ನನ್ನ ಗುರುವು ॥ಸಿದ್ಧಯ್ಯ॥
ಹಲಗೂರಿಗೆ ಭಿಕ್ಸಕ್ಕೆ ಹೊಂಟೋಗ್ಬುಟ್ಟೆ ಬುದ್ಧಿ
ಹಲಗೂರ್ಗೆ ನಾನು ಹೋದೇಟ್ಗೆ ಗುರುದೇವ
ಹಲಗೂರ ಪಾಂಚಾಳ ದೊರೆಗಳು
ನನ್ನ ಮೊಕ ನೋಡ್ಬುಟ್ಟು
ಲೋ ಇವನಾರ್ಲ ಇವನಾರ್ಲ
ನಮ್ಮ ಊರುಗ್ಬುಟ್ಟವರ್‍ಯಾರೂ
ನಮ್ಮ ಕೇರಿಗೆ ಬುಟ್ಟವರ್‍ಯಾರೂ
ನಮ್ಮ ಗ್ರಾಮಕೆ ಬುಟ್ಟವರ್‍ಯಾರು
ಹಿಡಿಕರ್ಲ ಹಿಡಿಕರ್ಲ
ಹಾಗನುತೇಳಿ ನನ್ನ ಗುರುವು
ನನಗೇ ಕಾದಿರುವ ಗುಳವ ತಂದು
ಅಡ್ಡು ಬರೆಯ ಎಳೆದರಪ್ಪ ॥ಸಿದ್ಧಯ್ಯ॥
ಕಾದಿರತಕ್ಕಂಥ ಗುಳ ತಂದ್ಬುಟ್ಟು
ಅಡ್ಡ ಬರೆ ನನಗೆಳ್ದುಬುಟ್ರು ಬುದ್ಧಿ
ಈ ಊರಿಗೆ ನಾನು ಯಾತಕ್ಕೆ ಬರದನಪ್ಪ
ಈ ಗ್ರಾಮಕ್ಕೆ ನಾನು ಯಾತುಕ್ಕೆ ಬಂದಿ
ಈಗ ಹಲಗೂರಲ್ಲಿ ನನ್ನ ಪ್ರಾಣ ಹೊಂಟೋಗ್ಬುಡ್ತದೆ
ಹಲಗೂರು ದೊರೆಗಳು ನನ್ನ ಕೊಂದಾಕ್ಬುಡ್ತರೆ ಅಂತೇಳಿ
ಅಪ್ಪ ಹಳ್ಳ ಕಾಣೆ ಬಿದ್ದೀನಪ್ಪ
ತಿಟ್ಟುಗಾಣೆ ಎದ್ದೀನಪ್ಪಾ ॥ಸಿದ್ಧಯ್ಯ॥
ಗುರುವೇ ಹಳ್ಳಕಾಣೆ ಬಿದ್ದೇ ನಾನು
ತಿಟ್ಟೂ ಕಾಣೆ ಎದ್ದಿ ಕೇಳಿ ನನ್ನಪ್ಪ
ಅಯ್ಯಾ ಬಿದ್ದು ಕೆಟ್ಟೂ ಗುರುವೇ

ಒಡೋಡಿ ಬಂದಿ ಗುರುವು ॥ಸಿದ್ಧಯ್ಯ॥
ಈಗಲೀಗ ಗುರುದೇವ
ಹಳ್ಳಕಾಣೆ ಬಿದ್ದು ತಿಟ್ಟುಗಾಣೆ ಎದ್ದು
ನಾನು ಓಡೋಡಿ ಬರುವಾಗ ನನ್ನಪ್ಪ
ಹಲಗೂರು ಪಾಂಚಾಳದವರು
ಅಣ್ಣಾ ಅಲ್ಲೋಡ್ತಾವ್ನೆ ಕಣಣ್ಣ
ಅಲ್ಲೊಯ್ತಾ ಅವ್ನೆ ಕಣಣ್ಣ ಮೂರ್ನಾಮದ ದಾಸಪ್ಪ
ಓಡ್ರಣ್ಣ ಓಡ್ರಣ್ಣ ಅಂತೇಳಿ
ಹಿಂದಿಂದೆ ಅಟ್ಟಾಡ್ಕೊಂಡು ಬತಿದ್ರು ಕಣಪ್ಪ
ಈಗ ಹಲಗೂರು ಪಾಂಚಾಳದವರು
ನನ್ನ ಬಿಡೋದಿಲ್ಲ ಅಂದುಬುಟ್ಟು
ಬಿದ್ದು ಕೆಡ್ದು ಗುರುದೇವ ದಾಸಪ್ಪ ಅನ್ನಿಸ್ಕೊಬಾರ್ದು
ಎಲ್ಲಾನು ಅವುಸ್ಕೊಂಡಾರು ಕದ್ದೊಟ್ಟೊಗ್ಬೇಕು ಅಂತೇಳಿ
ನನ್ನ ಜಾಗಟೇನು ಅವುಸ್ಕೊಂಡಿ
ನನ್ನ ಶಂಕುನೂವೆ ಅವುಸ್ಕೊಂಡಿ
ನನ್ನ ಬೋನಾಸಿಯ ಅವುಸ್ಕೊಂಡಿ
ಗುರುವೇ ಹಾಳಾದ ಗಂಟೆ
ಟಣಾ ಟಣಾನೆ ಹೊಡ್ಕುಂಬುಡ್ತು ॥ಸಿದ್ಧಯ್ಯ॥
ಗುರುದೇವ
ಜಾಗಟೂ ಸುಮ್ಗಿತ್ತು ಕಣಪ್ಪ ಶಂಕೂ ಸುಮ್ಗಿತ್ತು
ನನ್ನ ಬೋನಾಸು ಸುಮ್ಗಿತ್ತು
ಹಾಳ ಮನೆದು ಬೆನ್ನಿಗೆ ಕಟ್ಟಿದ್ನಲ್ಲ ಗಂಟೆ
ಅದು ಸುಮ್ನಿರ್ಲಿಲ್ಲ ಬುದ್ಧಿ
ನಾನು ಬಿದ್ದು ಕೆಡ್ದು ಬರುವಾಗದು
ಢಣ್ ಢಣ್ ಅಂತ ಹೊಡ್ಕೊಂಬುಟ್ತು ॥ಸಿದ್ಧಯ್ಯ॥
ಯಾವಾಗ ಟಣ್ ಟಣ್‌ನೆ ಹೊಡ್ಕೊಂಬುಡ್ತೊ
ಅಲ್ಲಿ ಗಂಟೆ ಸಬ್ಬ ಆಯ್ದದೆ ಕಣಣ್ಣ
ಹೊಯ್ತವ್ನೆ ಅಂತ ಅಟ್ಟಾಡ್ಕೊಂಡ್ಬತ್ತಿದ್ರು
ಈ ಹಾಳು ಮನೆ ಗಂಟೆಂದ ನನ್ನ ಪ್ರಾಣ ಹೊಂಟೊಯ್ತದಲ್ಲ ಅಂದ್ಬುಟ್ರು

ಅಪ್ಪಾ ಗಂಟೇನಾದರೆ ಕಿತ್ತೀನಪ್ಪ
ಎಕ್ಕದ ಮೆಳೆಗೆ ಎಸ್ತೀನಪ್ಪ ॥ಸಿದ್ಧಯ್ಯ॥
ಗುರುದೇವಾ
ಗಂಟೆ ಕಿತ್ತಾಕ್ಬುಟ್ಟು
ಈ ಕಕ್ಕೆಮೆಳೆಗೆ ಎಸ್ತುಬುಟ್ಟೆ ಕಣಪ್ಪ
ಹಲಗೂರು ದೊರ್ಗಳೆಲ್ಲ
ಅಣ್ಣ ಬಂದಿದ್ದ ದಾಸಯ್ಯ ಸಿಕ್ದೆ ಹೊಂಟೋದ
ನಾಗಳಾದರೆ ಬತ್ತಾನೆ ಬನ್ನೀ ಅಂದ್ಬುಟ್ಟು
ಬತ್ತಿದವರೆಲ್ಲ ಹಿಂದಕ್ಕೊಂಟೋದ್ರು
ಈಗ ಸುಧಾರಿಸ್ಕೊಂಡು ಮೇಲಕ್ಕೆದ್ದು ಕೂತ್ಕೊಂಡು
ಸಂಕು ಜಾಗಟೆ ಚೋನಾಸಿ ಎಲ್ಲಾ ಅದೆ
ನನ್ನ ಗಂಟೆ ಹೊಂಟೊಯ್ತಲ್ಲ ಅಂದ್ಬುಟ್ಟು
ಈ ಕಕ್ಕೆ ಮರ್ದಂಡಲ್ಲಿ ಹುಡುಕ್ತಾ ಕೂತಿವ್ನಿ
ಹಾಳು ಮನೆ ಗಂಟೆ ನನಗೆ
ಇನ್ನೂವೆ ಸಿಕ್ಕೇ ಇಲ್ಲ ॥ಸಿದ್ಧಯ್ಯ॥
ಹಾಳಾದ ಗಂಟೆ ದೇವ
ಇನ್ನೂ ನನಗೆ ಸಿಕ್ಕಿಲ್ಲ ಗುರುದೇವ ಇನ್ನೂ ಸಿಕ್ಕಿಲ್ಲ ಗುರುವೆ ಎಂದರು
ದಾಸಪ್ಪ ಈ ಥರದಲ್ಲಿ ನೀನು ಹಲಗೂರ್ಗೋದರೆ
ಹಲಗೂರು ದೊರ್ಗಳು ನಿನಗೆ ಹೆದ್ರುಕೊಂಡು ಭಿಕ್ಸ ಕೊಟ್ಟಾರ
ಈ ಥರದಲ್ಲೋಗಬಾರ್ದಾಗಿತ್ತು
ಈಗಲೀಗ ನಮ್ಮ ಗುರು ಕೊಟ್ಟೋದ ಕಣಯ್ಯ
ನಮ್ಮ ಗುರು ಕೊಟ್ಟಿರುವಂಥ
ಪರ್ಸಾದ ಸೇವನೆ ಮಾಡ್ಕೊಂಡು ಹೋದರೆ
ಆನೆಯಂಥ ಸಕುತಿ ಬರ್ತದೆ
ಕುದುರೆಯಂಥ ವಾಟ ಬರ್ತದೆ
ನಮ್ಮ ಗುರುಗಳು ಕೊಟ್ಟವರೆ ಹೇಳ್ತೀನಿ ಕೇಳು
ಈಗಲೀಗ ನಾವು ಇಬ್ರು ಸೇವನೆ ಮಾಡ್ಕೊಂಡು
ನಾನು ನೀನು ಇಬ್ರೂವೆ
ಹಲಗೂರು ಪಾಂಚಾಳಗೇರಿಗೆ ಭಿಕ್ಸಕ್ಕೊಂಟೋದ್ರೆ

ನಮ್ಮಿಬ್ರ ನೋಡಿ ಬಾಳ ಹೆದರೋಗ್ಬುಡ್ತರೆ
ಈಗಲೀಗ ಸೇವನೆ ಮಾಡ್ಕೊಂಡು ಹಲಗೂರಿಗೆ ಹೋಗವಪ್ಪ ಎಂದರು
ಗುರುದೇವ ನಿಮ್ಮ ಗುರುಗಳು ಅಂದ್ರೆ ಏನು ಕೊಟ್ಟಿದ್ದರು
ಆನೆಯಂಥ ಸಕುತಿ
ಕುದುರೆಯಂಥ ವಾಟ ಬರಬೇಕಾದರೆ
ಅದು ಏನು ತಂದೆ ಎಂದರು
ಓ ಮುತ್ತತ್ತಿರಾಯ
ಮೂರ್ನಾಮದ ದಾಸಪ್ಪ ಬಾ ನನ್ನ ಮುಂದ್ಗಡೆಕೂತ್ಕೊ
ಕೂತ್ಕೊ ಬಪ್ಪ ಎಂದರು
ಸಿದ್ಧಪ್ಪಾಜಿಯವರ ಮುಂದೆ
ತಾನು ಬಂದು ಕೂತಕೊಂಡ ॥ಸಿದ್ಧಯ್ಯ॥
ಮುತ್ತತ್ತಿರಾಯನ್ನ ಮುಂದು ಕುಂಡ್ರುಸಿಗಂಡು
ಮೇಲಕ್ಕಂತು ನೋಡಿದ್ರು ಸಿದ್ಧಪ್ಪಾಜಿ
ಹಲಗೂರು ಪಾಂಚಾಳಗೇರಿ
ಏಳನೂರು ಹೆಗ್ಗುಲುಮೆ ಹೊಂಗೆಯಲ್ಲ ಆಕಾಸುಕ್ಕೊಯ್ತಿತ್ತು
ಆಕಾಸಕ್ಕೋಗುವ ಹೊಗೆ ನೊಡ್ಬುಟ್ಟು
ರಾಜ ಬೊಪ್ಪಗೌಡನ ಪುರಕ್ಕೆ ಕೈ ಎತ್ತಿ ಮುಗುದ್ಬುಟ್ಟು
ಅಯ್ಯೋ ಗುರುವೇ ಧರೆಗೆ ದೊಡ್ಡಪ್ಪ
ಈವತ್ತು ನನಗೆ ಎಂಥಕಷ್ಟ ಕೊಟ್ಬುಟ್ರಿಸ್ವಾಮಿ
ನನಗೆಂಥಾ ಬಂಧಾನಾ ಕೊಟ್ಟೆಯಪ್ಪ
ಎನುತೇಳಿ ಮುತ್ತಿನ ಜೋಳಿಗೆಗೆ ಕೈಹಾಕ್ದ
ಧರೆಗೆ ದೊಡ್ಡೋರ ಪಾದ ನೆನೆದ
ಮಾಯದಲ್ಲೇ ಧರೆಗೆ ದೊಡ್ಡವರು ಜೋಳಿಗೇಲಿ ಮಡಗಿದ್ದರಂತೆ
ಏನು ಅಂದರೆ
ಆರುಕಟ್ಟು ಉಡುಭಂಗಿ
ಆರುಕಟ್ಟು ತುಡುಭಂಗಿ
ಆರುಕಟ್ಟು ಹೊಗೆಸೊಪ್ಪು
ಆರುಕಟ್ಟು ಭಂಗಿಸೊಪ್ಪು
ಗುರುವೇ ಇಪ್ಪತ್ತುನಾಲ್ಕಂಡುಗ

ಭಂಗಿ ಸೊಪ್ಪು ದೇವಾ
ಜೋಳಗೇಲಿ ಮಡಗಿತ್ತು
ಅವರು ಭಂಗಿಸೊಪ್ಪು ನೋಡುತಾರೆ
ಕೈಯೆತ್ತಿ ಮುಗಿಯುತಾರೆ ॥ಸಿದ್ಧಯ್ಯ॥
ಭಂಗಿಸೊಪ್ಪು ನೋಡ್ಬುಟ್ಟು ಕೈಯೆತ್ತಿ ಮುಗುದ್ಬುಟ್ಟು
ಲೋ ಮುತ್ತತ್ತಿರಾಯ
ನೋಡು ನಮ್ಮ ಗುರು ಏನು ಕೊಟ್ಟದಾರೊ ಅಂದ್ರೆ
ಇದೇ ಕಣಪ್ಪ ಕೊಟ್ಟಿರೋದು
ಇದನ್ನೇ ಸೇವನೆ ಮಾಡ್ಬುಟ್ರೆ
ಆನೆಯಂಥ ಸಕುತಿ ಬತ್ತದೆ
ಕುದುರೆಯಂಥವಾಟ ಬತ್ತದೆ
ನಮ್ಮ ಗುರು ಕೊಟ್ಟಿರುವ ಪರ್ಸಾದ ಸೇವ್ನೆ ಮಾಡುವ ಕೂತ್ಕೊ ಅಂತೇಳಿ
ಮುತ್ತತ್ತಿರಾಯನ ಮುಂಭಾಗದಲ್ಲಿ ಕೂಡಿಸ್ಕಂಡು ಸಿದ್ಧಪ್ಪಾಜಿಯವರು
ಆರುಕಟ್ಟು ಹೊಗೇಸೊಪ್ಪು
ಆರುಕಟ್ಟು ಭಂಗೀಸೊಪ್ಪು
ಆರುಕಟ್ಟು
ಆಗಲೀಗ ಭಂಗೀಸೊಪ್ನೆ ಅಂಗೈ ಮೇಲೆ ಸುರ್ಕೊಂಡು
ಅಯ್ಯಾ ಅಂಗೈಯ್ಯಿನ ಮ್ಯಾಲೆ
ಭಂಗಿಸೊಪ್ಪು ಗುರುವೇ
ಮಡೀಕೊಂಡು ನನ್ನ ಗುರುವು
ಗುರುವೇ ನಾಗುರಾವ ಕರೆದು
ನಾಗರಿಸಾವ ತಕ್ಕೊಂಡ್ರು
ಅಯ್ಯಾ ನಾಗೂರಾವಿನ ವಿಸ
ಎಕ್ಕದಾಲಿನ ರಸ
ಪಂಚು ಪಾತ್ರೆ ರಸ
ಭಂಗಿ ಸೊಪ್ನ ರಸ
ಗುರುವೇ ಐದೂವೆ ಕೂಡಿದರೆ ಗುರುವ
ಪಂಚೈದು ಲೋಭ
ಅಪ್ಪಾಜಿ ನನ್ನ ಗುರುವು

ಅವರು ಪಂಚೈದು ಲೋಭದಲಿ
ತೀಡಿಗಾಂಜ ಮಾಡುತಾರೆ ॥ಸಿದ್ಧಯ್ಯ॥
ಅವರು ತೀಡಿ ಗಾಂಜ ಮಾಡುತಾರೆ
ತೀಡಿ ಮಿಸ್ತ ಮಾಡುತಾರೆ ॥ಸಿದ್ಧಯ್ಯ॥
ಗುರುವೇ ತೀಡಿ ಗಾಂಜ ಮಾಡಿ ಗುರುವೆ
ತೀಡಿ ಮಿಸ್ತ್ ಮಾಡಿ
ಅವರು ಬಂಗಾರದ ಚಿಲುಮೆಗೆ ಅವರು
ಜಡಿದು ಜಡಿದು ತುಂಬುತಾರೆ ॥ಸಿದ್ಧಯ್ಯ॥
ಗುರುವೆ ಬಂಗಾರದ ಚಿಲುಮೆಗೆ
ಜಡ್ದು ಜಡಿದು ದೇವಾ
ತುಂಬವರೇ ನನ್ನಪ್ಪ
ಅವರು ಹಡದು ಹಡದು ಗುರುವು
ತುಂಬವರೇ ನನ್ನ ಗುರುವು
ಗುರುವೇ ಇಪ್ಪತ್ತುನಾಲ್ಕಂಡುಗ
ಭಂಗಿಸೊಪ್ಪು ಗುರುವೇ
ಚಿಲುಮೆಗೆ ದೇವ ತುಂಬಟ್ಟು ನನ್ನಪ್ಪ
ಅವರು ಚಕಾಮಕಿ ಹೊಡೆದರಂತೆ
ತೊರೆಮೆ ಕೆಂಡ ತಗುದರಂತೆ ॥ಸಿದ್ಧಯ್ಯ॥
ಗುರುವೇ ಚಕಮಕಿಯ ಹೊಡೆದು
ತೊರೆಮೆ ಕೆಂಡ ತಗದು
ಪರಂಜ್ಯೋತಿ ಕಸ್ಸಿ
ಲೋ ಬಾರೋ ದಾಸಪ್ಪ
ಎಂದರಲ್ಲ ಮಾಯಿಕಾರ ॥ಸಿದ್ಧಯ್ಯ॥
ಚಕಮಕಿ ಹೊಡೆದು ತೊರೆಮೆ ಕೆಂಡ ತಗದು
ಬಂಗಾರದ ಚಿಲುಮೆಗೆ ತಾವಾಗಿ ತುಂಬುಕೊಂಡು
ಬಂಗಾರದ ಚಿಲುಮೆ ಮ್ಯಾಲೆ ಬೆಂಕಿಕೆಂಡ ಮಡಗ್ಬುಟ್ಟು
ದಾಸಪ್ಪ ಎದ್ದೇಳು
ಬಾ ದಾಸಯ್ಯ ಈಗಲೀಗ ಸಕ್ತಿ ಬರ್‍ತದೆ
ನಮ್ಮ ಗುರು ಕೊಟ್ಟ ಪರ್ಸಾದ ಸೇವ್ನೆ ಮಾಡುವ ಬಪ್ಪಾ ಅಂತೇಳಿ

ಆ ದಾಸಪ್ಪನ ಕೈಗೆ ಚಿಲುಮೆ ಕೊಟ್ರು
ಅವನು ಹಿಂದಕ್ಕೂ ನೋಡುತಾನೆ
ಮುಂದಕ್ಕೂ ನೋಡುತಾನೆ ॥ಸಿದ್ಧಯ್ಯ॥
ಆ ದಾಸಪ್ಪ ಹಿಂದ್ಕೂ ಮುಂದ್ಕೂ ನೋಡ್ಬುಟ್ಟು
ಅವ್ನಿಗೆ ಯೋಚ್ನೆ ಬಂದ್ಬುಡ್ತು
ಚಿಲುಮೆಯ ಈಸ್ಕೋ ಬ್ಯಾಡಾಗಿತ್ತು
ಬ್ಯಾಡ ಅಂತ ಮೊದಲೇ ಹೇಳ್ಬುಟ್ಟದ್ರೆ ಚೆನ್ನಾಗಿತ್ತು
ಈಗ ಕೈಯೊಡ್ಡಿ ಈಸ್ಕೊಬುಟ್ನಲ್ಲ
ಈಸ್ಕೊಂಡ್ಮೇಲೆ ಹಿಂದುಕ್ಕೆ ಕೊಡಾಕಾಗದಿಲ್ಲ
ಈಗ ನಾನು ಸೇವನೆ ಮಾಡ್ಲೆಬೇಕಲ್ಲ
ಅಯ್ಯೋ ಇವ್ನು ಸಿದ್ದಪ್ಪ ನಾನು ದಾಸಪ್ಪ
ಇಬ್ಬರೆಸ್ರು ಒಂದೇ ತಾನೆ ನಿಜ
ಇವ್ನಿಗೆ ಹೆದರ್ಬಾಡ್ದು ನಾನು ಭಂಗಿಸೇವ್ನೆ ಮಾಡ್ಬುಡ್ಬೇಕು ಅಂದ್ಬುಟ್ಟು
ಜೀವಕ್ಕೆ ಧೈರ್ಯ ತಕ್ಕಂಡು ದಾಸಪ್ಪ
ಯಾವಾಗಲೂ ಸೇದದೇ ಇದ್ದವ್ನು ಏನು ಮಾಡ್ದ
ಗೊತ್ತ?
ಅಯ್ಯ ಬೆಂಕಿ ಕಡೆ ಕಚ್ಚೇಬುಟ್ಟ
ಬಾಯಿ ಬಾಯಿ ಸುಟ್ಟೇಹೋಯ್ತು ॥ಸಿದ್ಧಯ್ಯ॥
ಅಯ್ಯಾ ಬೆಂಕಿ ಕಡೆ ಗುರುವೇ
ಕಚ್ಕೊಂಡು ದಾಸಪ್ಪ
ಬಾಯೇ ಸುಟ್ಕೋಯ್ತು
ಈ ಭಂಗಿ ಕುಡಿಯೋರ ಸಂಗ
ಎಂದೆಂದಿಗೂ ಬ್ಯಾಡವಪ್ಪ ॥ಸಿದ್ಧಯ್ಯ॥
ಈ ಭಂಗಿ ಕುಡಿಯೋರ ಸಂಗ
ಬ್ಯಾಡ ಕಣರಪ್ಪ ನನ್ನ ಬಾಯಿ ಹೊಯ್ತಲ್ಲಪ್ಪ ಅಂದರು ದಾಸಯ್ಯ
ಆಗ ಸಿದ್ಧಪ್ಪಾಜಿ ನೋಡುದ್ರು
ಅಯ್ಯಯ್ಯೋ ದಾಸಪ್ಪ
ಇಂಗಲ್ಲ ಕನ ದಾಸಪ್ಪ ಸೇದೋದು
ಈಗಲೀಗ ಈಚರಕೆ ತಿರುಗಿಸಿಕೊಂಡಿರುವಂಥ

ಚಿಲುಮೆಯ ಈಚರಕೆ ತಿರುಗಸ್ಕೊ
ಮಗೆ ಹೊಗೆ ಬತ್ತದೆ ಎಂದರು
ತಿಳಿಕೊಂಡು ಕೇಳದೇ ಹೋದೀಯಾ
ಅಯ್ಯಯ್ಯೋ ದಾಸಪ್ಪ
ಈಗ ಸೇವನೆ ಮಾಡು
ಎಲ್ಲ ಒಳ್ಳೇದಾಯ್ತದೆ ಸೇವನೆ ಮಾಡಪ್ಪ ಅಂದರು
ಅವರು ಒಂದು ದಮ್ಮ ಸೇದಿದರಂತೆ
ಬುಕುಬುಕನೆ ಕೆಂಬುತಾರೆ ||ಸಿದ್ಧಯ್ಯ||
ಗುರುವೇ ಒಂದು ದಮ್ಮ ದೇವ
ಸೇದ್ಬುಟ್ಟು ದಾಸಪ್ಪ
ಇನ್ನೊಂದು ದಮ್ಮಿಗೆ
ಗುರುವೇ ಗುರುದೇವ
ಅವನಿಗೆ ಕರಿ ಗುಳ್ಳೆ ಒಳಾಕ್ಕೋದೊ
ಬಿಳೀಗುಳ್ಳೆ ಮೇಕ್ಕೆ ಬಂದೊ ||ಸಿದ್ಧಯ್ಯ||
ಕರೀಗುಳ್ಳೆ ಒಳಾಕೊಂಟೋದೊ ದೇವಾ
ಬಿಳೀ ಗುಳ್ಳೆ ಮೇಕ್ಕಾಗೋಗ್ಬುಡ್ತು ದಾಸಪ್ಪ
ಅಯ್ಯಾ ನೀಡಿದ ಕಾಲು ನೀಡುದಾಗೆ
ಮುಚ್ಚಿದ ಕಣ್ಣು ಮುಚ್ಚಿದಾಗೆ ||ಸಿದ್ಧಯ್ಯ||
ನನ್ನ ಸಿದ್ಧಪ್ಪಾಜಿ ಮುಂದೆ ದೇವ
ನೊದಲೆ ಕಚ್ಕೊಂಡು ಮಲೀಕೊಂಡ ||ಸಿದ್ಧಯ್ಯ||
ನೊದಲೆ ಕಚ್ಕೊಂಡು ದಾಸಪ್ಪ
ಆಗಲೀಗ ಮೊಕ್ಕಡನಾಗಿ ಮಲಗ್ಬುಟ್ಟ
ಮನೀಕೊಂಡ ದಾಸಪ್ಪನ ಕಣ್ಣಿಂದ ನೋಡ್ಬುಟ್ಟು ಸಿದ್ಧಪ್ಪಾಜಿ
ಈಗ ಮೂರು ನಾಮದ ದಾಸಪ್ಪ ಮುತ್ತತ್ತಿರಾಯ
ಇಲ್ಲೇ ಮನುಗೋಗ್ಬುಟ್ನಲ್ಲ
ಎನುತೇಳ್ಬುಟ್ಟು ಸಿದ್ಧಪ್ಪಾಜಿಯವರು

ಬಂಗಾರದ ಚಿಲುಮೆಯ ಬಲಗೈಲಿ ಹಿಡಕೊಂಡು
ಅವರು ರಾಜ ಬೊಪ್ಪಗೌಡ್ನಪುರಕೆ ದೇವ
ಕೈಯೆತ್ತಿ ನನ್ನ ಗುರುವು
ಮುಗುದವರೆ ನನ್ನ ಗುರುವು

ಮಂಟೇಸ್ವಾಮಿ ಕಾವ್ಯವು ಜನಪದ ಮಹಾಕಾವ್ಯ ಎಂದು ಪರಿಗಣಿತವಾಗಿದೆ. "ಜನಪದ ಮಹಾಕಾವ್ಯಗಳ ಕರ್ತೃಯಾರು ಎಂಬುದು ತಿಳಿದಿರುವುದಿಲ್ಲ. ಇವು ಸಾಮೂಹಿಕ ಸೃಷ್ಟಿ, ಇವು ಬರವಣಿಗೆಯ ರೂಪದಲ್ಲಿ ಇರುವುದಿಲ್ಲ. ಕೇವಲ ಮೌಖಿಕ ರೂಪದಲ್ಲಿ ತಲೆಮಾರಿನಿಂದ ತಲೆಮಾರಿಗೆ ವರ್ಗಾವಣೆಗೊಂಡು ಇಂದಿಗೂ ಮೌಖಿಕ ರೂಪದಲ್ಲಿಯೇ ಪ್ರಚಲಿತವಾಗಿರುತ್ತದೆ" ಇತ್ತೀಚಿಗೆ, ಡಾ. ಜೀ.ಶಂ.ಪರಮಶಿವಯ್ಯ -ಶ್ರೀಮಂಟೇಸ್ವಾಮಿ-೧೯೭೩, ಡಾ. ವೆಂಕಟೇಶ್ ಇಂದ್ವಾಡಿ- ಧರೆಗೆ ದೊಡ್ಡವರು-೧೯೯೬, ಡಾ.ಹಿ.ಚಿ.ಬೋರಲಿಂಗಯ್ಯ-ಮಂಟೇಸ್ವಾಮಿ-೧೯೯೭,ಕರೀಗೌಡ ಬೀಚನಹಳ್ಳಿ-ಧರೆಗೆ ದೊಡ್ಡವರ ವಚನ (ಗದ್ಯ) ಪ್ರಕಟವಾಗಿದ್ದು ಈ ನಾಲ್ಕರಲ್ಲೂ ಸಿದ್ಧಪ್ಪಾಜಿ ಮತ್ತು ಮುತ್ತತ್ತಿರಾಯನ ಬೇಟೆಯ ಪ್ರಸಂಗ ಬರುತ್ತದೆ. ಇಬ್ಬರೂ ಬೇಟೆಯಾಗುವ ಬಗೆಯನ್ನು ಜೀವಂತ ಮನುಷ್ಯರು ನಡೆದುಕೊಳ್ಳುವ ರೀತಿಯಲ್ಲಿ ಚಿತ್ರಿಸಲಾಗಿದೆ. "ಜನಪದ ಮಹಾಕಾವ್ಯದ ಸ್ವರೂಪವನ್ನು ಸ್ಥೂಲವಾಗಿ ಈ ರೀತಿ ವಿವರಿಸಬಹುದು. ಸಾಮಾನ್ಯವಾಗಿ ಜನಪದ ಮಹಾಕಾವ್ಯಗಳು ವೀರರ ಸಾಹಸಗಳನ್ನು, ಧಾರ್ಮಿಕ ವ್ಯಕ್ತಿಗಳ ಸಾಧನೆಗಳನ್ನು ವಿವರಿಸುತ್ತವೆ. ಗಾತ್ರದಲ್ಲಿ ದೊಡ್ಡದಾಗಿರುತ್ತವೆ. ವ್ಯಾಪ್ತಿಯಲ್ಲಿ ಕಡಿಮೆ ಇರುವ ಕಾವ್ಯಗಳನ್ನು ಖಂಡಕಾವ್ಯ ಎಂದು ಕರೆಯಬಹುದು. ಸಹಜ ಸ್ಥಿತಿಯಲ್ಲಿ ಇವು ಲಾವಣಿ ಚಕ್ರಗಳಾಗಿರುತ್ತವೆ. (Ballad cycles) ನಿರ್ದಿಷ್ಟ ವೀರ ಆಯಾ ದೇಶದ ಅಥವಾ ಸಾಂಸ್ಕೃತಿಕ ಗುಂಪಿನ ಹಿತರಕ್ಷಣೆಗಾಗಿ ವಿರೋಧಿಗಳೊಡನೆ ಸೆಣಸಿ ಪ್ರಾಣತ್ಯಾಗ ಮಾಡುತ್ತಾನೆ. ಅವನು ಸತ್ತ ನಂತರ ಅವನನ್ನು ದೇವತೆಯೆಂದು ಜನರು ಪೂಜೆ ಮಾಡುತ್ತಾರೆ. ಈ ದೇವತೆಗೆ ಹೊಂದಿಕೊಂಡಂತೆ ಕಾವ್ಯ ರೂಪುಗೊಳ್ಳುತ್ತದೆ. ಹಾಡುಗಾರನಿಂದ ಹಾಡುಗಾರನಿಗೆ ಈ ಕಾವ್ಯ ಬೆಳೆಯುತ್ತಾ, ಬದಲಾಗುತ್ತಾ ಹೋಗುತ್ತದೆ. ಕಾವ್ಯ ದೀರ್ಘವಾಗಿದ್ದರೆ ಮಹಾಕಾವ್ಯದ ವ್ಯಾಪ್ತಿಯನ್ನು ಪಡೆದುಕೊಳ್ಳುತ್ತದೆ. ಈ ದೇವತೆಯ ಪ್ರೀತ್ಯರ್ಥವಾಗಿ ಜಾತ್ರೆಗಳು ನಡೆಯುತ್ತವೆ. ಜಾತ್ರೆಗಳಲ್ಲಿ ನಡೆಯುವ ಆಚರಣೆಗಳಲ್ಲಿ ಈ ಕಾವ್ಯದ ಕೆಲವು ಭಾಗಗಳನ್ನು ಹಾಡುಗಾರರು ಹಾಡುತ್ತಾರೆ. ಇಲ್ಲವೆ ನಾಟಕೀಯ ರೀತಿಯಲ್ಲಿ ಈ ಪುರಾಣದ ಕಥೆಯನ್ನು ಪುನರಭಿನಯ ಮಾಡುತ್ತಾರೆ.

ಹೀಗಾಗಿ ಜನಪದ ಮಹಾಕಾವ್ಯ ಆಯಾ ಸಾಂಸ್ಕೃತಿಕ ವರ್ಗಧ ಅಥವಾ ದೇಶದ ಪುರಾಣವೇ ಆಗಿರುತ್ತದೆ. ಜಾನಪದದ ಯಾವುದೇ ಪ್ರಕಾರಕ್ಕಿಂತ ಜನರು ಇದಕ್ಕೆ ಹೆಚ್ಚಿನ ಮಹತ್ವವನ್ನು ಕೊಡುತ್ತಾರೆ ಪೂಜ್ಯ ಭಾವನೆಯಿಂದ ಕಾಣುತ್ತಾರೆ[೧೭]”

ಈ ಮಹಾಕಾವ್ಯದಲ್ಲಿ ಶಿಷ್ಟಮಹಾಕಾವ್ಯದಲ್ಲಿ ಬಳಸುವ ಅಷ್ಟಾದಶ ವರ್ಣನೆಯೇ ಮೊದಲ್ಗೊಂಡು ಯಾವ ನಿರ್ದಿಷ್ಟ ಲಕ್ಷಣವೂ ಇರುವುದಿಲ್ಲ. ಈ ಮಂಟೇಸ್ವಾಮಿ ಕಾವ್ಯದಲ್ಲಿ ಮಂಟೇಸ್ವಾಮಿ, ರಾಚಪ್ಪಾಜಿ, ಸಿದ್ಧಪ್ಪಾಜಿ, ದೊಡ್ಡಮ್ಮತಾಯಿಯರ ಸಂಗತಿಗಳು ಹೆಚ್ಚಾಗಿ ಬರುತ್ತವೆ. ಆದರೂ ಇಲ್ಲಿ ಸಿದ್ಧಪ್ಪಾಜಿಯ ಸಂಗತಿಯೂ ಪ್ರಾಮುಖ್ಯ ಮುಖ್ಯವಾಗುತ್ತದೆ. ಸಿದ್ಧಪ್ಪಾಜಿ ಮತ್ತು ಮುತ್ತತ್ತಿರಾಯ ಭೇಟಿಯಾಗುವ ಸಂದರ್ಭ ಒದಗಿಬರುವುದು, ಕಬ್ಬಿಣದ ಭಿಕ್ಷಾ ಸನ್ನಿವೇಶದಲ್ಲಿ ತಾವು ಪವಡಿಸಲು ಗದ್ದಿಗೆ ನಿರ್ಮಾಣದ ಮಾಡಲು ಹಲಗೂರಿನಲ್ಲಿನ ಪಾಂಚಾಳರಿಂದ ಕಬ್ಬಿಣದ ಆಯುಧಗಳಾದ ೯ ಬಗೆಯ ನಗಗಳು ಅವು ಹಾರೆ ಮೂರು, ಎಲೆಗುದ್ದಲಿ ಮೂರು, ಮೊನೆಗುದ್ದಲಿ ಮೂರು ಮತ್ತು ಚಿನ್ನದ ತೊಟ್ಟಿಲು ಬೆಳ್ಳಿಯನೇಕ, ತೂಗುದೀವಿಗೆ, ಬೇರ್ಮೆ, ನಿಶಾನಿ, ಬಿರುದಿನ ಕೊಂಬು, ಕಹಳೆ, ಹುಯಿಲುದಮ್ಮಟೆ ತರುವಂತೆ ಮಂಟೇಸ್ವಾಮಿಯವರು ಶಿಷ್ಯನೂ ಹಲಗೂರು ಪಾಂಚಾಳರ ಬಂಧುವೂ ಆದ ಸಿದ್ಧಪ್ಪಾಜಿಗೆ ಆಜ್ಞೆ ನೀಡುತ್ತಾರೆ. ತಮ್ಮ ಬಂಧುಗಳಿಂದ ಪಡೆಯುವುದು ಅಷ್ಟೊಂದು ಸುಲಭವಲ್ಲ ಇಂತಹ ಸಮಯದಲ್ಲಿ ಮುತ್ತತ್ತಿರಾಯ ಸಿದ್ಧಪ್ಪಾಜಿಯ ಭೇಟಿ ನಡೆಯುತ್ತದೆ.

ಮಂಟೇಸ್ವಾಮಿ ಕಾವ್ಯಗಳಲ್ಲಿ ಉಕ್ತವಾಗಿರುವ ಈಗಿನ ಮಳವಳ್ಳಿ ತಾಲ್ಲೂಕಿನ ಹೋಬಳಿ ಕೇಂದ್ರವೇ ಹಲಗೂರು ಆಗಿದೆ. ಇದು ಪ್ರಾಚೀನ ವೀರ, ತ್ಯಾಗ ಮತ್ತು ಧಾರ್ಮಿಕ ಕೇಂದ್ರವೇ ಆಗಿದ್ದುದಲ್ಲದೆ ಕಬ್ಬಿಣಲೋಹದ ಕೈಗಾರಿಕೆಗೆ ಪ್ರಸಿದ್ಧವಾಗಿತ್ತು. ಈ ಕಾವ್ಯದಲ್ಲಿ “ಅತ್ಯಂತ ವೈಭವದಿಂದ ಬಾಳಿದ ಊರಿನಂತೆ ವರ್ಣಿತವಾಗಿದೆ. ಅನೇಕ ರಾಜರುಗಳು ಯುದ್ಧದ ಆಯುಧ ವಿಶೇಷಗಳನ್ನು ಇಲ್ಲಿಂದ ತರಿಸಿಕೊಳ್ಳುತ್ತಿದ್ದರು ಎಂದು ಈ ಕಾವ್ಯದಿಂದ ತಿಳಿದುಬರುತ್ತದೆ. ‘ಪಾಂಚಾಳ’ ಶಬ್ದ ಅಕ್ಕಸಾಲಿ, ಕಮ್ಮಾರ, ಬಡಗಿ, ಕಂಚುಗಾರ, ಕಲ್ಲುಕುಟಿಗ ಈ ಐದು ವರ್ಗಗಳಿಗೂ ಅನ್ವಯವಾದಂತೆ ಪ್ರಯೋಗವಾಗಿದೆ. ಹಲಗೂರಿನ ‘ಪಾಂಚಾಳರು’ ಈ ಎಲ್ಲ ಕಾರ್ಯಗಳಲ್ಲಿಯೂ ನಿಪುಣರಾಗಿದ್ದು ಶ್ರೀಮಂತಿಕೆಯ ದರ್ಪದಿಂದ ಕೂಡಿದ್ದರು ಎಂಬ ಅಂಶ ಕಾವ್ಯದಿಂದ ವ್ಯಕ್ತವಾಗುತ್ತದೆ. ಕುಲುಮೆಗಳ ಕುರುಹುಗಳನ್ನು ಕಾದಗಟ್ಟಿಗಳ ಅವಶೇಷಗಳನ್ನು ಈಗಲೂ ಗುರುತಿಸಲಾಗುತ್ತದೆ[೧೮]”

ಹಲಗೂರಿನಲ್ಲಿರುವ ಸಿದ್ಧಾಪ್ಪಾಜಿ ದೇವಾಲಯದ ಬಳಿ ಎದುರಿಗೆ ೫ಅಡಿ ೫ಅಂಗುಲ ಎತ್ತರದ, ೬ ಅಂಗುಲ ಅಗಲ, ೪ ಅಂಗುಲ ದಪ್ಪದ ಪ್ರಾಚೀನ ಕಬ್ಬಿಣದ ತುಂಡು ಇದೆ. ಜೊತೆಗೆ ೧.೧/೨ಅಡಿ ವ್ಯಾಸವಿರುವ ಬಳೆಯೊಂದು ಇದ್ದು ೩ ಅಂಗುಲ ದಪ್ಪವಿದೆ. ೪೨ ಅಂಗುಲ ವ್ಯಾಸವಿರುವ ಮತ್ತೊಂದು ಕಬ್ಬಿಣದ ಬಳೆಯೂ ಇದ್ದು ೨೯ ಕಬ್ಬಿಣದ ಗಟ್ಟಿಗಳು, ಉಳಿ, ಕೊಡಲಿಗಳು ಇಲ್ಲಿವೆ. ಅಲ್ಲದೆ ಬಳಿಯ ಬೆಲ್ಲಾಪುರದಲ್ಲಿ ೪ x ೨ ಅಡಿಯ ಚೌಕಾಕಾರದ ಕಾದಕಬ್ಬಿಣದ ಗಟ್ಟಿಯೂ ಇದೆ. ಸಿದ್ಧಾಪ್ಪಾಜಿ ಇದನ್ನು ಕಾಲಿನಿಂದ ಚಿಮ್ಮಿಸಿದ ಆದುದರಿಂದ ಬೆಲ್ಲಾಪುರದಲ್ಲಿ ಬಿದ್ದಿತು ಎಂದು ನಂಬಿಕೆಯಿದೆ. ಈ ಕಬ್ಬಿಣದ ಅವಶೇಷಗಳು ಇಲ್ಲಿನ ಕಬ್ಬಿಣ ಕೈಗಾರಿಕೆಯಾದವುಗಳಾಗಿವೆ. ಆದರೂ ಸಿದ್ಧಾಪ್ಪಾಜಿ ತನ್ನ ಪವಾಡದ ಸಮಯದಲ್ಲಿ ಹೇರಾಕಿದನೆಂಬ ನಂಬಿಕೆ ಇದೆ.

ಈ ಕಾವ್ಯದಲ್ಲಿ ಬರುವ "ಕಬ್ಬಿಣ ಭಿಕ್ಷಾ ಎನ್ನುವುದೇ ಒಂದು ಉತ್ಪಾದನ ಚಟುವಟಿಕೆಯನ್ನು ಸಂಕೇತಿಸುತ್ತದೆ. ವಿಜಯನಗರದ ಅರಸರ ಕಾಲದಲ್ಲಿ ಉತ್ತರ ಮತ್ತು ದಕ್ಷಿಣಕ್ಕೆ ವ್ಯಾಪಾರಿ ಮಾರ್ಗಗಳು ಉಂಟಾಗಿದ್ದವು. ಕೃಷ್ಣದೇವರಾಯನ ಸೇನಾ ಕಾರ್ಯಚರಣೆಗಳು, ಧಾರ್ಮಿಕ ಪ್ರವಾಸಗಳು ಈ ಕೆಳಗಿನ ಸಂಚಾರ ಮಾರ್ಗಗಳಿದ್ದುದನ್ನು ಸೂಚಿಸುತ್ತದೆ. ೧. ವಿಜಯನಗರದಿಂದ ಶಿವನಸಮುದ್ರ ಮತ್ತು ಶ್ರೀರಂಗಪಟ್ಟಣ (ಕೆ.ಎಸ್.ಶಿವಣ್ಣ, ಸಂ. ಪುಟ-೨೧೮) ಈ ಮಾರ್ಗವೇ ನಂತರದಲ್ಲಿ ವ್ಯಾಪಾರಿ ಮಾರ್ಗವಾಗಿ ಮಾರ್ಪಟ್ಟವು. ವಿಜಯನಗರದ ಸುತ್ತಲಿನ ಬೆಟ್ಟಗಳಲ್ಲಿ ಕಬ್ಬಿಣದ ಅದಿರುಗಳನ್ನು ಕತ್ತೆಗಳ ಮೂಲಕ ಸಾಗಿಸಿಕೊಂಡು ಬಂದು ದಕ್ಷಿಣದ ಕುಲುಮೆಗಳಲ್ಲಿ ಅವುಗಳನ್ನು ಆಯುಧಗಳು ಮತ್ತು ಗೃಹೋಪಯೋಗಿ ವಸ್ತುಗಳಾಗಿ ತಯಾರು ಮಾಡುತ್ತಿದ್ದರು ಎಂದು ೧೮೯೯ರಲ್ಲಿ ಶ್ರೀರಂಗಪಟ್ಟಣಕ್ಕೆ ಭೇಟಿ ನೀಡಿದ್ದ ಪ್ರಾನ್ಸಿಸ್ ಬುಕ್ಯಾನಿನ್ ತನ್ನ ಪ್ರವಾಸಿ ಕಥನದಲ್ಲಿ ಹೇಳಿಕೊಂಡಿದ್ದಾನೆ ಮತ್ತು ಕುಶಲಕಲೆಗಾರಿಕೆ ಹೆಸರಾಗಿದ್ದ ಈ ಭಾಗದ ಉತ್ಪಾದನೆ ಜಗತ್ತಿನಾದ್ಯಂತ ಬೇಡಿಕೆ ಇತ್ತು ಎಂದು ತಿಳಿಸುತ್ತಾನೆ.

ಶಿವನಸಮುದ್ರ ಮತ್ತು ಶ್ರೀರಂಗಪಟ್ಟಣಗಳಿಗೆ ಹತ್ತಿರವಿದ್ದು ಸಂಪ್ರದಾಯಿಕ ಕುಲುಮೆಗಳಿಂದ ಕಬ್ಬಿಣದಿಂದ ವಸ್ತುಗಳನ್ನು ಉತ್ಪಾದನೆ ಮಾಡುತ್ತಿದ್ದ ಗ್ರಾಮಗಳಲ್ಲಿ ಹಲಗೂರು ಮತ್ತು ಬೆಲ್ಲಾಪುರಗಳು ಮುಖ್ಯವಾದ ಕೇಂದ್ರಗಳಾಗಿವೆ. ಈ ಪ್ರದೇಶವನ್ನು ಹಲಗೂರು ಪಾಳೇಗಾರರು ಆಳುತ್ತಿದ್ದರು. ಇವರು ಪಾಂಚಾಳರಾಗಿದ್ದು, ಕಬ್ಬಿಣ, ತಾಮ್ರ ಮುಂತಾದವುಗಳನ್ನು ಬಳಸಿ ಸಾಂಪ್ರದಾಯಿಕ ಕುಲುಮೆಗಳಿಂದ

ಆಭರಣಗಳು, ಆಯುಧಗಳು ಮತ್ತು ಗೃಹಬಳಕೆಯ ವಸ್ತುಗಳನ್ನು ತಯಾರಿಸುತ್ತಿದ್ದರು. ಇವರು ಶ್ರೀರಂಗಪಟ್ಟಣವನ್ನು ತಮ್ಮ ಮುಖ್ಯ ವ್ಯಾಪಾರ ಕೇಂದ್ರವಾಗಿಸಿಕೊಂಡಿದ್ದರು. ವಿಜಯನಗರ ಪತನವಾದ ಮೇಲೆ ಈ ಪಾಳೇಗಾರರು ಸ್ವತಂತ್ರರಾಗಿ ಕಬ್ಬಿಣ ಉತ್ಪಾದನೆಯಲ್ಲಿ ಗಣನೀಯ ಅಭಿವೃದ್ಧಿಯನ್ನು ಸಾಧಿಸಿದ್ದರು. ಇವು ಸಂಪತ್ತಿನ ಕೇಂದ್ರ (Power center)ಗಳು ಆಗಿದ್ದವು.[೧೯]”

ತನ್ನ ಜನಾಂಗದವರ ಬಳಿಹೋಗಿ ಗುರುಗಳಾದ ಮಂಟೇಸ್ವಾಮಿಯವರು ತಿಳಿಸಿದ ಕಬ್ಬಿಣ ಮತ್ತು ಲೋಹಸಾಧನಗಳನ್ನು ಪಡೆಯಲು ಆಗದೇ ಇದ್ದಾಗ ಗುರುಗಳೇ ಸ್ವಪ್ನದಲ್ಲಿ ಬಂದು ಸಿದ್ಧಾಪ್ಪಾಜಿಗೆ ಮುತ್ತತ್ತಿಗೆ ಹೋಗುವಂತೆ ಅಲ್ಲಿ ಮುತ್ತತ್ತಿರಾಯನನ್ನು ಕಾಣುವಂತೆ ಆದೇಶಿಸಿ ಭಂಗಿ ಫಲಾರವನ್ನು ತಲೆಯ ಬಳಿ ಇಟ್ಟು ಹೋಗುತ್ತಾರೆ. ಭಂಗಿ ಫಲಾರ ಈ ಕಾವ್ಯದಲ್ಲಿ ಬರುವ ಸೇವಿಸುವ ಪದಾರ್ಥವಾಗಿದೆ, ಇದನ್ನು ಬ್ಯಾಟೆಮಣೆ ಎಂತಲೂ ಕಾವ್ಯದಲ್ಲಿ ಪರಿಗಣಿಸಿದ್ದಾರೆ. “ಭಂಗಿಯಸೊಪ್ಪಿನ ಜೊತೆಗೆ ಹೊಗೆಯ ಸೊಪ್ಪನ್ನೂ ಸೇರಿಸಿ ಸೇದುವುದು ವಾಡಿಕೆ. ಮಠದ ಕೆಲವು ಗುರುಗಳು, ಸ್ವಾಮಿಗಳು, ಪವಾಡಪುರುಷರು ಮತ್ತು ಸಮಾಜದ ಪ್ರತಿಷ್ಠಿತ ಜನರು ಎಲ್ಲರೂ ಭಂಗಿಯನ್ನು ಸೇದುತ್ತಿದ್ದುದಕ್ಕೆ ಜನಪದ ಗೀತೆ, ಕತೆಗಳಲ್ಲಿಯೂ ದಾಖಲೆಗಳಿವೆ. ಮಹದೇಶ್ವರ ಭಂಗಿಫಲಾರ ಮಾಡುತ್ತಿದ್ದ ಪ್ರಸಂಗ ಮಾದೇಶ್ವರ ಕಾವ್ಯದಲ್ಲಿ ಬರುತ್ತದೆ. ಭಂಗಿ ಸೇದಿದವರು ಆಧ್ಯಾತ್ಮದ ಅಥವಾ ಸಾಮಾಜಿಕವಾದ ಬೇರೆ ಕಲ್ಪನಾಲೋಕದ ಮಾತುಕತೆಯಲ್ಲಿ ತನ್ಮಯರಾಗುವುದು ವಾಡಿಕೆ.[೨೦]” ಮಹದೇಶ್ವರನ ಕಾವ್ಯದ ಜೊತೆಗೆ ಭಂಗಿಸೇವನೆಗೆ ಉತ್ತಮ ಉದಾಹರಣೆಯೆಂದರೆ ಮಂಟೇಸ್ವಾಮಿ ಕಾವ್ಯಗಳೇ ಆಗಿವೆ.

ಈ ಮಂಟೇಸ್ವಾಮಿ ಕಾವ್ಯಗಳನ್ನು ಮಂಟೇಸ್ವಾಮಿ ಪರಂಪರೆಯ ನೀಲಗಾರರು ಹಾಡುತ್ತಾರೆ. “ಮಂಟೇಸ್ವಾಮಿಯ ಭಕ್ತರಾದ ನೀಲಗಾರರು ಕಂಸಾಳೆಯವರಂತೆಯೇ ಇನ್ನೊಂದು ರೀತಿಯ ವೃತ್ತಿಗಾಯಕರು, ಮೈಸೂರು, ಮಂಡ್ಯ ಮತ್ತು ಬೆಂಗಳೂರು ಜಿಲ್ಲೆಗಳಲ್ಲಿ ನೀಲಗಾರರಿದ್ದಾರೆ. ಇವರನ್ನು ಮಂಟೇದಯ್ಯ, ಮಂಟೇದೇವರು ಎಂದು ಕರೆಯುವುದು ವಾಡಿಕೆ. ಮಳವಳ್ಳಿ ಬೊಪ್ಪಗೌಡನಪುರ ಮತ್ತು ಚಿಕ್ಕಲ್ಲೂರಿನಲ್ಲಿ ಇವರ ಮಠಗಳಿವೆ. ಲೀಲೆಗಾರರು ಎಂಬ ಪದವೇ ನೀಲಗಾರರು ಎಂದಾಗಿದೆ. ಲೀಲೆಗಾರರೆಂದರೆ ಗುರುವಿನ ಲೀಲೆಯನ್ನು ಹಾಡುವವರು ಎಂದರ್ಥ. ನೀಲಗಾರರಲ್ಲಿ ಪ್ರಧಾನವಾಗಿ ಹರಿಜನರೇ ಕಂಡುಬರುತ್ತಾರೆ.

ಉಳಿದಂತೆ ಕುರುಬರು, ಉಪ್ಪಲಿಗಶೆಟ್ಟರು, ಮಡಿವಾಳರು, ಅಕ್ಕಸಾಲಿಗರು, ಪರಿವಾರದವರು, ಕುಂಬಾರರೂ, ನೀಲಗಾರರಾಗಿರುವುದುಂಟು. ಇವರು ತಮ್ಮನ್ನು ಸಿದ್ಧಾಪ್ಪಾಜಿಯ ಗುಡ್ಡಗಳು[೨೧]" ಎಂದು ಕರೆದುಕೊಳ್ಳುತ್ತಾರೆ. ತಂಬೂರಿ ನೀಲಗಾರರು ದೇವರ ಕತೆಗಳನ್ನು ಹಾಡುತ್ತಾ ಧಾರ್ಮಿಕ ವಿಧಿಗಳಲ್ಲಿ ಭಾಗವಹಿಸುತ್ತಾರೆ. ಇವರಿಗೆ ದೀಕ್ಷೆಯಾದಾಗ ಮೂರು ರುದ್ರಾಕ್ಷಿಮಣಿಗಳನ್ನು ಕಟ್ಟಲಾಗುತ್ತದೆ. ಊರಾಡಲು ಹೋದಾಗ ಮೂವತ್ತೊಂದು ಮಣಿಗಳ ರುದ್ರಾಕ್ಷಿಯನ್ನು ಧರಿಸುತ್ತಾರೆ. ತಲೆಗೆ ಕೆಂಪು ರುಮಾಲು, ಕರಿಯ ನಿಲುವಂಗಿ, ಕಚ್ಚೆಪಂಚೆಗಳು, ಜೋಳಿಗೆ, ಕೈಯಲ್ಲಿ ಕೋಲು ಇವರ ಉಡುಗೆ-ತೊಡುಗೆಗಳಾದರೆ ತಂಬೂರಿ ಇವರ ವಾದ್ಯ ವಿಶೇಷ. ಇದರೊಂದಿಗೆ ತಾಳ, ಗಗ್ಗರ, ಢಕ್ಕೆಗಳು ಇರುವುದುಂಟು. ಸಾಮಾನ್ಯವಾಗಿ ಮೂವರು ಇಲ್ಲವೇ ಗುಂಪಾಗಿ ಇವರು ಸಂಚಾರ ಹೊರಡುತ್ತಾರೆ. ನೀಲಗಾರರಿಗೆ ತಂಬೂರಿ ಅವಶ್ಯಕವಾದುದು. ದಾಸ ಪರಂಪರೆಯನ್ನು ನೆನಪಿಸುವ ಈ ತಂಬೂರಿ ತಮಗೆ ದೊರೆತದ್ದರ ಕುರಿತು ಅವರು ಹೇಳುವ ಕತೆ ಹೀಗಿದೆ :- ಇದು ಮತ್ತತ್ತಿರಾಯ ದೇವರು ನೀಲಗಾರ ಪರಂಪರೆಯ ಮೂಲಪುರುಷನಾದ ಸಿದ್ಧಾಪ್ಪಾಜಿಗೆ ಕೊಟ್ಟ ಕೊಡುಗೆ. ಮುತ್ತತ್ತಿರಾಯನಂದರೆ ಹನುಮಂತ. ಸಿದ್ಧಾಪ್ಪಾಜಿಯು ಹಲಗೂರಿನ ಪಾಂಚಾಳರಲ್ಲಿಗೆ ತಮಗೆ ಬೇಕಾದ ಸಲಕರಣೆಗಳನ್ನು ತರಲು ಹೋಗಿದ್ದನು. ಶ್ರೀಮಂತರಾದ ಪಾಂಚಾಳರು ಸಿದ್ಧಾಪ್ಪಾಜಿಯನ್ನು ತುಂಬ ತಾತ್ಸಾರದಿಂದ ಕಂಡರು. ಆಗ ಈತನು ಹತ್ತಿರದ ಮುತ್ತತ್ತಿರಾಯನ ಕ್ಷೇತ್ರಕ್ಕೆ ಹೋಗಿ ಅವನ ನೆರವನ್ನು ಪಡೆದನು. ಈ ನೆನಪಿಗಾಗಿ ಮುತ್ತತ್ತಿರಾಯನು ಅವನಿಗೆ ತಂಬೂರಿಯನ್ನು ನೀಡಿದನು. ಈ ತಂಬೂರಿ ನುಡಿಸುತ್ತ ಗುರು ಮಹಿಮೆಯನ್ನು ಸಿದ್ಧಾಪ್ಪಾಜಿಯು ಸಾರತೊಡಗಿದನು. ಅವನ ಪರಂಪರೆಯವರಾದ ನೀಲಗಾರರು ಅದನ್ನು ಮುಂದುವರಿಸಿದರು.

ನೀಲಗಾರರ ತಂಬೂರಿ ವಿಶಿಷ್ಟವಾದುದು. ತಂಬೂರಿಯು ಸುಮಾರು ಎರಡು ಮೊಳ ಉದ್ದವಿರುತ್ತದೆ. ಇದನ್ನು ಹಲಸಿನ ಮರದಿಂದ ತಯಾರು ಮಾಡಿರುತ್ತಾರೆ. ಇದರ ಮೇಲು ತುದಿಯಲ್ಲಿ ನಾಗರಹೆಡೆ ಇಲ್ಲವೇ ಸಿಂಹದಮುಖವನ್ನು ಬಿಡಿಸಿರುತ್ತಾರೆ. ನೀಲಗಾರರು ತಾವು ಪಡೆದ ಪದಕ ಮತ್ತಿತರ ತಗಡಿನ ಸಾಧನಗಳನ್ನು ಅದರಲ್ಲಿ ನೇತುಹಾಕಿರುತ್ತಾರೆ. ಇವರು ಕಲಾಪ್ರದರ್ಶನದ ಸಂದರ್ಭದಲ್ಲಿ ಗಗ್ಗರ ಮತ್ತು ಢಕ್ಕೆಗಳನ್ನು ನುಡಿಸುತ್ತಾರೆ. ಒಬ್ಬನೇ ನೀಲಗಾರ ಹಾಡುವಾಗ ಚಕ್ರಾಕಾರದ ಗಗ್ಗರಗಳನ್ನು ಎಡಗೈ ಹೆಬ್ಬೆರಳಿಗೆ ಸಿಕ್ಕಿಸಿಕೊಂಡು ತಂಬೂರಿಯ ಮೇಲೆ ಬಡಿಯುತ್ತಾನೆ.

ಬಲಗೈಯಲ್ಲಿ ತಂತಿಯನ್ನು ಮೀಟುತ್ತಾನೆ. ಮೂವರು ನೀಲಗಾರರು ಹಾಡುವಾಗ ಮುಖ್ಯ ಗಾಯಕ ತಂಬೂರಿ ಗಗ್ಗರಗಳನ್ನು ಹಿಡಿದು ಕುಳಿತಿರುತ್ತಾನೆ. ಅವನ ಅಕ್ಕಪಕ್ಕದಲ್ಲಿ ಶಿಷ್ಯರು ಕುಳಿತು ಅವರಲ್ಲೊಬ್ಬ ಢಕ್ಕೆಯನ್ನು ಬಡಿಯುತ್ತಾನೆ. ಮತ್ತೊಬ್ಬ ತಾಳ ನುಡಿಸುತ್ತಾನೆ. ಮುಖ್ಯಗಾಯಕನ ಮುಮ್ಮೇಳಕ್ಕೆ ಇವರು ಹಿಮ್ಮೇಳ ಕೊಡುತ್ತಾರೆ. "ತಲೆಗೆ ಕೆಂಪುಪೇಟ, ಹಾರುಗಚ್ಚೆ, ಕಾವಿಯ ನಿಲುವಂಗಿ, ಹೆಗಲ ಮೇಲೆ ಕಾವಿಬಣ್ಣದ್ದೇ ಆದ ಶಾಲು, ಕೊರಳಲ್ಲಿ ರುದ್ರಾಕ್ಷಿಮಾಲೆ, ಹಣೆಯಲ್ಲಿ ವಿಭೂತಿ ಮತ್ತು ಕುಂಕುಮ, ಕಾಲಿಗೆ ತೋಡ, ಬಾರಿಯ, ಕಿವಿಗೆ ಕರ್ಣಕುಂಡಲ ಇವು ನೀಲಗಾರರ ಸಾಮಾನ್ಯ ವೇಷಭೂಷಣಗಳು.[೨೨]"

ಇವರು ಅನ್ಯಕಾವ್ಯಗಳನ್ನು ಹಾಡುವವರಾದರು ಮಂಟೇಸ್ವಾಮಿ ಕಾವ್ಯ ಮುಖ್ಯವಾದದ್ದು ಈ ಕಾವ್ಯವು ನಾಲ್ಕು 'ಸಾಲು'ಗಳಾಗಿ ವಿಭಾಗಿಸಲ್ಪಟ್ಟಿದೆ. ೧) ಧರೆಗೆ ದೊಡ್ಡವರ ಸಾಲು, ೨) ಸಿದ್ಧಾಪ್ಪಾಜಿ ಸಾಲು, ೩) ರಾಚಪ್ಪಾಜಿ ಸಾಲು, ೪) ಚಿಕ್ಕಲ್ಲೂರು ಸಾಲು. ಈ ಚಿಕ್ಕಲ್ಲೂರು ಸಾಲಿನಲ್ಲಿಯೇ ಮುತ್ತತ್ತಿರಾಯ ಮತ್ತು ಸಿದ್ಧಾಪ್ಪಾಜಿಯ ಭೇಟಿ ನಡೆಯುವುದು. ಗುರುವಿನಿಂದ ಮುತ್ತತ್ತಿಗೋಗಿ ಮುತ್ತತ್ತಿರಾಯನನ್ನು ಕಾಣುವಂತೆ ಧೈರ್ಯ ಪಡೆದ ಸಿದ್ಧಾಪ್ಪಾಜಿ ಮುಂಜಾವಿನ ವೇಳೆಯಲ್ಲಿ ಮುತ್ತತ್ತಿಗೆ ಬಂದು ಮುತ್ತತ್ತಿರಾಯ ಇರುವ ಕಡೆ ಬರುತ್ತಾರೆ. ಅಲ್ಲಿ ನದಿಯಲ್ಲಿ ಸ್ನಾನಮಾಡಿ ಬಸವಣ್ಣನವರ ಹೆಸರು ಹೇಳಿ ಭಸ್ಮಾಂಗ ಧರಿಸುತ್ತಾರೆ. ರಾಚರಾಯರ ಹೆಸರನ್ನು ಹೇಳಿ ಮಟ್ಟಿಕಪ್ಪನ್ನು ಧರಿಸುತ್ತಾರೆ. ತಮ್ಮ ಬಳಿ ಇದ್ದ ಫಲಾರವನ್ನು ಪೂಜಿಸಿ ಮೂರು ಎಡೆ ಮಡುಗುತ್ತಾರೆ. ಶಿವಪೂಜೆ ಮಾಡಿ ಬ್ಯಾಟರಾಯನಿಗೆ ಮತ್ತು ಮುತ್ತತ್ತಿರಾಯನಿಗೆ ಎಡೆಯನ್ನು ಕಟ್ಟಿಕೊಂಡು ಮುತ್ತತ್ತಿರಾಯನ ಗುಡಿ ಬಾಗಿಲಿಗೆ ಬರುತ್ತಾರೆ ಕರೆದರೂ ಬರದಿರುವ ಮುತ್ತತ್ತಿರಾಯನ ಕಂಡು ಕೋಪ ಮಾಡಿಕೊಳ್ಳುತ್ತಾರೆ. ಕೋಪದಿಂದ ಒಂದು ಕುಟ್ಟು ಕುಟ್ಟಿದರೆ ಪಟ್ಟೆನಾಮ ಬೆವರಬೇಕು, ಕಕ್ಕೆಸೊಪ್ಪು ಹಾರಡಬೇಕು ಎಂದಾಗ ಮುತ್ತತ್ತಿರಾಯ ಮಣಿದು ಬಂದು ಎಲ್ಲಿಂದ ಬಂದಿರಿ ಎಂದಾಗ ನಿನಗೆ ಮುತ್ತತ್ತಿರಾಯ ಅಂತ ನಾಮಕರಣ ಕರೆದವರಾರು ಎಂದಾಗ ಮುತ್ತತ್ತಿರಾಯನು ಪ್ರಚಲಿತವಿರುವ ಐತಿಹ್ಯವನ್ನು ಹೇಳುತ್ತಾನೆ. ನೀನು ಬಂದ ತರವ ಹೇಳೆಂದು ಸಿದ್ಧಾಪ್ಪಾಜಿಗೆ ಕೇಳಿದಾಗ ಹಲಗೂರಿನಲ್ಲಿ ಕಾದಗಟ್ಟಿ ಗೆಲ್ಲಬೇಕು ಬರುವಂತೆ ಕರೆಯುತ್ತಾನೆ. ಗೆದ್ದಮೇಲೆ ಸಮಪಾಲು ಕೇಳುತ್ತಾನೆ ಎಂದು ಮುತ್ತತ್ತಿರಾಯನಿಗೆ ಮನ್ನಣೆ ಮಾತು ಹೇಳುತ್ತಾನೆ. ಚಿಕ್ಕಲ್ಲೂರಿನಲ್ಲಿ ನಾನು ಇರುತ್ತೀನಿ, ಮುತ್ತತ್ತಿಯಲ್ಲಿ ನೀನು ಇರು, ನಾನಿಲ್ಲಿಗೆ ಬಂದುದಕ್ಕೆ ಗುರುತೇನು ಅಂದ್ರೆ ನಿನ್ನ ನಾಮದ ಭಕ್ತರಿಗೆ ಗೋಕುಲಾಷ್ಟಮಿ ಜಾತ್ರೆ ಆಗುವಾಗ ಕಡೇದಿನ ಸಿದ್ಧಾಪ್ಪಾಜಿ ಸ್ಯಾವೆಯ ನೀ ಮಾಡಿಸ್ಕೊ, ಚಿಕ್ಕಲ್ಲೂರಿನಲ್ಲಿ ಜಾತ್ರೆ

ಆಗುವಾಗ ನಾನು ಕಡೆಬಾಗಿಲ ಸೇವೆ ಮಣೆಸೇವೆ ಮಾಡಿಸುವೆ. ನಾನು ಭಾವ ನೀನು ಭಾವಮೈದ ಎಂದು ಹೇಳುತ್ತಾ ಭಂಗಿಫಲಾರ ಮಾಡುತ್ತಾನೆ. ಇದು ಡಾ.ಜೀ.ಶಂ.ಪರಮಶಿವಯ್ಯನವರು ಸಂಪಾದಿಸಿರುವ ಶ್ರೀಮಂಟೇಸ್ವಾಮಿ ಕಾವ್ಯದಲ್ಲಿ ಬರುವ ವಿಷಯಗಳಾಗಿದೆ.

ಸಿದ್ಧಾಪ್ಪಾಜಿಯು ಹುಲಿಯ ಮೇಲೆ ಕುಳಿತುಕೊಂಡು ಜಿಂಕೆ ಚರ್ಮ ಹೊದ್ದುಕೊಂಡು ಬರುವಾಗ ಮೂಡಲ ಮುತ್ತತ್ತಿರಾಯ ಹೊಂಗೆಯ ಹಳ್ಳದಲ್ಲಿ ಶಂಕುಬೋನಾಸಿ ಹೊತ್ಕಂಡು ಹೊಂಗೆಯ ಹಳ್ಳದಲ್ಲಿ ನಾಮಸೇವೆ ಮಾಡುತ್ತಿರುತ್ತಾನೆ. ಸಿದ್ಧಾಪ್ಪಾಜಿಯನ್ನು ಕಂಡು ಹೆದರಿ ಓಡುತ್ತಿರುತ್ತಾನೆ. ಹಲಗೂರಿಗೆ ಹೋಗುವಾಗ ಕುರುಬರ ದೊಡ್ಡಿಯ ಮಂಡಲದ ಮಾರಿಯನ್ನು ಕಾಣಬೇಕಾಗುತ್ತದೆಂದು ಪೂಜೆ ನಂತರ ಸಿದ್ಧಾಪ್ಪಾಜಿ ಮುತ್ತತ್ತಿರಾಯ ಭಂಗಿಫಲಾರ ಮಾಡುತ್ತಾರೆ. ನಂತರ ಚಿಕ್ಕಲ್ಲೂರು ಜಾತ್ರೆಯ ಕೊನೆಯ ದಿನದ ಸೇವೆ ನಿನಗಾಗಲಿ ಎಂದು ಹೇಳುತ್ತಾನೆ. ಇವು ಇಂದ್ವಾಡಿ ವೆಂಕಟೇಶ್ ರವರು ಸಂಪಾದಿಸಿರುವ ಧರೆಗೆ ದೊಡ್ಡವರ ಕೃತಿಯಲ್ಲಿ ಬರುವ ಪ್ರಸಂಗ.

ಹಲಗೂರಿನಲ್ಲಿ ಹತ್ತಿ ಉರಿಯುವ ಬೆಂಕಿ ನೋಡುವಾಗ ತಿರುಗಿದಾಗ ಮೂರ್ನಾಮದ ದಾಸಯ್ಯನಾದ ಮುತ್ತತ್ತಿರಾಯ ಕಕ್ಕೆ ಮರದ ಕೆಳಗೆ ಇರುತ್ತಾನೆ. ಸಿದ್ಧಾಪ್ಪಾಜಿಯನ್ನು ನೋಡಿ ಹಲಗೂರಿನ ದೊರೆಗಳು ಎಂದು ಹೆದರಿ ಬಚ್ಚಿಟ್ಟುಕೊಳ್ಳುತ್ತಾನೆ. ನೀವು ಹಲಗೂರಿನವರಾ ಎಂದು ಕೇಳಿದಾಗ ನಾನು ಧರೆಗೆ ದೊಡ್ಡವರ ಮಗ ಸಿದ್ಧಾಪ್ಪಾಜಿ ಎಂದು ಹೇಳಿತ್ತಾರೆ. ಮುತ್ತತ್ತಿರಾಯ ಹಲಗೂರು ಪಾಂಚಾಳ ದೊರೆಗಳಿಂದ ಆದ ತೊಂದರೆಯನ್ನು ವಿವರಿಸುತ್ತಾರೆ. ಸಿದ್ಧಾಪ್ಪಾಜಿಯು ಆಗ ನಮ್ಮ ಗುರುಗಳು ನೀಡಿರುವ ಭಂಗಿಫಲಾರ ಸೇವಿಸಿ ಹೋಗುವ ಹೆಚ್ಚಿನ ಶಕ್ತಿ ಬರುತ್ತದೆ ಎಂದು ಹೇಳಿ ಸಿದ್ಧಮಾಡಿ ಮುತ್ತತ್ತಿರಾಯನಿಗೆ . ನೀಡುತ್ತಾರೆ. ಇದು ಡಾ.ಹಿ.ಚಿ.ಬೋರಲಿಂಗಯ್ಯನವರು ಸಂಪಾದಿಸಿರುವ ಮಂಟೇಸ್ವಾಮಿ ಕಾವ್ಯದಿಂದ ತಿಳಿದು ಬರುವ ವಿಷಯ ಈ ಮೂರು ಕಾವ್ಯಗಳಲ್ಲೂ ಮುತ್ತತ್ತಿರಾಯನನ್ನು ದಾಸಪ್ಪನೆಂತಲೂ ಅವನು ಸಿದ್ಧಾಪ್ಪಾಜಿ ಮಾರಿ ಮತ್ತು ಹಲಗೂರಿನ ಪಾಂಚಾಳರಿಗೆ ಹೆದರಿದವನಂತೆ ಚಿತ್ರಿಸಲಾಗಿದೆ. ಓರ್ವ ದಾಸಪ್ಪನಂತೆ ಅವನನ್ನು ಬಣ್ಣಿಸಲಾಗಿದೆ. ಕಕ್ಕೆಮರ, ಹೊಂಗೆಹಳ್ಳದ ವಿಷಯಗಳನ್ನು ನಾಮದ ಮಹತ್ವವನ್ನು ಹೇಳಿದ್ದಾರೆ. ಪವಾಡಕ್ಕೆ ಮುತ್ತತ್ತಿರಾಯನನ್ನು ಕರೆದುಕೊಂಡು ಹೋಗುವುದಿಲ್ಲ ಬದಲಿಗೆ ಭಾವಭಾಮೈದ ಸಂಬಂಧ ಬೆಳೆಸಿಕೊಳ್ಳುತ್ತಾರೆ.

ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲ್ಲೂಕಿನ ಚಿಕ್ಕಲ್ಲೂರುವಿನಲ್ಲಿರುವ ಸಿದ್ಧಾಪ್ಪಾಜಿ ದೇವಾಲಯದಲ್ಲಿ ಜನವರಿ ತಿಂಗಳಲ್ಲಿ ನಡೆಯುವ ಐದುದಿನಗಳ ಜಾತ್ರೆಯಲ್ಲಿ ಮುತ್ರಾಯನ ಸೇವೆಯನ್ನು ಮಾಡುತ್ತಾರೆ. ಆದಿನ ಕುರಿ, ಮೇಕೆ, ಕೋಳಿ ಬಲಿ ಕೊಡುವುರಾದರೂ, ವೈಷ್ಣವದೇವರಾದ ಮುತ್ತತ್ತಿರಾಯನಿಗಲ್ಲ. ಮಾರಿ ಕ್ರೂರದೇವತೆಗೆ ಮಾತ್ರ. ಮುತ್ತತ್ತಿರಾಯನಿಗೆ ಮಣೆವು ಸೇವೆ, ಕಜ್ಜಾಯಸೇವೆ. ಆದುದರಿಂದಲೇ ಅಲ್ಲಿ ನಿರ್ಮಿಸಿರುವ ಮುತ್ತತ್ತಿರಾಯನ ದೇವಾಲಯದ ಮೂರ್ತಿಗೆ ಕಜ್ಜಾಯದ ಹಾರವನ್ನು ಹಾಕುತ್ತಾರೆ. ಮಂಟೇಸ್ವಾಮಿ ಕಾವ್ಯದಲ್ಲಿ ಸಿದ್ಧಾಪ್ಪಾಜಿಗೆ ಪ್ರಾಶಸ್ತ್ಯವನ್ನು ಹೆಚ್ಚಿಗೆ ನೀಡಿದ್ದರೂ, ವೈಷ್ಣವ ಸಂಪ್ರದಾಯದ ಮುತ್ತತ್ತಿರಾಯನನ್ನು ಕಡೆಗಣಿಸಿಲ್ಲ.

ನೀಲಗಾರರೆಲ್ಲ ಅಂದು ಮಟ್ಟಿಕಪ್ಪು ಧರಿಸದೆ ಮುತ್ತತ್ತಿರಾಯನ ನಾಮಗಳನ್ನು ಧರಿಸುತ್ತಾರೆ. ಈ ಸೇವೆಯನ್ನು ಮಾಡುತ್ತಾರೆ. ಹಾಗೆಯೇ ಮುತ್ತತ್ತಿಯಲ್ಲಿಯೂ ಜಾತ್ರೆಯ ಅಂತ್ಯದಲ್ಲಿ ಸಿದ್ಧಾಪ್ಪಾಜಿ ಸೇವೆ ಎಂದು ಪೂಜೆಯನ್ನು ಮಾಡುತ್ತಾರೆ.

## ೨.೩ ಜನಪದ ಗೀತೆಗಳು

"ಜನವಾಣಿ ಬೇರು ಕವಿವಾಣಿ ಹೂವು" ಎಂಬ ಬಿ.ಎಂ.ಶ್ರೀಯವರ ನುಡಿಯಂತೆ, ಜನಪದ ಜನತೆಯ ನುಡಿಗಳು, ವಾಣಿಗಳು, ಪದಗಳು ಆದ ಗೀತೆಗಳು ಜನಪದ ಗೀತೆಗಳು. ಇವುಗಳ ಶಾಸ್ತ್ರೀಯ ಅಧ್ಯಯನ ಇತ್ತೀಚಿಗೆ ಆರಂಭವಾದದು. ಕರ್ನಾಟಕದ "ಜನಪದ ಗೀತೆಗಳಿಗೆ ಕ್ರಿ.ಶ.ಸುಮಾರು ಎರಡನೇ ಶತಮಾನದ ನಂಟು ಇದೆ. ದ್ರಾವಿಡ ಭಾಷೆಗಳಲ್ಲೊಂದಾದ ತಮಿಳಿನ ಶಿಲಪ್ಪಾದಿಗಾರಂನಲ್ಲಿನ ಕನ್ನಡಿಗರ ಹೆಣ್ಣುಮಕ್ಕಳು ತಮ್ಮ ಕುಣಿತಗಳಿಗೆ ಬಳಸುತ್ತಿದ್ದ ಗೀತೆಗಳು ಕನ್ನಡದ ಜನಪದ ಗೀತೆಗಳೇ ಆಗಿವೆ.[೨೩]" ಈ ನಿಟ್ಟಿನಲ್ಲಿ ಹೇಳುವುದಾದರೆ ಭಾರತದ ಸನಾತನ ಸಂಸ್ಕೃತಿಯ ವಾಕ್ ಪರಂಪರೆಗಳಲ್ಲಿ ಬೆಳೆದು ಬಂದಂತಹ ವೇದ ಉಪನಿಷತ್ತುಗಳು, ರಾಮಾಯಣ, ಮಹಾಭಾರತಗಳು ಜನಪದ ಗಾಯನದ ಮೂಲಕವೇ ಹೊರಬಂದವುಗಳಾಗಿವೆ. ಕ್ರಿ.ಶ.ಸುಮಾರು ೯ನೇ ಶತಮಾನದಷ್ಟೊತ್ತಿಗಾಗಲೇ ಕನ್ನಡ ಜನಪದ ಗೀತೆಗಳು ಓವನಿಗೆ, ಒನಕೆವಾಡುಗಳ ರೂಪದಲ್ಲಿ ಪ್ರಬುದ್ಧತೆಯನ್ನು ಕಂಡು ಗ್ರಂಥಸ್ಥ ಕಾವ್ಯವಾದ ಕವಿರಾಜಮಾರ್ಗದಲ್ಲಿ ಉಲ್ಲೇಖಿತವಾಗಬೇಕಾದರೆ ಜನಪದ ಗೀತೆಗಳು ಹೇಗೆ ಜನಮಾನಸದಲ್ಲಿ ಬೇರುಬಿಟ್ಟು ಜೀವನದ ಒಂದು ಅಂಗವಾಗಿದ್ದವು ಎಂಬುದನ್ನು ಮನಗಾಣಬಹುದು. ಆಗಲೇ ಶಾಸನಗಳಲ್ಲಿಯೂ ಕಾಣಿಸಿಕೊಂಡು ಲಿಖಿತ ಸ್ವರೂಪಕ್ಕೆ ಬರಲಾರಂಭಿಸಿದವು.

ದೇಶಿಯ ಬೆಡಗನ್ನು ಹೊತ್ತ ಕನ್ನಡ ರತ್ನತ್ರಯರಾದ ಪಂಪ, ರನ್ನ, ಪೊನ್ನರು ಸಹ ಜನಪದ ಗೀತೆಗಳ ಸೊಗಡಿನಿಂದ ಹೊರಗುಳಿಯಲು ಸಾಧ್ಯವಾಗಲಿಲ್ಲ. ಜನ್ನನು ತನ್ನ ಯಶೋಧರಚರಿತೆಯಲ್ಲಿ ಮಾರಿಯವರ್ಣನೆ ಮಾಡಿರುವುದರಿಂದ ಜನಸಾಮಾನ್ಯರ ಗೀತೆಗಳ ಪರಿಚಯ ಅವನಿಗೆ ಚೆನ್ನಾಗಿಯೇ ಇದ್ದಿರಬೇಕು. ವಚನಕಾರರು, ದಾಸವರೇಣ್ಯರು, ಸಂಗೀತಗಾರರು ಜನಪದಗೀತೆಗಳನ್ನು ಸವಿದು ಉಂಡವರೇ ಆಗಿದ್ದಾರೆ ಎಂಬುದನ್ನು ಅವರ ಕೃತಿಗಳಿಂದ ಗುರುತಿಸಬಹುದಾಗಿದೆ. ಆಧುನಿಕ ಕನ್ನಡ ಕವಿಗಳು ಇದಕ್ಕೆ ಹೊರತಾಗಿಲ್ಲ. ಗ್ರಾಮೀಣ ಜನಜೀವನದ ಹಿನ್ನೆಲೆಯಿಂದ ಬಂದ ಈ ಕವಿಗಳು ಬಹುತ್ತೇಕವಾಗಿ ಜನಪದ ಗೀತೆಗಳ ಸೊಗಡಿನಿಂದಲೇ ಕಾವ್ಯಗಳನ್ನು ರಚಿಸುತ್ತಿದ್ದಾರೆ.

“ಭಾರತೀಯ ಶಾಸ್ತ್ರೀಯ ಸಂಗೀತಕ್ಕೆ ತಾಯಿಬೇರು ಆಗಿರುವ ಜನಪದ ಗೀತೆಗಳು ಪ್ರಾಗೈತಿಹಾಸಿಕ ಮಾನವರ ಕಾಲಗಳಿಂದಲೂ ಬೆಳೆದು ಬಂದಿರುವವಾದರೂ ಎಷ್ಟೋ ಗೀತೆಗಳು ಅಳಿದು ಹೋಗಿವೆ. ಪರಿವರ್ತನೆಯ ರೂಪದಲ್ಲಿ ನಿರ್ದಿಷ್ಟಮಾಪನಗಳಿಗೆ ಒಳಗಾದ ಗೀತವು ಸಂಗೀತ ಅಥವಾ ಶಾಸ್ತ್ರೀಯ ಸಂಗೀತವೆಂಬ ಹಣೆಪಟ್ಟಿಗೆ ಒಳಗಾಗಿದೆ. ೬೪ ಕಲೆಗಳಲ್ಲಿ ಒಂದಾಗಿ ಮೆರೆದಿದೆ.[೨೪]”

“ಭಾರತವನ್ನು ಸಂಗೀತದ ನಾಡೆಂದು ಕರೆಯುವುದುಂಟು, ಕಾರಣ ಸಂಗೀತವು ನಮ್ಮ ರಾಷ್ಟ್ರ ಜೀವನದ ಮುಖ್ಯ ಭಾಗವಾಗಿದೆ.[೨೫]” ವೈಷ್ಣವಧರ್ಮ ಕರ್ನಾಟಕದಲ್ಲಿ ಪಸರಿಸಿದ ಮೇಲೆ ರಾಮಾಯಣದ ಆಂಜನೇಯನ ಆರಾಧನೆ ಮತ್ತು ಪ್ರಚುರಗೊಂಡಿತು. ಮಧ್ವಾಚಾರ್ಯ, ವ್ಯಾಸರಾಯರ ಭಕ್ತಿಕಾರ್ಯಗಳಿಂದ ನಾಡಿನ ಮೂಲೆ ಮೂಲೆಗಳಲ್ಲೂ ಆಂಜನೇಯ ಅಥವಾ ಹನುಮಂತನ ಮಹಿಮೆ ಪಸರಿಸಿತು. ಅವನಿಗಾಗಿ ಹಲವಾರು ಗುಡಿಗಳು ನಿರ್ಮಾಣವಾದವು. ಕಥೆ, ಗೀತೆ ಐತಿಹ್ಯ, ಸ್ಥಳಪುರಾಣ, ಜನನಿರುಕ್ತಿ, ಗಾದೆ, ಯಕ್ಷಗಾನ, ನಾಟಕ, ಕಲೆಗಳು ವಿಎ ಮುಂತಾದ ಜನಪದ ಪ್ರಕಾರಗಳಲ್ಲಿ ಅವನ ಮಹಿಮೆಗಳು ಮೆರೆದಾಡತೊಡಗಿದವು. ಇಂತಹ ವೇಳೆಯಲ್ಲಿ ಉಗಮವಾದದ್ದು ಮುತ್ತತ್ತಿಯಲ್ಲಿನ ಆಂಜನೇಯನಗುಡಿ. ಮುತ್ತತ್ತಿಯಲ್ಲಿ ನೆಲೆಸಿರುವವನು ಮುತ್ತತ್ತಿರಾಯ, ಮುತ್ತುರಾಯ. ಇವನಿಗಾಗಿ ಅಪಾರಸಂಖ್ಯೆಯ ಗೀತೆಗಳು ಕಟ್ಟಿದವು. ಇವುಗಳು ಇಂದಿಗೂ ಅಪ್ರಕಟಿತವಾಗಿಯೇ ಉಳಿದಿವೆ, ಅಳಿಯುತ್ತಾ ಬಂದಿವೆ. ಇವುಗಳನ್ನು ಕನಕಪುರ ತಾಲ್ಲೂಕಿನ ನಾಯಕನಹಳ್ಳಿ, ಅಲಸೂರು, ಮಳವಳ್ಳಿ ತಾಲ್ಲೂಕಿನ ಬಾಳೆಹೊನ್ನಿಗ ಮತ್ತು ದಳವಾಯಿಕೊಡಿಹಳ್ಳಿಗಳಲ್ಲಿ ಸಂಗ್ರಹಿಸಿ ದಾಖಲಿಸಿ, ಈ ಮೂಲಕ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಈ ಗೀತೆಗಳು ಮಂಡ್ಯ, ರಾಮನಗರ, ಚಾಮರಾಜನಗರ, ಮೈಸೂರು ಜಿಲ್ಲೆಗಳ ಜನಪದ ಜನತೆಯ ಧಾರ್ಮಿಕ, ಸಾಮಾಜಿಕ, ಬದುಕಿನ ಪ್ರಭಾವದಿಂದ ಪ್ರಚಲಿತವಾಗಿ ಬಂದವುಗಳಾಗಿವೆ. ಈ ಜನಪದ ಗೀತೆಗಳು ದೇವರಪದ ಅಥವಾ ದೇವರಗೀತೆಗಳಾಗಿದ್ದು ಪ್ರೊ.ಡಿ.ಲಿಂಗಯ್ಯನವರು ಹೇಳಿರುವ ಹಾಗೆ “ಜನಪದ ಗೀತೆಗಳಲ್ಲಿ ಬರುವ ದೇವ ಮಾನವ ಸಂಬಂಧ ಭಯದಿಂದ ಕೂಡಿದ್ದಲ್ಲ ಭಕ್ತಿಯಿಂದ ಕೂಡಿದ್ದು, ಜನಪದ ಕವಿಗಳಿಗೆ ದೇವರು ತುಂಬಾ ಆತ್ಮೀಯ ವ್ಯಕ್ತಿ ಮನುಷ್ಯನ ಮತ್ತೊಂದು ರೂಪವೇ ದೇವರೆಂದರೂ ತಪ್ಪಲ್ಲ.

ಜನಪದ ಕವಿಗಳು ಕಂಡರಿಸಿರುವ ದೇವರಿಗೆ ಮನುಷ್ಯನಿಗಿರುವಂತೆಯೇ ಸಂಸಾರಕಷ್ಟ ಸುಖ, ರೋಗರುಜಿನಗಳೆಲ್ಲ ಇವೆ. ಮಂಡ್ಯ ಜಿಲ್ಲೆ ಭಗವದ್ಭಕ್ತರ ನೆಲೆ; ಹಲವು ದೇವರುಗಳ ವಾಸಸ್ಥಾನ ಮೇಲುಕೋಟೆಯ ಚೆಲುವರಾಯಸ್ವಾಮಿ, ಆದಿಚುಂಚನಗಿರಿಯ ಭೈರವಸ್ವಾಮಿ, ನಂಜನಗೂಡಿನ ನಂಜುಂಡೇಶ್ವರ, ಮಲೆಮಾದೇಶ್ವರ, ಆಲೆರೆಯ ವೀರಭದ್ರ, ಕೊತ್ತತ್ತಿಯ ಬ್ಯಾಲಕಮ್ಮ, ಪಿಳಹಳ್ಳಿಯ ಬೋರಪ್ಪ, ಅರಕೆರೆಯ ಬಿಸಿಲುಮಾರಮ್ಮ, ಮದ್ದೂರಿನ ಮದ್ದೂರಮ್ಮ ಮುಂತಾದ ದೇವತೆಗಳ ಭಕ್ತರು ಈ ಜಿಲ್ಲೆಯಲ್ಲಿದ್ದು ಈ ದೇವತೆಗಳ ಹಬ್ಬಗಳು ಅದ್ದೂರಿಯಾಗಿ ನಡೆಯುತ್ತಿದೆ. ಹಬ್ಬಗಳ ಸಮಯಗಳಲ್ಲಿ ದೇವರುಗಳನ್ನು ಕುರಿತ ಜನಪದ ಗೀತೆಗಳು ಹುಟ್ಟುತ್ತವೆ. ಈ ಗೀತೆಗಳಲ್ಲಿ ಸಾಹಿತ್ಯ ಮೌಲ್ಯ, ವೈವಿಧ್ಯತೆ ಕಡಿಮೆಯಿದ್ದರೂ ದೇವರ ವರ್ಣನೆ ಭಕ್ತಿಯ ಅತಿಶಯತೆ ಪ್ರಾದೇಶಿಕ ವೈಶಿಷ್ಟ್ಯ ದೇವರ ಸಾಂಸಾರಿಕ ಜೀವನದ ರಂಜಕತೆಗಳ ದೃಷ್ಟಿಗಳಿಂದ ಇವು ಗಮನೀಯವಾಗಿವೆ[೨೬]"

ಪ್ರೊ.ಡಿ.ಲಿಂಗಯ್ಯನವರು ಮುತ್ತತ್ತಿಯ ಮುತ್ತತ್ತಿರಾಯನನ್ನು ಉಲ್ಲೇಖಿಸಿಲ್ಲವಾದರೂ, ಈಗ ಸಂಗ್ರಹಿತವಾಗಿರುವ ಮುತ್ತತ್ತಿರಾಯನ ಜನಪದ ಗೀತೆಗಳಲ್ಲಿ ಮೇಲಿನ ಎಲ್ಲಾ ಚಿತ್ರಣಗಳನ್ನು ಕಾಣಬಹುದಾಗಿದೆ. ಈ ಗೀತೆಗಳ ವಿಶೇಷತೆ ಎಂದರೆ ಇವುಗಳನ್ನು ಹೆಂಗಸರು ಮಾತ್ರ ಹಾಡುತ್ತಾರೆ. ಈ ದೇವರ ಒಕ್ಕಲುಗಳಾದ ಗಂಡಸರು ವಿವಿಧ ಬಗೆಯ ದೇವತಾ ಕಾರ್ಯಗಳಲ್ಲಿ ನಿರತರಾಗುತ್ತಾರೆ. ಈ ಗೀತೆಗಳೆಲ್ಲ ಮುತ್ತತ್ತಿರಾಯನ ಭಕ್ತರಾದ ಮಾದಿಗಜನಾಂಗದವರು ವರ್ಣಿಸಿ ಹಾಡುತ್ತಾರೆ, ಇತರರು ಹಾಡುತ್ತಾರೆ. ಪ್ರಸ್ತುತ ಕನಕಪುರ ತಾಲ್ಲೂಕಿನ ನಾಯಕನಹಳ್ಳಿ ಮತ್ತು ಅಲಸೂರು, ಮಳವಳ್ಳಿಯ ತಾಲ್ಲೂಕಿನ ಬಾಳೆಹೊನ್ನಿಗ ಮತ್ತು ದಳವಾಯಿ ಕೊಡಿಹಳ್ಳಿಗಳಲ್ಲಿನ ಮಾದಿಗ ಜನಾಂಗದ ಮಹಿಳೆಯರು ಹಾಗೂ ಆದಿಕರ್ನಾಟಕ ಜನಾಂಗದ ಓರ್ವ ಮಹಿಳೆಯರಿಂದ ಧ್ವನಿಮುದ್ರಿಸಿಕೊಂಡು ದಾಖಲಿಸಲಾಗಿದೆ. ಈ ಹಾಡುಗಳನ್ನು ಇತರ ಜಾತಿಯ ಮಹಿಳೆಯರು ಯಾವ ಬೇಧವೂ ಇಲ್ಲದೇ ಹಾಡುತ್ತಾರೆ. ಕಾರಣ ಮುತ್ತತ್ತಿರಾಯನಿಗೆ ಹಲವು ಜಾತಿಯ ನಾನಾಭಕ್ತರು ಇರುವರು. ನಾಗರೀಕತೆಯ ಆಧುನಿಕರಣದಿಂದ ಈ ಜನಪದ ಗೀತೆಗಳ ದಾಖಲೆ, ಅಧ್ಯಯನದ ಅಗತ್ಯ ಎಂದಿಗಿಂತ ಇಂದು ಅತಿ ಅವಶ್ಯವಾಗಿದೆ.

ಸಿನಿಮಾ ಪ್ರಭಾವದಿಂದ ಇವುಗಳು ಅಳಿವಿನ ಅಂಚಿಗೆ ತುತ್ತಾಗುತ್ತಿವೆ. ಮೊದಲು ನಾನು ಜಾತ್ರೆಯಲ್ಲಿ ಹಾಡುವ ಈ ಗೀತೆಗಳಿಗೆ ಹೋಲಿಸಿದರೆ ಈಗಿನ ಜಾತ್ರೆಗಳಲ್ಲಿ ಕೇವಲ ಸೀಮಿತ ಅವಧಿಯಲ್ಲಿ ಹಾಡುವ ತುಣುಕುಗಳು ಮಾತ್ರ ಆಗಿವೆ. ಆದುದರಿಂದ ಇವುಗಳ ಇಲ್ಲಿನ ದಾಖಲೆ ಗಮನಾರ್ಹ ಸ್ಥಾನ ಪಡೆದುಕೊಂಡಿವೆ. ಹಲವು ದೇವರುಗಳ ಪ್ರಭಾವವನ್ನು ಈ ಗೀತೆಗಳ ಪಲ್ಲವಿಗಳಲ್ಲಿ ಗುರುತಿಸಬಹುದಾದರೂ ನಂತರದ ಸಂಗತಿಗಳು ಕೇವಲ ಮುತ್ತತ್ತಿ, ಪಾದ್ದಾರೆ, ಸ್ವಾಮನಕೆರೆ, ಕಮರಿ, ಕಾವೇರಿಹೊಳೆ, ಹುಲಿಯವಾಹನ, ಭಕ್ತೆಯ ದೇವರಭಕ್ತಿ ವರಪ್ರಸಾದ ದೇವರಮಹಿಮೆ, ಜಾತ್ರೆಯ ವರ್ಣನೆ, ಆದಿಜಾಂಬವರಾದ ಮಾದಿಗರ ವಿವಿಧ ಬಗೆಯ ಸೇವೆಗಳು ತಮ್ಮಡಿ, ಮುತ್ತತ್ತಿರಾಯನ ನೆಲಸುವಿಕೆ, ಮಹಿಮೆ, ಸಾಹಸ, ದೇವಾಲಯ, ಗರುಡಗಂಬ, ದಾಸಯ್ಯ, ಕಕ್ಕೆಸೊಪ್ಪು ಇವುಗಳಿಗೆ ಸಂಬಂಧಿಸಿದವುಗಳಾಗಿವೆ. ವಿಷಯಗಳು ಬೇರೆ ಬೇರೆ ಗೀತೆಗಳಲ್ಲಿ ಪುನರಾವರ್ತನೆ ಇದ್ದರೂ ಗೀತೆಗೆ ತಕ್ಕಹಾಗೆ ವೈವಿಧ್ಯತೆಯಿದೆ.

ಜನಪದ ಭಾಷೆಗಳಲ್ಲಿನ ಶಬ್ದಗಳು ಸಹಜವಾಗಿ ಬಳಕೆಗೆ ಬಂದಿವೆ. ಈ ಭಾಗದ ಇತರ ದೇವರುಗಳ ಗೀತೆಗಳ ಹಾಗೆ ಕಂಡರು. ಸ್ವಂತಿಕೆಯನ್ನು ಉಳಿಸಿಕೊಳ್ಳುವಲ್ಲಿ ಯಶಸ್ವಿಯಾಗಿವೆ. ಈ ಪ್ರದೇಶದ ಪ್ರಾದೇಶಿಕ ವರ್ಣನೆಗಳಂತು ಐತಿಹ್ಯಗಳ, ಕತೆಗಳನ್ನು ಸೂಚಿಸುತ್ತದೆ. ಅಲ್ಲದೇ ಮುತ್ತತ್ತಿ ದೇವಾಲಯಕ್ಕೆ ಉಂಬಳಿಯಾಗಿ ಬಂದಿರುವ ಹಲಗೂರು ಬಳಿಯ "ಬ್ಯಾಡರಹಳ್ಳಿಯ ಶಾಸನದಲ್ಲಿ ಸೂಚಿಸಿರುವ ಹೊಲದ ಉಲ್ಲೇಖ ಇಲ್ಲಿದೆ[12]" ರಾಜೇಗೌಡರ ಮಾತಿನಂತೆ "ಭಕ್ತಿಗೀತೆಗಳು ಮೂರ್ತಿ ಪೂಜೆಯ ಸುತ್ತ ಹೆಣೆದಿರುವ ಈ ಗೀತೆಗಳು ನಡೆದಾಡುವ ಭಕ್ತಿಕೋಶಗಳು. ಅವರ ಅಭಿರುಚಿ, ನಯ, ವಿನಯ, ನಡಾವಳಿ,. ಹೃದಯಶ್ರೀಮಂತಿಕೆ, ಲೋಕಪದ್ದತಿ ಮೊದಲಾದವುಗಳ ಸ್ಮರಣಫಲಕಗಳು, ಸಂಪ್ರದಾಯದಬದ್ಧ ಸಮಾಜದ ಅನಕ್ಷರಸ್ತ ಜನ ಸಮುದಾಯದ ನಿಗಿನಿಗಿದು ಹೊಳೆವ ಮನೋದೀಪಕಗಳು. ಭಕ್ತಿಯನ್ನೇ ಧರ್ಮವೆಂದು ನಂಬಿ, ಅದಕ್ಕೆ ತಮ್ಮ ಜೀವನ ದೃಷ್ಟಿಯನ್ನೆಲ್ಲ ಬೆರಸಿಕೊಂಡಿದ್ದರಿಂದ ಇದು ಅವರ ಅನಿವಾರ್ಯ ಜೀವನ ಮೌಲ್ಯವಾಗಿತ್ತೆಂದು ತೋರುತ್ತದೆ. ತಮ್ಮ ಜೀವನವನ್ನು ಕಾಯುವ ದೇವರನ್ನು ಈ ಜನರು ಕಂಡ ರೀತಿ ಅಸದೃಶವಾದದ್ದೇ ಸರಿ. ಅವರ ಆತ್ಮೀಯತೆ ಎಂದಿಗೂ ಮರೆಯಲಾರದ ಅವರ ಭಕ್ತಿ, ಲೋಕದ ಅನನ್ಯಶಕ್ತಿಯಾಗಿ ನಿಂತಿರುವುದನ್ನು ಗುರಿತಿಸುತ್ತೇವೆ. ಮಾತಿನ ಪೂಜೆಯ ಮುಖದ ಮೂಲಕವೇ ಭಕ್ತಿಭಾವದ ನಾನಾ ಛಂದಗಳನ್ನು ಅವರ ಭಕ್ತಿಗೀತೆಗಳಲ್ಲೆಲ್ಲಾ ಹೊಮ್ಮಿಸಿರುವುದನ್ನು ಕಾಣುತ್ತೇವೆ. ಭಕ್ತಪರತೆ,

ಪ್ರೀತಿಪರವಶತೆ, ಜೀವನಶ್ರದ್ಧೆ, ಭಾವುಕತೆ, ಕರ್ತವ್ಯನಿಷ್ಠೆ, ಅಚಲನಂಬಿಕೆ, ಅಕುಟಿಲತೆ, ಅಕೃತಿಮತೆ ಹಾಗೂ ಆತ್ಮೀಯತೆಗಳು ಅವರ ಮೌಲಿಕ ಜೀವನದ ಆಧಾರದ ಸ್ತಂಭಗಳು; ಇವುಗಳೆಲ್ಲದರ ಪರಿಷ್ಕಾರ ಭಾವಗಳ ಅಭಿವ್ಯಕ್ತಿಯೇ ಈ ಭಕ್ತಿಗಳು[೨೮]"

"ಶಿಷ್ಟಕವಿಗಳು, ತಿಣುಕಿ ತಿಣುಕಿ ಪ್ರಯತ್ನಪೂರ್ವಕವಾಗಿ ರಚಿಸಿದ ಗೀತೆಗಳಿಗಿಂತ ಇಂಥ ಜನಪದ ಗೀತೆಗಳೇ ಹೆಚ್ಚು ಜನಪ್ರಿಯವಾಗಿವೆ. ಈ ಗುಣವೇ ಜನಪದ ಗೀತೆಗಳ ಪಾಠಾಂತರಕ್ಕೂ ಕಾರಣವಾಗಿ ಬಿಡುತ್ತದೆ. ಒಂದು ಗೀತೆಯ ಸಾಲು ಅಥವಾ ಮಾತು ಬೇರೊಂದು ಹಾಡಿನಲ್ಲಿ ಪುನರುಕ್ತಿಯಾಗಬಹುದು. ಇಂಥ ಪುನರುಕ್ತಿ ಜನಪದ ಗೀತೆಗಳ ಒಂದು ಅನಿವಾರ್ಯ ಲಕ್ಷಣವೂ ಆಗಿದೆ. ಬಾಯಿಂದ ಕಿವಿಗೆ, ಕಿವಿಯಿಂದ ಬಾಯಿಗೆ ಹಾಡುಗಳು ಹರಿಯುವಾಗ ಪಾಠಾಂತರ ಅನಿವಾರ್ಯವಾಗುತ್ತದೆ[೨೯]" ಪಾಠಾಂತರಗಳು ಸಹಜವೇ ಆದರೂ ಈ ಗೀತೆಗಳಲ್ಲಿ ಸ್ವಂತಿಕೆ ಕೆಲಸ ಮಾಡುತ್ತದೆ ಎಂಬುದು ಗಮನಾರ್ಹವಾದ ಅಂಶವಾಗಿದೆ.

ಜನಪದಗೀತೆಗಳು ಜನಪದ ಸಂಸ್ಕೃತಿಯ ಒಂದು ಅಂಗ ಕನ್ನಡದಲ್ಲಿ ಹಳ್ಳಿಯಹಾಡು, ಹಳ್ಳಿಯಪದಗಳು ಎಂದು ಕರೆದರೆ, ಮುತ್ತತ್ತಿಯ ಮುತ್ತತ್ತಿರಾಯನ ಕುರಿತು ಹಾಡುವ ಈ ಗೀತೆಗಳನ್ನು 'ಮುತ್ತತ್ರಾಯನ ಪದಗೊಳು' ಎಂತಲೆ ಕರೆಯುತ್ತಾರೆ. ನಗರ ಸಂಸ್ಕೃತಿಗಿಂತ ಭಿನ್ನವಾಗಿರುವ ಇವು ದೇಸಿಗೀತೆಗಳು. ಈ ಗೀತೆಗಳೆಲ್ಲ ವಾಕ್ಪರಂಪರೆಯಲ್ಲಿ ಬೆಳೆದು ಬಂದವುಗಳು. ಈ ಮುತ್ತತ್ತಿರಾಯನ ಗೀತೆಗಳನ್ನು ಹಾಡುವಾಗ ಯಾವುದೇ ಕಟ್ಟುಪಾಡುಗಳನ್ನು, ತಂತ್ರಗಳು ಸೂತ್ರಗಳನ್ನು ಅನುಸರಿಸಿದವುಗಳಲ್ಲ ಪ್ರಯತ್ನಪೂರ್ವಕವಾದ ಕಟ್ಟುನಿಟ್ಟಾದ ತರಬೇತಿಗೆ ಒಳಪಟ್ಟುವುಗಳಲ್ಲ. ಪರಂಪರೆಯಿಂದ ಬಂದ ಗೀತೆಗಳನ್ನು ಅರಗಿಸಿಕೊಂಡು ಸಂದರ್ಭಕ್ಕೆ ತಕ್ಕಹಾಗೆ ಹಾಡುತ್ತಾರೆ. ಮುತ್ತತ್ತಿ ಗೀತೆಗಳಲ್ಲೂ ಮೊದಲೇ ಅಸ್ತಿತ್ವದಲ್ಲಿರುವ ಸಾಮಾಗ್ರಿಗಳನ್ನು ಪುನಃ ಸೃಜಿಸುವ ಕಾರ್ಯ ನಡೆದಿದೆ. ಪರಿಷ್ಕರಣೆಯ ಕಾರ್ಯಸಾಗಿದೆ. ಆಗಾಗ ಬದಲಾವಣೆಯೂ ನಡೆದಿದೆ. ಹೀಗಾಗಿ ಬೇರೆ ಬೇರೆ ಪಾಠಗಳು, ಪಾಠಸಂಪ್ರದಾಯಗಳು, ಭಿನ್ನರೂಪತಳೆದು ಹುಟ್ಟಿಕೊಂಡಿವೆ.

ನಗರೀಕರಣ, ಶಿಕ್ಷಣ, ಸಮೂಹಮಾಧ್ಯಮ, ಮನೋರಂಜನೆಯ ವಸ್ತುಗಳ ದಾಳಿಯಿಂದಾಗಿ ವಾಕ್ಪರಂಪರೆಯಿಂದ ಬಂದ ಮುತ್ತತ್ತಿಯ ಜನಪದ ಗೀತೆಗಳು ವಿಶೇಷ ಸಂದರ್ಭಗಳಲ್ಲಿ ಬಿಟ್ಟರೆ ಉಳಿದಂತೆ ಪಸರಿಸುತ್ತಿಲ್ಲ. ಆ ಮೂಲಕ ಕ್ಷೀಣಿಸುತ್ತಿವೆ. ಇವುಗಳನ್ನು ಮುದ್ರಿಸಿ ಪ್ರಕಟಿಸುವ ಕೆಲಸವಾಗದಿದ್ದರೆ ಅಳಿಯುವ ಅವಕಾಶವೇ ಹೆಚ್ಚು. ಈ ದೃಷ್ಟಿಯಿಂದ ಈ ಜನಪದ ಗೀತೆಗಳ ಸಂಗ್ರಹದ ಕಾರ್ಯ ಯೋಗ್ಯವೆನಿಸಿದೆ.

ಅಪ್ರಕಟಿತ ಜನಪದಗೀತೆಗಳು ಅನುಬಂಧ ಎರಡರಲ್ಲಿ ನೀಡಲಾಗಿದೆ.

## ಅಡಿಟಿಪ್ಪಣಿಗಳು

೧. ಗೊ.ರು.ಚನ್ನಬಸಪ್ಪ ; ಕರ್ನಾಟಕದ ಜನಪದ ಕಲೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಪುಟ-೧೮೯, ೧೯೭೭

೨. ೩.ಪ್ರೊ.ಹಿ.ಚಿ.ಬೋರಲಿಂಗಯ್ಯ ; ಕರ್ನಾಟಕ ಜನಪದ ಕಲೆಗಳ ಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೨೪೧,೨೩ ೧೯೯೬

೪. ಗೊ.ರು.ಚನ್ನಬಸಪ್ಪ ; ಪೂರ್ವೋಕ್ತ ಪುಟ-೧೧೫, ೧೧೬.

೫. ಪ್ರೊ.ಹಿ.ಚಿ.ಬೋರಲಿಂಗಯ್ಯ ; ಪೂರ್ವೋಕ್ತ, ಪುಟ-೨೩.

೬. ಗೊ.ರು.ಚನ್ನಬಸಪ್ಪ ; ಪೂರ್ವೋಕ್ತ, ಪುಟ-೧೦೪, ೧೦೫.

೭. ಮಂಡ್ಯ ಜಿಲ್ಲಾ ಗೆಝೆಟಿಯರ್ ; ಕರ್ನಾಟಕ ಸರ್ಕಾರ, ಬೆಂಗಳೂರು, ಪುಟ-೯೫೫, ೨೦೦೩

೮. ಕೆ.ಅನಂತರಾಮು ; ಸಕ್ಕರೆ ಸೀಮೆ, ಅನಂತಪ್ರಕಾಶನ, ಮೈಸೂರು, ಪುಟ-೨೨೦, ೨೨೧, ೧೯೮೨

೯. ಪಂಡಿತ್. ಮ. ಮಲ್ಲಪ್ಪ ; ಮೋಹಕಮುತ್ತತ್ತಿ, ಜಿಮ್‌ಕಾರ್ಬೆಟ್ ಪ್ರಕಾಶನ, ಮಂಡ್ಯ, ಪುಟ-೮೯ ೧೯೯೨

೧೦.ಜೀ.ಶಂ. ಪರಮಶಿವಯ್ಯ ; ಶ್ರೀಮಂಟೇಸ್ವಾಮಿ ಕಾವ್ಯ, ಸಾಹಿತ್ಯಸದನ, ಮೈಸೂರು, ಪುಟ- ೧೩೦, ೧೩೧, ೧೯೭೩

೧೧.೧೨.ಜಾನಪದ ಕೈಪಿಡಿ ; ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪುಟ-೨೬,೨೭ ೧೯೯೭

೧೩.ಕೆ.ಅನಂತರಾಮು ; ಪೂರ್ವೋಕ್ತ, ಪುಟ-೨೨೨, ೧೯೮೨

೧೪.ಜೀ.ಶಂ.ಪರಮಶಿವಯ್ಯ ; ಶ್ರೀಮಂಟೇಸ್ವಾಮಿಕಾವ್ಯ, ಸಾಹಿತ್ಯಸದನ ಮೈಸೂರು, ಪುಟ-೧೨೬-೧೩೨ ೧೯೭೩

೧೫. ಡಾ.ಇಂದ್ವಾಡಿವೆಂಕಟೇಶ್; ಧರೆಗೆ ದೊಡ್ಡವರು, ವಿಶ್ವಾಲಯ, ಪ್ರಕಾಶನ ಬೆಂಗಳೂರು, ಪುಟ-೨೪೪-೨೪೭, ೧೯೯೬

೧೬. ಪ್ರೊ.ಹಿ.ಚಿ.ಬೋರಲಿಂಗಯ್ಯ ; ಮಂಟೇಸ್ವಾಮಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೬೭೨- ೬೮೧, ೧೯೯೭

೧೭. ಜಾನಪದ ಕೈಪಿಡಿ ; ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪುಟ-೧೭೨, ೧೭೩, ೧೯೯೭

೧೮. ಡಾ. ಇಂದ್ವಾಡಿವೆಂಕಟೇಶ್ ; ಮಂಟೇಸ್ವಾಮಿಪರಂಪರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೨೫೫, ೧೯೯೯

೧೯. ಡಾ. ಇಂದ್ವಾಡಿವೆಂಕಟೇಶ್ ; ನೀಲಗಾರರ ಸಾಂಸ್ಕೃತಿಕ ಪದಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಪುಟ-೮೯, ೯೧

೨೦. ಡಾ.ನಂ.ತಪಸ್ವಿಕುಮಾರ್ ; ಕನ್ನಡ ಒಗಟುಗಳ ಸಮೀಕ್ಷೆ, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾಲಯ, ಪುಟ- ೧೦೦, ೧೯೭೯

೨೧.೨೨.ಪ್ರೊ.ಹಿ.ಚಿ.ಬೋರಲಿಂಗಯ್ಯ ; ಕರ್ನಾಟಕ ಜನಪದ ಕಲೆಗಳ ಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೯೪, ೧೦೨ ೧೯೯೬

೨೩. ಜೀ.ಶಂ.ಪರಮಶಿವಯ್ಯ ; ದಕ್ಷಿಣಕರ್ನಾಟಕದ ಜನಪದ ಕಾವ್ಯಪ್ರಕಾರಗಳು, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು. ಪುಟ-೩೭.

೨೪. ಸಿ.ಕೆ.ಶಂಕರನಾರಾಯಣರಾವ್ ; ವೀಣೆಸಾರ್ವಭೌಮ ವಾದ್ಯ, ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ, ಬೆಂಗಳೂರು, ಪುಟ-೭, ೧೯೯೯

೨೫. ಕರ್ನಾಟಕ ಸಂಗೀತವಾಹಿನಿ ; ಮಾಧ್ಯಮಿಕ ಹಂತ, ಪಠ್ಯಪುಸ್ತಕ ನಿರ್ದೇಶನಾಲಯ, ಬೆಂಗಳೂರು, ಪುಟ-೧, ೨೦೦೪

೨೬. ಪ್ರೊ.ಡಿ.ಲಿಂಗಯ್ಯ ; ಇಕ್ಷುಸಂಚಯ, ಮಂಡ್ಯಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಪುಟ-೭೩, ೧೯೭೩

೨೭. ಮುತ್ತುರಾಜು ; ಮುತ್ತತ್ತಿಯ ತಾಮ್ರಶಾಸನ, ಕರ್ನಾಟಕ ದರ್ಶನ, ಸಂಪುಟ-೯, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ಪುಟ-೩೬,೩೯, ೧೯೯೪

೨೮. ರಾಮೇಗೌಡ ; ಹೊನ್ನಬಿತ್ತೇವು ಹೊಲಕ್ಕೆಲ್ಲ, ಕರ್ನಾಟಕ ಜಾನಪದ ಸಾಹಿತ್ಯ ಸಮ್ಮೇಳನ, ಸ್ಮರಣಗ್ರಂಥಪ್ರಕಾಶನ, ಸಾಹಿತ್ಯ ಸಮಿತಿ, ತರೀಕೆರೆ, ಪುಟ-೩೯೨, ೧೯೬೭

೨೯. ಜನಪದ ದರ್ಶನ ; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ-೫೫, ೧೯೯೪

# ಅಧ್ಯಾಯ–೩

## ಮುತ್ತತ್ತಿಯ ಸಂಪ್ರದಾಯ, ಪದ್ಧತಿ ಮತ್ತು ಆಚರಣೆ

"ಮಾನವ ಜೀವನವನ್ನು ರೂಪಿಸುವಲ್ಲಿ ಸಂಸ್ಕೃತಿಯನ್ನು ಪೋಷಿಸುವಲ್ಲಿ, ನಾಗರೀಕತೆಯನ್ನು ಬೆಳೆಸುವಲ್ಲಿ ಸಂಪ್ರದಾಯಾಚರಣೆಗಳಿಗೆ ವಿಶೇಷ ಮಹತ್ವವಿದೆ. ಅವು ಅವನ ಬಾಳಿನ ಅವಿಭಾಜ್ಯ ಸಂಗತಿಗಳಾಗಿವೆ; ಸಮಾಜವನ್ನುಒಂದು ಗೂಡಿಸುವ ಮತ್ತು ಮುಂದಕ್ಕೊಯ್ಯುವ ಶಕ್ತಿಪುಂಜಗಳಾಗಿವೆ. ಅವನ ನಡಾವಳಿ ಹಾಗೂ ವ್ಯವಹಾರಗಳು ಸಂಪ್ರದಾಯಬದ್ಧವಾಗಿಯೇ ಜರಗುತ್ತದೆ[೧]"

"ಸಂಪ್ರದಾಯಗಳು ಮೂಲತಃ ವೈಯಕ್ತಿಕ ವಾಡಿಕೆಗಳೆಂಬುದು ಸುಸ್ಪಷ್ಟ. ಪ್ರಭಾವಶಾಲಿಯಾದ ವ್ಯಕ್ತಿಯೊಬ್ಬನ ವಾಡಿಕೆಗಳನ್ನು ಸುತ್ತಮುತ್ತಣ ಜನ ಅನುಕರಿಸುವುದು ಸಹಜ[೨]"

"ಅನುಕರಣ ಮಾನವನಿಗೆ ಜನ್ಮಾರಭ್ಯ ಒದಗಿಬರುವ ವಿಶಿಷ್ಟಗುಣ. ತಂದೆಯಿಂದ ಮಗ, ತಾಯಿಯಿಂದ ಮಗಳು, ಗುರುವಿನಿಂದ ಶಿಷ್ಯ, ದೊಡ್ಡವರಿಂದ ಚಿಕ್ಕವರು. ಅನೇಕ ಅಭ್ಯಾಸಗಳನ್ನು ಕಲಿಯುವುದು ರೂಢಿ[೩]"

"ಸಮಾಜವನ್ನು ನಿಯಂತ್ರಿಸುವ ಮತ್ತು ಅದನ್ನು ಸರಿಯಾದ ದಾರಿಯಲ್ಲಿ ಕೊಂಡೊಯ್ಯುವ ಶಕ್ತಿ ಸಂಪ್ರದಾಯಕ್ಕಿದೆ[೪]"

"ಆಧುನಿಕ ಸಮಾಜಕ್ಕಿಂತ ಆದಿಮಾನವ ಸಮಾಜದಲ್ಲಿ, ನಾಗರಿಕ ಜನಾಂಗಗಳಿಗಿಂತ ಬುಡಕಟ್ಟು ಜನರಲ್ಲಿ, ಪಟ್ಟಣಗಳಿಗಿಂತ ಹಳ್ಳಿಗಳಲ್ಲಿ, ಸುಶಿಕ್ಷಿತರಿಗಿಂತ ನಿರಕ್ಷರಿಗಳಲ್ಲಿ ಸಂಪ್ರದಾಯಗಳು ಪ್ರಬಲವಾಗಿರುತ್ತೆ[೫]"

ಸಂಪ್ರದಾಯವೆಂದರೇನು? ಸರಳವಾಗಿ ಉಗಮಿಸಿ ಅಗಾಧವಾಗಿ ಬೆಳೆದಿರುವ ಮುತ್ತತ್ತಿಯ ಸಮಾಜದಲ್ಲಿ ಇದರ ಸ್ಥಾನವೇನು ಎಂದರೆ ರೀತಿ, ರಿವಾಜು, ಕಟ್ಟಳೆಗಳನ್ನೇ ಇಲ್ಲಿನ ಸಂಪ್ರದಾಯವೆನ್ನಬಹುದು. ಸಂಪ್ರದಾಯಗಳ ಹಿಂದೆ ನಂಬಿಕೆ, ಪದ್ಧತಿ, ಆಚರಣೆಗಳು ಕೆಲಸ ಮಾಡುತ್ತದೆ. ಈ ಮೂರರ ಮಧ್ಯೆ ಗೆರೆ ಎಳೆಯುವುದು ಕಷ್ಟ ಸಾಧ್ಯ. ಮುತ್ತತ್ತಿಯ ನೈಸರ್ಗಿಕ ಪರಿಸರ ರಮ್ಯ, ಅನುಕೂಲಕರವಾದ ತಾಣ, ಯಥೇಚ್ಛ ಜಲ, ಸಸ್ಯ, ಪ್ರಾಣಿಸಂಪತ್ತನ್ನು ಹೊಂದಿರುವ ಸ್ಥಳ. ಇಲ್ಲಿನ ಸಂಪ್ರದಾಯಕ್ಕೆ ಜನ್ಮಸ್ಥಳವಾಯಿತು ಎಂದು ಕಕ್ಕೆಸೊಪ್ಪಿನ ಕಾಳದಾಸನು ಕಕ್ಕೆಸೊಪ್ಪಿನಿಂದ ಗುಡಿಕಟ್ಟಿದನೊ ಅಂದೇ ಸಂಪ್ರದಾಯ ಇಲ್ಲಿ ಪ್ರಾರಂಭವಾಯಿತು.

ನಂಬಿಕೆ ಪ್ರಾರಂಭವಾಯಿತು ಎಂದು ಹೇಳಬಹುದು. ಸುತ್ತಮುತ್ತಲ ಭಕ್ತರೆಲ್ಲ ಈ ದೇವರಿಗೆ ನಡೆದುಕೊಳ್ಳಲು ಪ್ರಾರಂಭಿಸಿದಂದಿನಿಂದ ಇಲ್ಲಿನ ಸಂಪ್ರದಾಯ ಏಕರೂಪತೆಯನ್ನು ಪಡೆದುಕೊಂಡವು. ಮುತ್ತತ್ತಿರಾಯನ ಭಕ್ತರು ಅನುಸರಿಸುವ ಕೆಲವು ಸಂಪ್ರದಾಯಗಳ ಪಟ್ಟಿಯನ್ನು ನೋಡಬಹುದು.

೧. ಮುತ್ತತ್ತಿರಾಯನಿಗೆ ವರುಷದಲ್ಲಿ ಒಮ್ಮೆ ಕುರಿ, ಮೇಕೆ, ಕೋಳಿ ಬಲಿ ಕೊಡುವ ಮೂಲಕ ಸೇವೆ.

೨. ಕುರಿ, ಮೇಕೆ, ಕೋಳಿಗಳನ್ನು ಮುತ್ತತ್ತಿರಾಯನಿಗೆಂದು ತೀರ್ಥಹಾಕಿ ಪೂಜೆಮಾಡಿ ಬೆಳಸುವುದು.

೩. ಮುತ್ತತ್ತಿರಾಯನ ಒಕ್ಕಲಿನವರು ಜಾತ್ರೆಯಲ್ಲಿ ಪಾಲುಗೊಳ್ಳುವುದು.

೪. ಕಷ್ಟಬಂದಾಗ ಮೀಸಲು ಕಟ್ಟುವುದರ ಮೂಲಕ ಹರಸಿಕೊಳ್ಳುವುದು.

೫. ಬೆಳೆದ ಬೆಳೆಗಳನ್ನು ಮೊದಲು ಮುತ್ತತ್ತಿರಾಯನಿಗೆ ಎಂದು ಅರ್ಪಿಸಿ ಪೂಜಿಸುವುದು.

೬. ಮದುವೆಯಾದ ಹೊಸಗಂಡು ಹೆಣ್ಣುಗಳನ್ನು ಮುತ್ತತ್ತಿಗೆ ಕರೆದುಕೊಂಡು ಹೋಗಿ ಪೂಜಿಸುವುದು.

೭. ಮನೆಯಲ್ಲಿ ಹುಟ್ಟುವ ಮಕ್ಕಳಿಗೆ ಮೊದಲ ಹೆಸರು ಮುತ್ತತ್ತಿರಾಯನ ಹೆಸರಿನಿಂದಲೇ ಇಡುವುದು.

೮. ಹುಟ್ಟಿದ ಮಕ್ಕಳ ಮೊದಲ ಕೂದಲನ್ನು ಮುತ್ತತ್ತಿಯಲ್ಲಿಯೇ ತೆಗೆಸುವುದು.

೯. ದೊಡ್ಡದೇವರು, ಕರಿಯಣ್ಣ ಕೆಂಚಣ್ಣರನ್ನು ಕರೆಸಿ ದಾಸಪ್ಪನಿಂದ ಪೂಜಿಸುವುದು.

೧೦.ಮುತ್ತತ್ತಿರಾಯನ ಬಳಿ ಇರುವ ಕೊಂಡದ ಬೂದಿಯನ್ನು ಶರೀರದ ನೋವಿನ ಸ್ಥಳಕ್ಕೆ ಬಳಿದುಕೊಳ್ಳುವುದು.

೧೧. ಮುತ್ತತ್ತಿಯಿಂದ ಯಾವುದೇ ಕಲ್ಲುಗಳನ್ನು ಹೊರಗೆ ಒಯ್ಯದಿರುವುದು.

೧೨. ಇಲ್ಲಿ ಮಾಡಿದ ಅಡುಗೆಯನ್ನು ಹೊರಗಡೆಗೆ ಒಯ್ಯದಿರುವುದು.

೧೩. ಮುತ್ತತ್ತಿರಾಯನ ಸನ್ನಿಧಿಯಲ್ಲಿ ಗಂಡು ಹೆಣ್ಣುಗಳಿಗೆ ಮದುವೆ ಮಾಡುವುದು.

೧೪. ಮಾರುತಿಮಾಲೆ ಧರಿಸಿ ಮುತ್ತತ್ತಿಗೆ ಬರುವುದು.

೧೫. ಮುತ್ತತ್ತಿ ತೀರ್ಥವನ್ನು ಮನೆಯ ಮೂಲೆ ಮೂಲೆಗಳಿಗೂ ಎರಚುವುದು.

೧೬. ಪ್ರತಿ ಶನಿವಾರ ಮನೆಯಲ್ಲಿ ಮುತ್ತತ್ತಿರಾಯನನ್ನು ಪೂಜಿಸುವುದು.

೧೭. ಮಕ್ಕಳಾಗದಿದ್ದರೆ ಮುತ್ತತ್ತಿರಾಯನಿಗೆ ಮೊರೆ ಹೋಗುವುದು.

೧೮. ಕಷ್ಟಬಂದಾಗ ಮುತ್ತತ್ತಿರಾಯನಿಗೆ ಮೊರೆಹೋಗುವುದ.

೧೯. ನಡೆದು ಬಂದು ಪೂಜಿಸುವುದು.

೨೦. ಕಾಣಿಕೆಯನ್ನು ಅರ್ಪಿಸುವುದು.

೨೧. ಮುತ್ತತ್ತಿರಾಯ ಸಸ್ಯಹಾರಿ ಎಂದು ನಂಬುವುದು.

೨೨. ಹುಲಿವಾಹನವನ್ನು ಎತ್ತಿಸುವುದು.

೨೩. ಉರುಳುಸೇವೆ ಮಾಡುವ ಹರಕೆ ಹೊರುವುದು.

ಈ ಸಂಪ್ರದಾಯಗಳೇ ಪದ್ಧತಿ ಮತ್ತು ಆಚರಣೆಗಳಾಗಿವೆ. ಬಾಯಿಬೀಗ, ಪಂಜಿನಸೇವೆ ಎಂಬ ಆಚರಣೆಗಳು ಜನಪದ ಗೀತೆಗಳಲ್ಲಿ ಬಳಕೆಯಾದರು ಆ ಬಗೆಯ ಯಾವುದೇ ಆಚರಣೆ ಇಲ್ಲಿ ನಡೆಯುವುದಿಲ್ಲ. ಕುರಿ, ಮೇಕೆ, ಕೋಳಿ ಹೊರತಾಗಿ ಹಂದಿ, ಕೋಣ ಬಲಿಕೊಡುವ ಪದ್ಧತಿ ಇಲ್ಲಿ ಬಳಕೆಯಲ್ಲಿಲ್ಲ. ದೊಡ್ಡರೂಪದ ಕೊಂಡವಾಗಲಿ, ಘನರೂಪದ ರಥೋತ್ಸವದ ಪದ್ಧತಿಯಾಗಲಿ ಇಲ್ಲಿ ನಡೆಯುವುದಿಲ್ಲ. ಅತ್ಯಂತ ಸರಳವು, ಸತ್ವಯುತವು ಆದ ಸಂಪ್ರದಾಯ, ನಂಬಿಕೆ, ಪದ್ಧತಿ ಮತ್ತು ಆಚರಣೆಗಳಿಂದ 'ಮುತ್ತತ್ತಿಯ' ಸಮಾಜ ಮತ್ತು ಭಕ್ತಸಮೂಹ ಮುನ್ನಡೆದುಕೊಂಡು ಬರುತ್ತಿದೆ. ತಲೆಯಿಂದ ತಲೆಗೆ ನಿರಂತರವಾಗಿ ಇಲ್ಲಿನ ಸಂಪ್ರದಾಯಗಳು ಬೆಳೆದುಕೊಂಡು ಬರುತ್ತಿವೆ. ಈ ದೇವರ ಮೇಲಿನ ಭಕ್ತಿ, ನಂಬಿಕೆ, ಸಂಪ್ರದಾಯಗಳಿಂದಾಗಿಯೇ ಕನ್ನಡದ ಮೇರು ಚಿತ್ರನಟ ಡಾ.ರಾಜಕುಮಾರ್ ರವರ ಜನನವಾಗಿರುವುದು ಮಹತ್ವದ ಅಂಶವಾಗಿದೆ.

## ೩.೧ ದೊಡ್ಡ ದೇವರು

ಇದು ಮುತ್ತತ್ತಿರಾಯನ ಒಂದು ಅಧಿದೇವತೆ. ಮುತ್ತತ್ತಿರಾಯ ಪೋಷಿಸುವಂತಹ ಆಶ್ರಯನೀಡುವ ದೇವತೆ. ಭೂತಾರಾಧನೆಯ ಮೂಲಕ ಭೂತಗಳನ್ನು ಪೂಜಿಸಿ ಸಂತೃಪ್ತಿ ಪಡಿಸುವರ ಹಾಗೆ ಈ ಪರಿಸರದಲ್ಲಿ ದೊಡ್ಡದೇವರನ್ನೂ ಸಹ ಓರ್ವ ದೇವದೂತನ ಹಾಗೆ ಪೂಜಿಸುವ ಪದ್ಧತಿಯನ್ನು ಬೆಳೆಸಿಕೊಂಡು ಬಂದಿದ್ದಾರೆ. ಈ ದೊಡ್ಡದೇವರು ಮುತ್ತತ್ತಿಯಲ್ಲಿ ನೆಲೆಗೊಂಡ ಬಗ್ಗೆ ಜನಪ್ರತೀತಿಯೊಂದು ಹೀಗಿದೆ. "ದೊಡ್ಡದೇವರನ್ನು ಸಲಹಲಾರದೆ ಯಾರೋ ಹೊಳೆಯಲ್ಲಿ ಬಿಟ್ಟು ಬಿಟ್ಟರಂತೆ ಕಾವೇರಿ ತೀರದ ಮುತ್ತತ್ತಿ ಬಳಿ ಹಿಮ್ಮುಖವಾಗಿ ತೇಲುತ್ತಾ ಹೋಗುವ ಈತನನ್ನು ಮುತ್ತತ್ತಿರಾಯ ಮೂಗುದಾರ ಹಾಕಿ ಎಳೆದುಕೊಂಡುನಂತೆ ನಾನು ಸೇವಿಸುವ ಏಳುಬಂಡಿ ಅನ್ನ, ಸಾರು, ಪಾಯಸಗಳನ್ನು ಒದಗಿಸಿದರೆ ನಾನು ಇಲ್ಲಿ ನೆಲೆಸಲು ಸಿದ್ಧ ಎಂದಾಗ ಮುತ್ತತ್ತಿರಾಯನು ಇಲ್ಲಿ ನಡೆಯುವ ಬಲಿ ಮತ್ತು ಸೇವೆಯೆಲ್ಲಾ ನಿನಗೆ ಅರ್ಪಣೆಯಾಗಲಿ ಅಲ್ಲದೆ ಸುತ್ತಮುತ್ತಲ ಗ್ರಾಮಗಳಲ್ಲೆಲ್ಲಾ ತಿರುಗಿ ಪೂಜೆಗೊಳ್ಳುತ್ತ ಸೇವೆಯನ್ನು ಪಡೆದುಕೋ ಎಂಬ ವಾಗ್ದಾನ ನೀಡಿ ಇಲ್ಲಿರಿಸಿಕೊಂಡನಂತೆ". ಈ ದೇವರ ಮೂರ್ತಿ ಎಂದರೆ ಕರಿಯಣ್ಣ, ಕೆಂಚಣ್ಣರ ಹಾಗೆ ಹಲಗೆಯ ರೂಪವೇ ಆಗಿದ್ದು ಇನ್ನೂ ಒಂದು ಅಡಿ ವೃತ್ತವನ್ನು ಹೆಚ್ಚಿಸಿಕೊಂಡಿದೆ. ಮುಖದರೂಪ ಇದಕ್ಕಿದ್ದು ಹಲಗೆಯ ತುಂಬ ವಾನರ ರಾಮ ಸೀತೆಯರ ವರ್ಣದ ಚಿತ್ರಣಗಳಿವೆ. ಈ ದೇವರ ಹಲಗೆಗೆ ಹಲವು ಪ್ರಕಾರದ ಬೆಳ್ಳಿಯ ಹಾರಗಳನ್ನು ಹಾಕಲಾಗಿದೆ. ಅಲ್ಲದೇ ನಾಣ್ಯಗಳನ್ನು ಪೋಣಿಸಿ ಹಾರ ಮಾಡಿ ಹಾಕಲಾಗಿದೆ. ಮುತ್ತತ್ತಿಯಲ್ಲಿ ಸೇವೆ ಮಾಡುವಾಗ ಮಾಂಸಾಹಾರದ ಎಡೆ ನೀಡುವುದು ಈ ದೊಡ್ಡದೇವರು ಹಾಗೂ ಕರಿಯಣ್ಣ, ಕೆಂಚಣ್ಣರಿಗೆ ಮಾತ್ರವೇ ಆಗಿದೆ.

ಭಕ್ತರು ಹರಕೆಯನ್ನು ಹೊತ್ತುಕೊಂಡು ಈ ದೊಡ್ಡದೇವರನ್ನು ತಮ್ಮ ಮನೆಗಳಿಗೆ ದಾಸಯ್ಯನ ಮೂಲಕ ತರಿಸಿಕೊಳ್ಳುತ್ತಾರೆ. ದಾಸಯ್ಯನು ಮುತ್ತತ್ತಿ ದೇವಾಲಯಕ್ಕೆ ಇಂತಿಷ್ಟು ಕಾಣಿಕೆ ನೀಡಿ ದೊಡ್ಡದೇವರನ್ನು ಗ್ರಾಮಗಳ ಭಕ್ತಾದಿಗಳ ಮನೆಗಳಿಗೆ ಕೊಂಡೊಯ್ದು ಶನಿವಾರದಂದು ಪೂಜೆ ಮಾಡುತ್ತಾನೆ. ಈ ದೊಡ್ಡದೇವರ ಜೊತೆ ಕರಿಯಣ್ಣ, ಕೆಂಚಣ್ಣ ಹಲಗೆಗಳನ್ನು ಇಟ್ಟು ಮುತ್ತತ್ತಿರಾಯನ ಪಟ್ಟಲೋಹದ ಮೂರ್ತಿ ಇಟ್ಟು ಪೂಜೆಯನ್ನು ಮಾಡುತ್ತಾನೆ. ಮಧ್ಯದ ಎಡೆಯನ್ನು ಮಾಂಸಾಹಾರದ ಜೊತೆಗೆ ಇಟ್ಟಿರುತ್ತಾರೆ. ಹೀಗೆ ಕೂತಪಟ್ಟ ಹನುಮಂತನದಾದರೆ ತಿರುಗುವ ಪಟ್ಟ

ದೊಡ್ಡದೇವರುವಿನದಾಗಿದೆ. ೧೯೧೦ರ ಸುಮಾರಿನ ಹಲಗೆಯ ಮೇಲೆ ಬರಹಗಳಿವೆ. ಅಂದರೆ ಅದಕ್ಕೂ ಮುಂಚಿನಿಂದಲೂ ಈ ದೊಡ್ಡದೇವರ ಅಸ್ತಿತ್ವ ಇಲ್ಲಿದೆ. ಹಲಗೆಯ ಮೇಲೆ ಬೆಳ್ಳಿತಗಡಿನ ಲೇಪನ, ನಾಣ್ಯಗಳಿಂದ ಮಾಡಿರುವ ಕಾಸಿನ ಸರಗಳ ಅಲಂಕಾರವು ಈ ದೇವರಿಗೆ ಇರುತ್ತದೆ. ಗ್ರಾಮೀಣರು ಮನೆಬಿಟ್ಟು ತಿಂಗಳಾನುಗಟ್ಟಲೆ ಹೊರಗೆ ಹೋಗಿದ್ದರೆ ಮತ್ತೆ ಪ್ರವೇಶಿಸುವಾಗ ಈ ದೇವರನ್ನೂ ಮುತ್ತತ್ತಿಯಲ್ಲಿ ಪಡೆದು ನದಿಯ ದಡದಲ್ಲಿ ಪೂಜಿಸಿ ತಮಟೆ ವಾದ್ಯ, ಹೊಂಬಾಳೆ, ಹಸಿಕರಗದ ಜೊತೆ ತಂದು ಸುಣ್ಣಬಳಿದು ಶುದ್ಧ ಮಾಡಿರುವ ಮನೆಗೆ ನುಗ್ಗಿಸುತ್ತಾರೆ. ಊರಿಗೆ ದೇವರನ್ನು ಬರಮಾಡಿಕೊಳ್ಳುವಾಗ ಮಣೇವು ಸೇವೆ ಏರ್ಪಡಿಸುತ್ತಾರೆ. ಮನೆಯಲ್ಲಿ ಇಡುವ ಎಡೆಯ ಅರ್ಪಣೆ ಈ ದೊಡ್ಡದೇವರಿಗೆ ಆಗುತ್ತದೆ. ಇದನ್ನು ಬುಟ್ಟಟ್ಟಿಕವಳ ಎಂದು ಕರೆಯುತ್ತಾರೆ. ಭಕ್ತರು ಇಚ್ಛಾನುಸಾರ ಸಾಮಾನ್ಯವಾಗಿ ಶನಿವಾರಗಳಂದು ಈ ದೇವರನ್ನು ಮನೆಗಳಿಗೆ ತೆಗೆದುಕೊಂಡು ಹೋಗಿ ದಾಸಯ್ಯನಿಂದ ಪೂಜಿಸುತ್ತಾರೆ. ಜನಪದ ಭಕ್ತರಿಗೆ ಈ ದೇವರನ್ನು ಹೊರುವ ತಮ್ಮಡಿ ಸಾಕ್ಷಾತ್ ಪರಮಾತ್ಮನಿದ್ದಂತೆ. ಆದುದರಿಂದ ಅವನ ಕಾಲಿಗೆ ನಮಸ್ಕಾರ ಮಾಡಿ ತಮ್ಮ ಭಕ್ತಿಯನ್ನು ವ್ಯಕ್ತಪಡಿಸುತ್ತಾರೆ.

ಅರಣ್ಯದಲ್ಲಿ ಉಗಮಿಸಿರುವ ಮುತ್ತತ್ತಿರಾಯನ ಗುಡಿಯ ಬಳಿ ಬ್ಯಾಟರಾಯನ ಗುಡಿಯೊಂದು ಇದ್ದು ಅಲ್ಲಿನ ಬ್ಯಾಟರಾಯ ಅಥವಾ ಬೇಟೆರಾಯ ದೇವರೊಂದು ಇದ್ದಿತ್ತಾಗಿ ಮಂಟೇಸ್ವಾಮಿ ಕಾವ್ಯದಿಂದ ತಿಳಿದುಬರುತ್ತದೆ.

"ಬೇಟೆರಾಯನ ಹೆಸರ ಹೇಳಿ
ಒಂದು ಎಡೆಯ ಮಡಗುತಾರೆ"
"ಹರಹರ ಶಿವಶಿವ ಅಂತ
ಶಿವಪೂಜೆ ಮಾಡಿಕೊಂಡು
ಬೇಟೆರಾಯನ ಎಡೆಯ
ಬೇಟೆರಾಯನಿಗೆ ಕಟ್ಟಿಕೊಂಡು
ಮುತ್ತತ್ತಿರಾಯನ ಎಡೆಯ
ಮುತ್ತತ್ತಿರಾಯನಿಗೆ ಕಟ್ಟಿಗಂಡು
ಮೂವರು ಮೂರ್ತಬೋಜನ ಎಡೆಯ ಮಾಡಿ"

ಈ ಬೇಟೆರಾಯನೆ, ವೈಷ್ಣವ ಧರ್ಮದ ರಂಗನಾಥ, ಚೆಲುವನಾರಾಯಣ, ತಿಮ್ಮಪ್ಪ, ವೆಂಕಟರಮಣನೆ ಆಗಿರುವುದರಿಂದ ಮುತ್ತತ್ತಿಯಲ್ಲಿ ಪೂಜ್ಯಸ್ಥಾನದಲ್ಲಿ ಪೂಜಿಸುವ ದೊಡ್ಡದೇವರು ಬ್ಯಾಟರಾಯನೇ ಆಗಿದ್ದಾನೆ ಎಂದು ಹೇಳಬಹುದು. ಇದಕ್ಕೆ ಸಮರ್ಥನೆಗಾಗಿ ಪಾದ್ದಾರೆಯ ಕಮರಿಯ ಬದಿಯಲ್ಲಿ ಬ್ಯಾಟರಾಯನ ಗುಡಿಯನ್ನು ಸರಳವಾದ ಚಪ್ಪರವೊಂದನ್ನು ನಿರ್ಮಿಸಿ ಪೂಜೆ ಮಾಡುತ್ತಿದ್ದುದ್ದನ್ನು ಹೆಸರಿಸಬಹುದು.

## ೩.೨ ಕರಿಯಣ್ಣ ಕೆಂಚಣ್ಣ

ಕರಿಯಣ್ಣ, ಕೆಂಚಣ್ಣರೆಂಬ ಮುತ್ತತ್ತಿರಾಯನ ಭಂಟರು ಮುತ್ತತ್ತಿ ಮತ್ತು ಭಕ್ತರ ವಲಯದಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಾರೆ. ದಕ್ಷಿಣ ಕರ್ನಾಟಕದ ಬೆಂಗಳೂರು, ಕೋಲಾರ, ತುಮಕೂರು, ಮಂಡ್ಯ, ಚಿತ್ರದುರ್ಗ, ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ಇವರ ಆರಾಧನೆ ಕಂಡು ಬರುತ್ತದೆ. ಕರಿ ಮತ್ತು ಕೆಂಚ ವಿಶೇಷಣಗಳ ಜೊತೆಗೆ ಸೇರಿಸಿದ ಸೋಮ, ಅಣ್ಣ, ಇತ್ಯಾದಿ ಹೆಸರುಗಳು ಪ್ರಚಲಿತವಾಗಿವೆ. ವೈಷ್ಣವಧರ್ಮದ ಭಾಗವಾಗಿರುವ ಇವರುಗಳನ್ನು ಸೇವಕರು, ಭಂಟರು ಎಂದು ಕರೆಯುತ್ತಾರೆ. ಈ ಭಾಗದ ಎಲ್ಲಾ ದೇವರುಗಳಿಗೂ ಕರಿಯಣ್ಣ, ಕೆಂಚಣ್ಣರು ಇರುವಂತೆ ಮುತ್ತತ್ತಿಯ ಮುತ್ತತ್ತಿರಾಯನಿಗೂ ಸಹ ಇದ್ದಾರೆ. ಇವುಗಳನ್ನು ಹರಿಗೆ ಎಂದು ಕರೆಯುತ್ತಾರೆ. ಈ ಅದಿದೇವರುಗಳಿಗೆ ಪೂರ್ಣರೂಪವೇನೂ ಇರುವುದಿಲ್ಲ ಬದಲಾಗಿ ಮುಖವಾಡಗಳು ಮಾತ್ರ ಇರುತ್ತದೆ. ಎರಡು ಅಡಿ ವ್ಯಾಸದ ಈ ಮುಖವಾಡಗಳು ಕರಿ ಮತ್ತು ಕೆಂಪುಬಣ್ಣಗಳನ್ನು ಒಳಗೊಂಡಿರುತ್ತದೆ. ಕಪ್ಪುಬಣ್ಣವು ದ್ರಾವಿಡ ಸೂಚಕವೂ ಸಹ ಆಗಿದೆ. ಬಣ್ಣದ ಹೊರತು ರೂಪದಲ್ಲಿ ಒಂದೇ ಬಗೆಯದ್ದರೂ ಕರಿಯಣ್ಣನ ಅರಳಿದ ಕಣ್ಣುಗಳು, ದಪ್ಪನೆಯ ಹುಬ್ಬು ಮೇಲೆ ವೈಷ್ಣವಧರ್ಮದ ಲಾಂಛನವಾದ ನಾಮ, ದಪ್ಪನೆಯ ಮೂಗಿನ ಮೇಲೆ ಎತ್ತಿದ ದಪ್ಪನೆಯ ಮೀಸೆ ದೊಡ್ಡ ದೊಡ್ಡ ಹಲ್ಲುಗಳ ಇಕ್ಕೆಲಗಳಲ್ಲೂ ಕೋರೆಹಲ್ಲುಗಳಿರುತ್ತವೆ. ಗುಂಗುರುಕೂದಲು ಎಲ್ಲವು ಕರಿಯಣ್ಣನಿಗೆ ಭೀಕರವಾದರೆ, ಕೆಂಚಣ್ಣನಿಗೆ ತುಸುಮಂದವೇ ಆಗಿದೆ. ಕರಿಯಣ್ಣ ಬಲಬದಿಗೆ ನೋಡುತ್ತಿದ್ದರೆ ಕೆಂಚಣ ತನ್ನ ಎಡಬದಿಗೆ ದೃಷ್ಟಿಸುತ್ತಿರುತ್ತಾನೆ. ಮುಖದ ಸುತ್ತಲೂ ಅಲಂಕಾರವನ್ನು ಮಾಡಲಾಗಿರುತ್ತದೆ. ಕಿವಿ ಇರುವ ಭಾಗದಲ್ಲೂ ಅಲಂಕಾರವನ್ನು ಮಾಡಲಾಗಿರುತ್ತದೆ. ಈ ಕರಿಯಣ್ಣ, ಕೆಂಚಣ್ಣರು ಮುತ್ತತ್ತಿರಾಯನಿಗೆ ಭಂಟರಾದ ಕತೆಯ ಬಗ್ಗೆ ಒಂದು ಐತಿಹ್ಯವಿದೆ "ಯಾರೋ ಭಕ್ತರು ಆ ಕರಿಯಣ್ಣ ಕೆಂಚಣ್ಣರೆಂಬ ದೇವರುಗಳನ್ನು ಮಾಡಿಕೊಂಡು ನಿತ್ಯವು ಹಾರಕೊಡುತ್ತ ಪೂಜಿಸುತ್ತಿದ್ದರು. ಆದರೆ ಕೆಲವು ವರ್ಷಗಳ ತರುವಾಯ ಹಾಗೆ ಮಾಡಲು ಅವರ ಕೈಲಾಗದೆ ಹೋಯಿತು. ಆದ್ದರಿಂದ ಅವರು ಆ ದೇವರುಗಳನ್ನು ಕಾವೇರಿ ನದಿಯಲ್ಲಿ ವಿಸರ್ಜಿಸಿಬಿಟ್ಟರು. ಆಗ ಕರಿಯಣ್ಣ ಕೆಂಚಣ್ಣರು ಪ್ರವಾಹಕ್ಕೆ ಇದಿರಾಗಿ ಈಜುತ್ತ, ವಸಂತರಾಯನ ಕಡುವಿಗೆ ಬಂದರು. ಆ ಹೊತ್ತಿನಲ್ಲಿ ಅಲ್ಲಿ ಮೀಯುತ್ತಿದ್ದ ಮುತ್ರಾಯನು ಮೂಗುದಾರ ಹಾಕಿ ಆ ಇಬ್ಬರನ್ನೂ ಮೇಲಕ್ಕೆಳೆದು ಕೊಂಡನು ನಾವು ರಕ್ತಹಾರದವರು; ನೀನು ನೋಡಿದರೆ ಮುದುಕಪ್ಪ, ನಿತ್ಯವು ಅದನ್ನು ನಮಗೆ

ಒದಗಿಸಿಕೊಡುವುದು ನಿನ್ನಿಂದ ಸಾಧ್ಯವೇ? ನಮ್ಮನ್ನೇಕೆ ಎಳೆದುಕೊಂಡೆ, ಬಿಟ್ಟುಬಿಡು ನಮ್ಮದಾರಿ ನಮಗೆ ಎಂದರವರು. ಆಗ ಸ್ವಾಮಿಯು 'ಚಿಂತೆಯಿಲ್ಲ ನನ್ನದು ಕುಳಿತಪಟ್ಟ, ನಿಮ್ಮದು ಸುತ್ತುಪಟ್ಟ; ನೀವು ಊರೂರು ಮೇಲೆ ಹೋಗಿ ಬಿಟ್ಟಮನೆ, ಗಾಳಿಪೋರು ಮನೆಗಳನ್ನು ನುಗ್ಗಿ ನಿಮಗೆ ಬೇಕಾದ ಹಾರವನ್ನು ತೆಗೆದುಕೊಳ್ಳಿ, ನಾನಿರುವ ಜಾಗದಲ್ಲು ನಿಮಗೆ ಬೇಕಾದಷ್ಟು ಕೊಡಿಸುತ್ತೇನೆ ಎಂದನು. ಅಂದಿನಿಂದ ಕರಿಯಣ್ಣ, ಕೆಂಚಣ್ಣರು ಸ್ವಾಮಿಯ ಭಂಟರಾದರು. ಅದರಂತೆ ಆ ಕ್ಷೇತ್ರದಲ್ಲಿ ನಡೆಯುವ ಪ್ರಾಣಿ ಬಲಿಯೆಲ್ಲಾ ಆ ಕ್ರೂರದೇವತೆಗಳಿಗೆ ಸಲ್ಲುತ್ತದೆ.'"

ಮತ್ತೊಂದು ಜನಪ್ರತೀತಿ ಕರಿಯಣ್ಣ, ಕೆಂಚಣ್ಣರ ಬಗ್ಗೆ ಹೀಗಿದೆ. "ಮೊದಲು ಕರಿಯಣ್ಣ, ಕೆಂಚಣ್ಣರಿಬ್ಬರು ಹುಲಿಗಳಾಗಿದ್ದು, ದೇವರ ಪೂಜಾಸಮಯದಲ್ಲಿ ತಮ್ಮ ಕಣ್ಣುಗಳ ಪ್ರಜ್ವಲಿತ ಬೆಳಕಿನಿಂದ ಬೆಳಕನ್ನು ಬೀರುತ್ತಿದ್ದರಂತೆ. ಶೂದ್ರ ತಮ್ಮಡಿಯಿಂದ ಪೂಜೆ ಸ್ವೀಕರಿಸುವ ದೇವರನ್ನು ನೋಡಲು ಶೂದ್ರಜನರು ಬಂದರಂತೆ ಆಗ ಹುಲಿಗಳೆರಡೂ ಕೂಡಿ ಅವರನ್ನು ತಿಂದು ಬಿಟ್ಟವಂತೆ ಕೋಪಗೊಂಡ ಮುತ್ತತ್ತಿರಾಯ ಹುಲಿಗಳೆರಡಕ್ಕೂ ಶಾಪವಿತ್ತು, ಕರಿಯಣ್ಣ, ಕೆಂಚಣ್ಣರಾಗಿ ಹುಟ್ಟುವಂತೆ ಹೇಳಿ ರಕ್ತಾಹಾರದ ಬಲಿಯೆಲ್ಲಾ ನಿಮಗೆ ಸಲ್ಲುತ್ತದೆ ಎಂದು ಹೇಳಿದನಂತೆ".

ಮಹಾಭಾರತಕ್ಕೆ ಸಂಬಂಧಿಸಿದಂತೆ ಇನ್ನೊಂದು ಐತಿಹ್ಯ ಹೀಗೆ ದೊರೆಯುತ್ತದೆ. "ಭೀಮನ ಮಗನಾದ ಘಟೋತ್ಕಜನನ್ನು ಬಲಿ ತೆಗೆದುಕೊಳ್ಳಬೇಕು ಎಂದು ಶ್ರೀಕೃಷ್ಣನಿಗೆ ಒಂದು ಸಲ ಅನ್ನಿಸಿತು. ಆದರೆ ಹೇಗೆ ಬಲಿ ತೆಗೆದುಕೊಳ್ಳುವುದು? ಅದಕ್ಕಾಗಿ ಒಂದು ಉಪಾಯ ಮಾಡಿದ. ಘಟೋತ್ಕಜನನ್ನು ಕರೆದು 'ಎದುರುರೋಮ, ಕೋರೆಮೀಸೆ ಇರೋವಂತ ಒಂದು ಟಗರು ಬೇಕು, ತಂದು ಬಲಿ ಕೊಡು' ಎಂದು ಹೇಳಿದ. ಅವನ ಅಪ್ಪಣೆಯಂತೆ ಘಟೋತ್ಕಜ ಅಂಥ ಟಗರನ್ನು ಹುಡುಕುತ್ತಾ ಹೊರಟ. ಎಲ್ಲೆಲ್ಲೋ ಹುಡುಕಿದ. ಆದರೆ ಎಲ್ಲಿಯೂ ಸಿಗಲಿಲ್ಲ. ಸಾಕಾಗಿ ಸುಸ್ತಾಗಿ ಒಂದು ಸರೋವರಕ್ಕೆ ನೀರು ಕುಡಿಯಲು ಹೋದ. ನೀರು ಕುಡಿಯಲು ನುಗ್ಗಿದಾಗ ನೀರಿನಲ್ಲಿ ಇವನ ಮುಖದ ಬಿಂಬವನ್ನು ನೋಡಿಕೊಂಡ. ಅವನ ಮುಖದಲ್ಲಿಯೇ ಕೋರೆಮಿಸೆ ಎದುರು ರೋಮ ಇದೆ! ಆಗ ಕೃಷ್ಣ ತನ್ನನ್ನೇ ಆಹುತಿ ಕೇಳಿದ್ದಾನೆ ಎಂದು ಅರ್ಥಮಾಡಿಕೊಂಡು ತನ್ನ ಆಹುತಿಗೆ ನಿರ್ಧರಿಸುತ್ತಾನೆ. ಕೃಷ್ಣನ ಹತ್ತಿರ ಭೀಮ ಘಟೋತ್ಕಜನ ಶಿರಸ್ಸು ಕಡಿಯಲು ಸಿದ್ಧನಾಗುತ್ತಾನೆ.

ಆಗ ಘಟೋತ್ಗಜನ ತನಗೆ ಏನು ಮೋಕ್ಷ ಎಂದು ಕೃಷ್ಣನನ್ನು ಕೇಳುತ್ತಾನೆ. ಆಗ ಕೃಷ್ಣ ಮುಂದಿನ ಜನ್ಮದಲ್ಲಿ ನಾನು ತಿರುಪತಿ ವೆಂಕಟರಮಣನಾಗುತ್ತಾನೆ. ಆಗ ಭೂಲೋಕದ ನನ್ನ ದಾಸರು ಈ ನಿನ್ನ ತಲೆಯನ್ನು ಪೂಜೆ ಮಾಡುತ್ತಾರೆ. ಅದೇ ನಿನಗೆ ಮೋಕ್ಷ, ಎಂದು ಹೇಳುತ್ತಾನೆ" ಈ ಕಾರಣದಿಂದ ದಾಸಪ್ಪಗಳು 'ಅರುಗೆ'ಯನ್ನು ಪೂಜೆ ಮಾಡುತ್ತಾರಂತೆ!

ಈ ಮೇಲಿನ ಐತಿಹ್ಯ ಕರಿಯಣ್ಣನಿಗೆ ಸಂಬಂಧಿಸಿದರೆ, ಕೆಂಚಣ್ಣ ಆ ಕೆಂಚಸೋಮ, ಕೆಂಚಭೂತನ ಕುರಿತು "ಗ್ರಾಮದೇವತೆಯನ್ನು ರಕ್ಷಿಸುವ ಭಂಟರು ಗ್ರಾಮದೇವತೆಯ ಅಂಗರಕ್ಷಕ 'ಸೋಮ' ಎಂಬ ನಂಬಿಕೆಯಂತು ಪ್ರಚಲಿತವಿದೆ[೧೦]" ಈ ಕೆಂಪುಸೋಮ, ಅಥವಾ ಕೆಂಚಣ್ಣ ಸಾತ್ವಿಕಗುಣದ ಪ್ರತೀಕ ; ಕರಿಸೋಮ ತಾಮಸಗುಣದ ಪ್ರತೀಕ ಎಂಬ ಭಾವನೆಯು ಹಳ್ಳಿಗರ ಭಾವನೆಯಾಗಿದೆ. "ದಾಸಯ್ಯಗಳು ಕರಿಯಣ್ಣ, ಕೆಂಚಣ್ಣರನ್ನು ಪೂಜಿಸುವ ಮೊದಲು ದಕ್ಷಿಣಭಾರತದ ಪ್ರಮುಖ ಊರ ಹೆಣ್ಣುದೇವತೆಯಾದ ಮಾರಮ್ಮ ಹಾಗೂ ಇತರ ರೂಪಗಳನ್ನು ಪೂಜಿಸುವರಾಗಿದ್ದು, ತಿರುಪತಿ ವೆಂಕಟರಮಣನನ್ನು ಪೂಜಿಸಲು ಪ್ರಾರಂಭಿಸಿದಂದಿನಿಂದ ಹಳೇ ದೇವತೆ ಕೋಪಗೊಂಡಳು ಎಂಬ ಕಾರಣಕ್ಕೆ ಗ್ರಾಮದೇವತೆಯ ಪ್ರತೀಕವಾದ (ಸೋಮ) 'ಅರುಗೆ'ಯನ್ನು ವೆಂಕಟರಮಣನ ಜೊತೆಗೆ ಪೂಜಿಸಲು ಪ್ರಾರಂಭಿಸಿದಂತೆ ಕಾಣುತ್ತದೆ. ಗ್ರಾಮದೇವತೆಗಳ ಹಬ್ಬದಲ್ಲಿ ಈಗಲೂ 'ಸೋಮ' ಮೆರೆಯುವುದನ್ನು ಸೋಮನಕುಣಿತವನ್ನು ನಾವು ನೋಡಬಹುದಾಗಿದೆ. ಆದ್ದರಿಂದ ದಾಸಪ್ಪನ ತಿರುಪತಿ ದೇವರ ಜೊತೆ ಗ್ರಾಮದೇವತೆಯ ಪ್ರತೀಕವೂ ಸೇರಿದಂತೆ ಆಯಿತು. ಇದರಿಂದ ದಾಸಪ್ಪ ಮೂಲದಲ್ಲಿ ತಿರುಪತಿಯ ಒಕ್ಕಲಾಗಿರಲಿಲ್ಲ ಎನ್ನುವುದು ಸ್ಪಷ್ಟವಾದಂತಾಗುತ್ತದೆ.[೧೧]" "ಮುತ್ತತ್ತಿರಾಯನ ಜೊತೆಗೆ ಈ ಪರಿಸರದಲ್ಲಿರುವ ಗ್ರಾಮೀಣದೇವತೆಯರಿಗೂ ಪೂಜೆ ಸಲ್ಲಿಸಿದಂತೆ ಈ ಅರಿಗೆಗಳಿಂದ ಆಯಿತು. ಮುತ್ತತ್ತಿಯಲ್ಲಿ ಸೋಮನಕುಣಿತ ಜನಪದಕಲೆ ಏನೂ ಕಂಡು ಬರುವುದಿಲ್ಲವಾದರೂ ಇವುಗಳನ್ನು ಹಿಡಿದು ಮಣೇವುಸೇವೆಯ ಸಂದರ್ಭದಲ್ಲಿ ಕುಣಿತವನ್ನು ಕಾಣಬಹುದು. "ಈ ಅರಿಗೆಗಳನ್ನು ಮಾಡಲು ಒಂದು ನಿರ್ದಿಷ್ಟವಾದ ನಿಯಮಗಳಿವೆ" ಇವುಗಳನ್ನು "ರಕ್ತಭೂತಾಳೆ" ಎಂಬ ದೇವಸಂಬಂಧಿ ಮರದಿಂದ ಮಾಡುತ್ತಾರೆ. ನಿರ್ದಿಷ್ಟವಾದ ಮನೆತನದ ವ್ಯಕ್ತಿ ಉಪವಾಸವಿದ್ದು ಈ ಮರವನ್ನು ಕಡಿದು ತಂದು ಮುಖವಾಡವನ್ನು ಸಿದ್ಧಪಡಿಸುತ್ತಾರೆ. ಭೂತಾಳೆ ಮರದಲ್ಲಿರುವ ವಿಶೇಷಶಕ್ತಿ ತುಂಬಾ ಪ್ರಭಾವಶಾಲಿಯಾದುದೆಂಬ ನಂಬಿಕೆಯಿರುವುದರಿಂದ ಮುಖವಾಡವನ್ನು ರಚಿಸುವ ಕಾರ್ಯದಲ್ಲಿ ಎಚ್ಚರಿಕೆವಹಿಸಲಾಗುತ್ತದೆ".[೧೨] ನಂತರ ಇದಕ್ಕೆ ರೂಪಗಳನ್ನು ನೀಡಲಾಗುತ್ತದೆ.

ಮುತ್ತತ್ತಿರಾಯನ ಪರಿಸರದ ಭಕ್ತಸಮೂಹದ ವಲಯದಲ್ಲಿ ಅರಿಗೆಕುಣಿತವೆಂಬ ಜನಪದ ಕಲೆಯು ಒಂದು ಪ್ರಕಾರವಾಗಿ ಪ್ರಚಲಿತವಾಗಿದೆ. "ಬಯಲುಸೀಮೆಯ ಕೆಲವು ಪ್ರದೇಶಗಳಲ್ಲಿ ಪ್ರಚಲಿತವಿರುವ ಸಂಪ್ರದಾಯ 'ಹರಿಗೆಸೇವೆ' ಈ ಸಂದರ್ಭದ ಕುಣಿತವೇ 'ಹರಿಗೆಕುಣಿತ' ಇದನ್ನು 'ಭೂತದ ಸೇವೆ', 'ಕರಿಯಣ್ಣ-ಕೆಂಚಣ್ಣ' ಎಂಬ ಹೆಸರಿನಿಂದಲೂ ಕರೆಯುತ್ತಾರೆ. ಭೂತದ ಸೇವೆ ಮಾಡುವುದರಿಂದ ಗ್ರಾಮಕ್ಕೆ ಒಳ್ಳೆಯದಾಗುತ್ತದೆ ಎಂಬ ನಂಬಿಕೆಯ ಹಿನ್ನೆಲೆಯಲ್ಲಿ ಈ ಕಲೆ ಬೆಳೆದುಬಂದಿದೆ. ವಂಶಪಾರಂಪರ್ಯವಾಗಿ ಬೆಳೆದುಬಂದಿರುವ ಈ ಕಲೆ ಹೆಚ್ಚಾಗಿ ಹಾಲುಮತ ಹಾಗೂ ವಾಲ್ಮೀಕಿ ಮತದವರಲ್ಲಿ ರೂಢಿಯಲ್ಲಿದೆ. ಭಕ್ತರು ಅಪೇಕ್ಷಿಸಿದಾಗ ದೇವರ ಉತ್ಸವ ಹಾಗೂ ವಿಶೇಷ ಸಂದರ್ಭಗಳಲ್ಲಿ ಈ ಕಲೆಯನ್ನು ಪ್ರದರ್ಶಿಸುತ್ತಾರೆ. ಗ್ರಾಮೀಣರು ತಮಗೊದಗಿರುವ ಕಷ್ಟ, ಕಾಯಿಲೆ ವಾಸಿಯಾದರೆ, ಮಕ್ಕಳಾದರೆ ಭೂತರಾಯನನ್ನು ಮನೆಗೆ ಕರೆದುತಂದು ಸೇವೆ ಮಾಡುವುದಾಗಿ ಹರಕೆ ಹೊರುವುದು ಉಂಟು. ಈ ಹಲಗೆಗಳನ್ನು ಹೊರುವ ಕಲಾವಿದರು ಚಡ್ಡಿವೊಂದನ್ನು ಮಾತ್ರ ಧರಿಸಿದ್ದು ಉಳಿದಂತೆ ಬರೀ ಮೈಯಲ್ಲಿದ್ದು, ತಲೆಯ ಕೂದಲನ್ನು ಕೆದರಿಕೊಂಡಿರುತ್ತಾರೆ. ಹಣೆಗೆ ನಾಮವನ್ನು ಎದ್ದುಕಾಣುವಂತೆ ಇಟ್ಟುಕೊಂಡಿದ್ದು ಕಾಲಿಗೆ ಕಾಲಂದಿಗೆ ಹಾಕಿಕೊಂಡು ಬಲಗೈಯಲ್ಲಿ ಕತ್ತಿ ಹಿಡಿದಿರುತ್ತಾರೆ. ಎಡಗೈಯಲ್ಲಿ ಭೂತನ ಹಲಗೆ ಜೊತೆಗೆ ನವಿಲುಗರಿ ಕುಚ್ಚುಯಿರುತ್ತದೆ. ಮತ್ತೊಂದು ಕೈಯಲ್ಲಿ ಗಂಟೆ ಹಿಡಿದಿರುತ್ತಾರೆ[೧೩]"

ಭಕ್ತಾದಿಗಳು ಕರಿಯಣ್ಣ, ಕೆಂಚಣ್ಣನನ್ನು ಊರ ಹೊರಗಿನಿಂದಲೇ ಮೆರವಣಿಗೆಯಲ್ಲಿ ಮನೆಗೆ ಕರೆದುಕೊಂಡು ಬರುತ್ತಾರೆ. ಆ ಸಮಯದಲ್ಲಿ ಹಲಗೆಯನ್ನು ಹೊತ್ತವರಿಗೆ ಪ್ರಜ್ಞೆಯಿರುವುದಿಲ್ಲ. ಅವರ ಮೇಲೆ ಕರಿಯಣ್ಣ, ಕೆಂಚಣ್ಣ ಅವಾಹನೆಯಾಗಿರುತ್ತದೆಂಬ ನಂಬಿಕೆಯಿದೆ. ಅವರು ಆವೇಶದಿಂದ ತಮಟೆ, ಜಾಗಟೆ, ಗತ್ತಿಗೆ ಕುಣಿಯುತ್ತಾ ಬರುತ್ತಾರೆ. ದಾಸಯ್ಯಗಳು ಶಂಖವನ್ನು ಊದುತ್ತಾರೆ. ಮೆರವಣಿಗೆ ಬರುವಾಗ ಅಲ್ಲಲ್ಲಿ 'ಮಣೇವು' ಹಾಕುತ್ತಾರೆ. ಮಣೇವಿನ ಸೇವೆಯೆಂದರೆ ಭೂತರಾಯಗಳಿಗೆ ಭಾರಿ ಉತ್ಸಾಹ. ಆಗ ಅವರ ಕುಣಿತ ಪರಾಕಾಷ್ಠೆಗೆ ಹೋಗುತ್ತದೆ. ಬಾಳೇಹಣ್ಣು, ಕಾಯಿಚೂರು, ಬೆಲ್ಲ, ಹಲಸಿನತೊಳೆ ಇವುಗಳ ಮಿಶ್ರಣದಿಂದ ಮಾಡಿದ ರಸಾಯನವೇ ಮಣೇವಿನ ಪ್ರಸಾದ. ಈ ಪ್ರಸಾದವನ್ನು ಪಾತ್ರೆಗಳಲ್ಲಿ ತುಂಬಿಟ್ಟು, ಹರಿಗೆ ಹಿಡಿದವರಿಗೆ ತಿನಿಸುತ್ತಾರೆ. ಎಷ್ಟು ಕೊಟ್ಟರೂ ಬೇಡ ಎನ್ನದಷ್ಟು ಆವೇಶ ಅವರ ಮೈಮೇಲಿರುತ್ತದೆ.

ಹಲಗೆ ಹಿಡಿಯುವವರು ಪ್ರದರ್ಶನಕ್ಕೆ ಮುನ್ನ ಮೂರು ದಿನ ಉಪವಾಸವಿರುತ್ತಾರೆ. ಆದುದರಿಂದಲೋ ಏನೋ ಇವರು ಪ್ರಸಾದ ತುಂಬಿದ ಪಾತ್ರೆಯೊಳಕ್ಕೆ ಒಂದು ಸಾರಿ ಬಾಯಿ ಇಟ್ಟರೆ ಸಾಕು, ಅದನ್ನು ಪೂರ್ಣವಾಗಿ ತಿಂದುಬಿಡುತ್ತಾರೆ. ಅದೆಲ್ಲ 'ಭಸ್ಮ'ವಾಗುವುದೆಂಬುದು ಅವರ ಹೇಳಿಕೆ! ಹಲಗೆಯನ್ನು ಹೊತ್ತವರು ಕುಣಿಯುತ್ತಾ ಭಕ್ತರ ಮನೆಯ ಬಾಗಿಲಿಗೆ ಬಂದಾಗ ಭಕ್ತರು ಹರಕೆಯ ಕೋಳಿ ಕೊಡುವುದುಂಟು, ಗಂಧದಕಡ್ಡಿ ಹಚ್ಚಿ ಬೆಳಗುವುದುಂಟು. ಈ ಸೇವೆ ಆದ ನಂತರವೇ ಅವರಿಗೆ ಪ್ರಜ್ಞೆ ಬರುವುದು. 'ಕರಿಯಣ್ಣ', 'ಕೆಂಚಣ್ಣ'ನನ್ನು ಭಕ್ತರು ಒಂದು ರಾತ್ರಿ ಮನೆಯಲ್ಲಿರಿಸಿಕೊಂಡು ಪೂಜೆ ಸಲ್ಲಿಸಿ ಹರಕೆ ಒಪ್ಪಿಸಿ ಮಾರನೇಯ ದಿನ ಕಳುಹಿಸಿಕೊಡುತ್ತಾರೆ.

ಭೂತಗಳು ಮೈಮೇಲೆ ಬಂದಾಗ ಭಕ್ತರು ಅಪ್ಪಣೆ ಕೇಳುತ್ತಾರೆ. ಆಗ ನುಡಿದುದೆಲ್ಲವು ಸತ್ಯವಾಗುತ್ತದೆ ಎಂಬ ನಂಬಿಕೆಯಿದೆ. ಭಕ್ತರು ಇಚ್ಚಿಸಿದಾಗ, ಅನುಕೂಲವಾದಾಗ ಈ ಪ್ರದರ್ಶನಕಲೆ ನಡೆಯುತ್ತದೆ. ಮುತ್ತತ್ತಿರಾಯನ ಭಕ್ತರಿಂದ ಕರಿಯಣ್ಣ, ಕೆಂಚಣ್ಣರಿಂದ ಒಳ್ಳೆಯದಾಗುತ್ತದೆ ಎಂಬ ಭಾವನೆಯಿಂದ ಇದನ್ನು ಏರ್ಪಡಿಸುತ್ತಾರೆ. ಮುತ್ತತ್ತಿಯೇ ಅಲ್ಲದೆ ಪಾದ್ದಾರೆ, ಸೋಮನಕೆರೆಗುಡಿ, ಕಂಬದರಾಯನಗುಡಿಯಲ್ಲೆಲ್ಲಾ ಕರಿಯಣ್ಣ, ಕೆಂಚಣ್ಣ ಹರಿಗೆಗಳನ್ನು ಕಾಣಬಹುದಾಗಿದೆ.

## ೩.೩ ಹುಲಿವಾಹನ ಮಾಡುವುದು

ಪ್ರಾಚೀನ ಕಾಲದಿಂದಲೂ ಹಿಂದೂಧರ್ಮದ ದೇವತೆಗಳಿಗೆ ವಾಹನಗಳಿರುವುದು ವೇದ, ಪುರಾಣಗಳಿಂದ ತಿಳಿದುಬಂದಿದೆ. ಶಿವನಿಗೆ ನಂದಿ, ವಿಷ್ಣುವಿಗೆ ಗರುಡ, ಕಾರ್ತಿಕೇಯನಿಗೆ ಮಯೂರ, ಗಣೇಶನಿಗೆ ಇಲಿ, ದುರ್ಗೆಗೆ ಸಿಂಹ ಇತ್ಯಾದಿ. ಅದರಂತೆಯೇ ಪ್ರತಿಯೊಂದು ದೈವಕ್ಕೂ ಭಕ್ತರು ವಾಹನವೊಂದನ್ನು ಇರಿಸಿ, ದೇವರನ್ನು ವಾಹನಗಳ ಮೇಲೆ ಕೂಡಿಸಿ ಮೆರವಣಿಗೆ, ಉತ್ಸವಗಳನ್ನು ಮಾಡುತ್ತಾರೆ. ಸುವ್ಯವಸ್ಥಿತವಾದ ದೇವಾಲಯಗಳಲ್ಲಿ ನಾವು ಇಂದಿಗೂ ಶುಕ, ಗರುಡ, ಆಶ್ವ, ಆನೆ, ಮುಂತಾದ ವಾಹನಗಳನ್ನು ಕಾಣಬಹುದಾಗಿದೆ. ದಕ್ಷಿಣಭಾರತದಲ್ಲಿ ವನ್ಯಜೀವಿಗಳಲ್ಲಿ ಸಿಂಹದ ನಂತರ ಹುಲಿಗೆ ಬಲಿಷ್ಠಸ್ಥಾನವಿದೆ. ಏಕೆಂದರೆ ಸಿಂಹ ಈಗ ದುರ್ಲಭ. ಆದುದರಿಂದಲೇ ತಮ್ಮ ಆರಾಧ್ಯದೈವಗಳ ಹುಲಿ ಶಕ್ತಿಗಿಂತಲೂ ಪ್ರಬಲವೆಂದು ಪರಿಗಣಿಸಿ ದೈವಗಳಿಗೆ ಹುಲಿವಾಹನವನ್ನು ನೀಡಿದ್ದಾರೆ. ತಮ್ಮ ಆರಾಧ್ಯದೈವ ಹುಲಿಯ ಮೇಲೆ ಸಂಚಾರವನ್ನು ಮಾಡುತ್ತಾನೆ ಎಂಬ ನಂಬಿಕೆಯನ್ನು ಇರಿಸಿಕೊಂಡಿದ್ದಾರೆ. ಅವನು ಹುಲಿಯನ್ನು ಕಟ್ಟಿಹಾಕಿ ಪಳಗಿಸುವ ಶಕ್ತಿಯನ್ನು ಉಳ್ಳವನಾಗಿದ್ದಾನೆ ಎಂದು ನಂಬಿದ್ದಾರೆ. ಕರ್ನಾಟಕದ ಶೈವ, ವೈಷ್ಣವ ಸಂಬಂಧಿ ಬಹುತೇಕ ದೈವಗಳಲ್ಲಿ ಹುಲಿವಾಹನವನ್ನು ಕಾಣಬಹುದಾಗಿದೆ. ಚಾಮರಾಜನಗರ ಜಿಲ್ಲೆಯ ಮಲೆಮಹದೇಶ್ವರ, ಮಂಟೇಸ್ವಾಮಿ ಹಾಗೂ ಸಿದ್ಧಾಪ್ಪಾಜಿ ದೇವರುಗಳಿಗೂ ಸಹ ಹುಲಿಯ ವಾಹನವಿರುವುದು ಗಮನಾರ್ಹವಾಗಿದೆ.

ಮುತ್ತತ್ತಿಯ ಮುತ್ತತ್ತಿರಾಯನಿಗೂ ಹುಲಿವಾಹನವಿದೆ. ಅಲ್ಲದೆ ಪಾದ್ದಾರೆಯ ಪಾದ್ದಾರಯ್ಯನಿಗೂ, ಸೋಮನಕೆರೆಯಲ್ಲಿರುವ ಮುತ್ತತ್ತಿರಾಯನಿಗೂ, ಸಂಭಾಪುರದಲ್ಲಿರುವ ಕಂಬದರಾಯನಿಗೂ ಹುಲಿವಾಹನವಿದೆ. ಇದನ್ನು ಮಹಿಳೆಯರು ತಮ್ಮ ಜನಪದ ಗೀತೆಗಳಲ್ಲಿ

"ಯಾರಿಗೆ ಒಲಿದೇಯೋ ಮುತ್ತತ್ತಿರಾಯ ವಾನನಿಗೊಲಿದೇಯೋ"

ಎಂದು ಹಾಡುತ್ತಾರೆ. ಈ ಹುಲಿವಾಹನವನ್ನು ಮಾಡುವುದಕ್ಕೆ ನಿರ್ದಿಷ್ಟವಾದ ಕೆಲವು ಕ್ರಮಗಳಿವೆ. ಇದನ್ನು ಅನುಸರಿಸಿ ಹುಲಿವಾಹನವನ್ನು ರಚಿಸಿದರೆ ದೀರ್ಘಕಾಲ ಬಾಳಿಕೆ ಬರುತ್ತದೆ. ಮುತ್ತತ್ತಿ, ಪಾದ್ದಾರೆ ಮತ್ತು ಇತರ ಸ್ಥಳಗಳಿಗೆ ಹುಲಿವಾಹನವನ್ನು ಕನಕಪುರದ ಬಳಿಯ ಅಂಗಾಚಾರಿದೊಡ್ಡಿಯ

ಚೆನ್ನಾಚಾರ್‌ರವರು ಮಾಡಿಕೊಡುತ್ತಾ ಬಂದಿದ್ದಾರೆ. ವಾಹನದ ಮೇಲಿನ ಪ್ರಭಾವಳಿ ಹಾಗೂ ಉತ್ಸವಮೂರ್ತಿಯನ್ನು ಸಹ ಇವರೇ ಮಾಡಿಕೊಟ್ಟಿದ್ದಾರೆ. ತಮ್ಮ ಪರಂಪರೆಯಿಂದ ಬಂದ ಕಸುಬಾದ್ದರಿಂದ ಇದನ್ನು ಮುಂದುವರೆಸಿಕೊಂಡು ಬರುತ್ತಿದ್ದಾರೆ. ಬಚ್ಚಲಿಕೆ, ಕೆಂದಾಳೆ, ಬಿಳಿದಾಳೆ ಇಲ್ಲವೇ ಪಾರಿವಾಳ ಮರಗಳಲ್ಲಿ ಒಂದನ್ನು ಆಯ್ದುಕೊಂಡು ಹುಲಿಯ ರೂಪವನ್ನು ಕೆತ್ತುತ್ತಾರೆ. ಎಂಟು ದಿನ ನೆನೆಸಿದ ಹುಣಿಸೇಬೀಜವನ್ನು ರುಬ್ಬಿ ಸರಿಮಾಡಿಕೊಂಡು ಮರದ ಹುಲಿಯ ಮೇಲೆ ಲೇಪಿಸುತ್ತಾರೆ. ನಂತರ ಮೇಲ್ಗಡೆಗೆ ಹತ್ತಿ ಬಟ್ಟೆಯನ್ನು ಹಾಕುತ್ತಾರೆ, ಬಾಲಕ್ಕೆ ಕೊಳವೆಯೊಂದನ್ನು ಮಾಡಿ ಬಟ್ಟೆ ಸುತ್ತಿ ಜೋಡಿಸುತ್ತಾರೆ. ನೇತ್ರಗಳಿಗೆ ದಪ್ಪನೆಯ ಗೋಲಿಗಳನ್ನು ಜೋಡಿಸಿ ನಂತರ ಕೆಂಪು, ಹಳದಿ, ಬಿಳಿ ಬಣ್ಣಗಳನ್ನು ಬಳಿದು ಮರದ ಹಲಗೆಗೆ ಜೋಡಿಸಿ ಉತ್ಸವ ಕೊಂಡ್ಯೊಯಲು ಅನುಕೂಲವಾಗುವಂತೆ ಮಾಡುತ್ತಾರೆ. ನಾಲ್ಕು ಅಂಗುಲಗಳಿಂದ ಹಿಡಿದು ನಾಲ್ಕು ಅಡಿಗೂ ಹುಲಿವಾಹನವನ್ನು ಮಾಡುತ್ತಾರೆ. ಆದರೂ ಮುತ್ತತ್ತಿ, ಪಾದ್ದಾರೆ, ಸೋಮನಕೆರೆ, ಸಂಭಾಪುರದ ಕಂಬದರಾಯ ದೇವಾಲಯಗಳಲ್ಲಿರುವುದು ನಾಲ್ಕು ಅಡಿಗಳ ಹುಲಿವಾಹನವೇ ಆಗಿವೆ.

ದೇವಾಲಯದ ಆವರಣದಲ್ಲಿ ಇವುಗಳನ್ನು ಇಟ್ಟಿರುತ್ತಾರೆ. ವಿಶೇಷ ಪೂಜಾ ಸಂದರ್ಭಗಳಲ್ಲಿ ಇದನ್ನು ಹೊರತೆಗೆಯುತ್ತಾರೆ. ಮುತ್ತತ್ತಿಯಲ್ಲಿನ ಹುಲಿವಾಹನ ಸಮೇತ ದೇವರ ಉತ್ಸವವನ್ನು ಮಾಡಿಸುವುದಕ್ಕೆ ಭಕ್ತರು ವಾಹನವನ್ನು ಎತ್ತಿಸುವುದು ಎಂದು ಕರೆಯುತ್ತಾರೆ. ಈಗ ದೇವಾಲಯವು ಮುಜರಾಯಿ ಇಲಾಖೆಗೆ ಸೇರಿರುವುದರಿಂದ ವರ್ಷಕ್ಕೊಮ್ಮೆ ಟೆಂಡರ್ ಅನ್ನು ಕರೆಯಲಾಗುತ್ತದೆ. ಟೆಂಡರ್ ಪಡೆದವರು ಎರಡು ಬಗೆಯ ರಸೀದಿಗಳನ್ನು ಮುದ್ರಿಸಿರುತ್ತಾರೆ. ದೇವಾಲಯದ ಸುತ್ತ ವಾಹನ ಉತ್ಸವ ಮಾಡಿಸುವುದು ಹಾಗೂ ನದಿ ತೀರದವರೆಗೆ ವಾಹನ ಉತ್ಸವವನ್ನು ಮಾಡಿಸುವುದು. ಭಕ್ತರು ತಮ್ಮ ಆರ್ಥಿಕ ಸಾಮರ್ಥ್ಯದ ಅನುಗುಣವಾಗಿ ಹಣ ನೀಡಿ ವಾಹನವನ್ನು ಎತ್ತಿಸುತ್ತಾರೆ. ಹಲವಾರು ಜನರು ಉತ್ಸವಮೂರ್ತಿಯಿರುವ ವಾಹನವನ್ನು ಗೋವಿಂದ ಹೇಳುತ್ತಾ ಹೆಗಲ ಮೇಲೆ ಎತ್ತಿಯಿರಿಸಿಕೊಳ್ಳುತ್ತಾರೆ. ಆಗ ಭಕ್ತರು ಲಿಂಗಭೇದವಿಲ್ಲದೆ ನೆಲದ ಮೇಲೆ ಉರುಳುತ್ತಾರೆ. ವಾಹನ ಹೊತ್ತವರು ಇವರನ್ನು ದಾಟಿ ನಡೆಯುತ್ತಾರೆ. ಹುಲಿವಾಹನ ರೂಢನಾದ ಮುತ್ತತ್ತಿರಾಯ ತಮ್ಮನ್ನು ದಾಟಿಕೊಂಡು ಹೋದರೆ ಪಾವಿತ್ರ್ಯ ಲಭಿಸುತ್ತದೆ, ಪಾಪಗಳೆಲ್ಲಾ ತೊಳೆಯುತ್ತದೆ ಎಂಬ ನಂಬಿಕೆ ಭಕ್ತರದು. ಇವರು ತಮಗೆ ಮನೆಗಳಲ್ಲಿ ಕಷ್ಟಗಳು ಅಡ್ಡಿಆತಂಕಗಳು ಎದುರಾದಾಗ ಮುತ್ತತ್ತಿರಾಯನ ವಾಹನವನ್ನು ಎತ್ತಿಸುತ್ತೇವೆ ಎಂದು ಹಣವನ್ನು ಮೀಸಲು ಬಟ್ಟೆಯಲ್ಲಿ ಕಟ್ಟಿ ಹರಕೆಯನ್ನು

ಕಟ್ಟಿಕೊಳ್ಳುತ್ತಾರೆ. ಹಾಗೆಯೇ ತಮ್ಮ ಶಕ್ತ್ಯಾನುಸಾರ ಇಲ್ಲಿಗೆ ಬಂದು ವಾಹನವನ್ನು ಎತ್ತಿಸಿ ತಮ್ಮ ಹರಕೆಯನ್ನು ಪೂರೈಸಿಕೊಳ್ಳುತ್ತಾರೆ.

ವಾಹನದಲ್ಲಿ ಉತ್ಸವಮೂರ್ತಿ ಬರುವಾಗ ಮಣೇವುಸೇವೆಯು ಸಹ ಜರುಗುತ್ತಿರುತ್ತದೆ. ಈ ವೇಳೆಯಲ್ಲಿ ಮಹಿಳೆಯರಿಂದ ಮುತ್ತತ್ತಿರಾಯನ ಜನಪದಗೀತೆಗಳ ಗಾಯನವು ಸಹ ನಡೆಯುತ್ತಿರುತ್ತದೆ. ಭಕ್ತರು ತಮ್ಮ ಮಕ್ಕಳಿಗೆ ಒಳ್ಳೆಯದಾಗಲಿ ಎಂಬ ಉದ್ದೇಶದಿಂದ ವಾಹನ ಹೊತ್ತವರ ಕಾಲುಕೆಳಗೆ ಮಲಗಿಸುತ್ತಾರೆ. ದವನ ಮತ್ತು ಬಾಳೆಯ ಹಣ್ಣನ್ನು ಈ ಸಂದರ್ಭದಲ್ಲಿ ದೇವರಿಗೆ ಎಸೆಯುವ ಮೂಲಕ ಅರ್ಪಿಸುತ್ತಾರೆ. ಜಾತ್ರೆಯ ವೇಳೆಯಲ್ಲಿ ಹುಲಿವಾಹನ ಉತ್ಸವದ ಮುಂದೆಯೇ ಕಾಯಿ ಚಚ್ಚುವ ಕ್ರೀಡೆ ಜರುಗುತ್ತಿರುತ್ತದೆ. ಹೊಳೆಯ ತೀರದವರೆಗೂ ಉತ್ಸವ ಮತ್ತು ಕಾಯಿ ಚಚ್ಚುವ ಕ್ರೀಡೆಗಳು ಜರಗುತ್ತವೆ.

## ೩.೪ ಪಾದರಕ್ಷೆ

ಭಗವಂತನ ಪಾದ ಮತ್ತು ಪಾದರಕ್ಷೆಗಳಿಗೆ ಭಾರತೀಯ ಭಕ್ತರು ಒಂದು ಪೂಜ್ಯನೀಯವಾದ ಸ್ಥಾನವನ್ನು ನೀಡಿದ್ದಾರೆ. ಇವರಿಗೆ ದೇವರಪಾದ-ಪಾದರಕ್ಷೆಗಳನ್ನು ಕಂಡರೆ ಅತೀವಭಕ್ತಿ, ಅದಕ್ಕಾಗಿಯೇ ಅವಕಾಶ ಬಂದಾಗಲೆಲ್ಲಾ ಪಾದ-ಪಾದರಕ್ಷೆಗಳನ್ನು ರೂಪಿಸಿ ಅದನ್ನು ಪೂಜಿಸುತ್ತಾರೆ. ಕರ್ನಾಟಕದಲ್ಲಿಯೂ ಈ ಪದ್ಧತಿ ಎಲ್ಲಾ ಮತಗಳಲ್ಲಿಯೂ ಇದ್ದು, ಕಲ್ಲಿನ ಮೇಲೆಯೋ, ಲೋಹದಿಂದಲೋ ಅಥವಾ ಚರ್ಮದಿಂದಲೋ ಪಾದ-ಪಾದರಕ್ಷೆಗಳನ್ನು ತಯಾರಿಸುತ್ತಾರೆ. ಇದನ್ನು ನಮಸ್ಕರಿಸಿದರೆ ದೇವರನ್ನೇ ನಮಸ್ಕರಿಸಿದಂತೆ ನಂಬಿಕೆ, ಭಕ್ತಿಯನ್ನು ಇರಿಸಿಕೊಂಡಿದ್ದಾರೆ. ಪ್ರಮುಖ ದೇವಾಲಯಗಳೆಲ್ಲಾ ನಾವು ಪಾದ ಹಾಗೂ ಪಾದರಕ್ಷೆಗಳನ್ನು ಕಾಣಬಹುದು. ಇವು ಅಳತೆಯಲ್ಲಿ ಸುಮಾರು ಅರ್ಧಅಡಿ ಎತ್ತರದಿಂದ ಎರಡೂವರೆ ಅಡಿಗಳವರೆಗೂ ಕಾಣಬಹುದು. ಕನಕಪುರ ತಾಲ್ಲೂಕಿನ ಹರಿಹರ ಗ್ರಾಮದ ಬಳಿಯಲ್ಲಿನ ಕುಪ್ಪೆದೊಡ್ಡಿ ಬಳಿಯ ಲಿಂಗದಗುಡಿಯ ಸಮೀಪದಲ್ಲಿ ಹುಟ್ಟು ಬಂಡೆಯೊಂದರ ಮೇಲೆ ಶಿಲಾಪಾದುಕೆಗಳನ್ನು ಕೆತ್ತಲಾಗಿದೆ. ವೃತ್ತಾಕಾರದ ಪೀಠದ ಮಧ್ಯೆ ಪಾದುಕೆಗಳನ್ನು ಕೆತ್ತಲಾಗಿದ್ದು, ಜಲದಿಂದ ಪಾದುಕೆ ಶುಭ್ರಮಾಡಲು ನೀರು ಹೊರಹೋಗಲು ವ್ಯವಸ್ಥೆ ಮಾಡಲಾಗಿದೆ. ಇದನ್ನು ಭಕ್ತರು ಪ್ರಸ್ತುತ 'ಹೆಬ್ಬೆಟ್ಟರಾಯನಪಾದ' ಎಂದು ಕರೆಯುತ್ತಾರೆ.

ಮುತ್ತತ್ತಿಯ ಮುತ್ತುರಾಯನ ಪಾದಗಳು ಹನುಮನಗುಂಡು, ಪಾದ್ದಾರೆ ಅಲ್ಲಿನ ಕಮರಿ ಹಾಗೂ ಮುಳಬಾಗಿಲುಗಳಲ್ಲಿ ಇವೆ ಎಂದು ನಂಬುವ ಭಕ್ತರು ದೇವರಿಗೆ ಆರಂಭದಿಂದಲೂ ತೊಗಲಿನ ಪಾದರಕ್ಷೆಗಳನ್ನು ಅರ್ಪಿಸುತ್ತಾ ಬಂದಿದ್ದಾರೆ. ಮುತ್ತತ್ತಿ ಹಾಗೂ ಪಾದ್ದಾರೆಗಳೆರಡರಲ್ಲೂ ಈ ಪಾದರಕ್ಷೆಗಳ ಆಶೀರ್ವಚನವನ್ನು ·ಕಾಣಬಹುದಾಗಿದೆ. ಆರಂಭದಿಂದಲೂ ಈ ಪಾದರಕ್ಷೆಗಳನ್ನು ಮಾದಿಗ ಜನಾಂಗದವರು ಮಾಡಿ ಕಾಣಿಕೆಯಾಗಿ ಅರ್ಪಿಸುತ್ತಾ ಬಂದಿದ್ದಾರೆ. ಭಕ್ತಿ, ಶ್ರದ್ಧೆ ಹಾಗೂ ನಿಷ್ಠೆಯಿಂದ ಮುತ್ತತ್ತಿರಾಯನಿಗೆ ನಡೆದುಕೊಳ್ಳುವ ಅಲಸೂರು, ನಾಯಕನಹಳ್ಳಿ, ಮಳವಳ್ಳಿ, ಬಾಳೆಹೊನ್ನಿಗ ಹಾಗೂ ಬೂದನೂರಿನ ಇವರ ಸ್ವಾಮಿಯಾದ ಮುತ್ತತ್ತಿರಾಯನು ಸ್ವಪ್ನದಲ್ಲಿ ಕಾಣಿಸಿಕೊಂಡು ತನಗೆ ಪಾದರಕ್ಷೆ ಆಗಬೇಕು ಎಂದು ತಿಳಿಸಿದಾಗ ಎಲ್ಲ ಒಟ್ಟಾಗಿ ಊರಿನ ಹೊರಗೆ ಬಿಡಾರವನ್ನು ಹೂಡುತ್ತಾರೆ. ಎಲ್ಲರೂ ಸ್ನಾನಮಾಡಿ, ಮಡಿಬಟ್ಟೆಗಳನ್ನು ಧರಿಸುತ್ತಾ ಯಾವುದೇ ಪ್ರಾಣಿಯು ಮುಟ್ಟಿರದ ಅಂದರೆ ತಿನ್ನಲು ಪ್ರಯತ್ನಿಸದೆ ಇರುವ ಗೋವನ್ನು ಹಿಡಿದು ಅದರ ಚರ್ಮವನ್ನು ತಮ್ಮ ಚರ್ಮಪ್ರಸಾದನ ಕರ್ಮಕ್ಕೆ ಅನುಸರಿಸಿ ಎರಡು ಅಡಿ ಎತ್ತರ ಹಾಗೂ ಒಂದು

ಅಡಿ ಅಗಲದ ಪಾದರಕ್ಷೆಯನ್ನು ತಯಾರಿಸುತ್ತಾರೆ. ಇದನ್ನು ದೇವಾಲಯಕ್ಕೆ ತಂದು ಭಕ್ತಿಪೂರ್ವಕವಾಗಿ ಪೂಜಿಸಿ ದೇವರಿಗೆ ಅರ್ಪಿಸುತ್ತಾರೆ. ಹಿಂದೆ ಮುತ್ತತ್ತಿಯ ಗುಡಿಯಲ್ಲಿ ಹಜಾರದಲ್ಲಿನ ತೊಲೆಯ ಮೇಲೆ ಇವುಗಳನ್ನು ಇಡುತ್ತಿದ್ದರು. ಭಕ್ತರು ಬಂದು ಆಶೀರ್ವಚನವನ್ನು ಬೇಡಿದಾಗ ಅವರ ಶಿರಕ್ಕೆ ಪಾದರಕ್ಷೆಗಳಿಂದ ಮುತ್ತತ್ತಿರಾಯನ ಹೆಸರಿನಿಂದ ಆಶೀರ್ವಚನ ನೀಡುತ್ತಿದ್ದರು. ತಮ್ಮಡಿಗಳು, ಭಕ್ತರ ರೋಗರುಜಿನ, ದೆವ್ವ-ಪೀಡೆಗಳ ನಿವಾರಣೆಗಾಗಿ ಕಾಣಿಕೆ ಪಡೆದು ಪಾದರಕ್ಷೆಯ ತುಣುಕುವೊಂದನ್ನು ಕೊಡುತ್ತಿದ್ದರು. ಭಕ್ತರು ಈ ತುಣುಕನ್ನು ಕೊರಳಿಗೋ, ತೋಳಿಗೊ, ಹಾಗೂ ನಡುವಿಗೂ ದಾರದಿಂದ ಕಟ್ಟಿಕೊಳ್ಳುತ್ತಿದ್ದರು. ಪ್ರಸ್ತುತ ಪಾದರಕ್ಷೆಗಳ ಆರಾಧನೆಯನ್ನು ಇಲ್ಲಿ ನಿಲ್ಲಿಸಲಾಗಿದ್ದು, ಸ್ವಚ್ಚತೆಗೆ ಆದ್ಯತೆ ಎಂಬ ಕಾರಣವನ್ನು ನೀಡಲಾಗಿದೆ. ಕ್ರಿ.ಶ. ೧೯೮೬ರವರೆಗೂ ಈ ಭಕ್ತಿ ಅರ್ಪಣೆ ನಡೆದುಕೊಂಡು ಬಂದಿದ್ದು, ಈಗ ಇಲ್ಲವಾಗಿದೆ. ಜನಪದ ಭಕ್ತರಲ್ಲಿ ನಾವು ಪಾದರಕ್ಷೆಗಳಿಂದ ಆಶೀರ್ವಚನ ಪಡೆಯುವುದನ್ನು ಕಂಡರೆ ಮುಂದುವರೆದ ದೇವಾಲಯಗಳಲ್ಲಿ ಕಿರೀಟಗಳಿಂದ ಆಶೀರ್ವಚನ ಪಡೆಯುವುದನ್ನು ಗಮನಿಸಬಹುದು. ಇದಕ್ಕಾಗಿಯೇ ಬೆಳ್ಳಿಯ ಮುಕುಟಗಳನ್ನು ಮಾಡಿಸಿರುತ್ತಾರೆ. ತಾವು ಮಾಡಿರುವ ಪಾದರಕ್ಷೆಗಳನ್ನು ದೇವರ ಮುಂದೆ ಇಟ್ಟಾಗ ದೇವರು ರಾತ್ರಿಯಲ್ಲ ಅದನ್ನು ಧರಿಸಿಕೊಂಡಿರುವ ಕುರುಹುಗಳನ್ನು ಕಂಡುಕೊಳ್ಳುತ್ತಾರೆ. ಈಗ ವೆಚ್ಚದ ನಿರ್ವಾಹಣೆ ಕಷ್ಟವಾಗಿರುವಾಗ ಪಾದರಕ್ಷೆ ಅರ್ಪಣೆಯನ್ನು ಇವರು ನಿಲ್ಲಿಸಿದ್ದಾರೆ.

## ೩.೫ ಉರುಳುಸೇವೆ

ಭಕ್ತರು ದೇವರಿಗೆ ಸಲ್ಲಿಸುವ ಸೇವೆಗಳಲ್ಲಿ ಉರುಳುಸೇವೆಯು ಒಂದು. ಹಿಂದೂಧರ್ಮದ ಎಲ್ಲ ದೇವತೆಗಳಿಗೂ ಈ ರೀತಿಯ ಸೇವೆ ನಡೆಯುತ್ತದೆ. ಭಕ್ತರು ತಮ್ಮ ಭಕ್ತಿಯನ್ನು ದೇವರಿಗೆ ತೋರಿಸಲು ಅವನಿಂದ ಅನುಗ್ರಹ ಪಡೆಯಲು ಹಾಗೂ ತಮ್ಮ ಕಷ್ಟಗಳಿಗೆ ಮೊರೆಹೋಗಲು ಉರುಳುಸೇವೆಯ ಮೊರೆಹೋಗುತ್ತಾರೆ. ಇದರಿಂದ ದೇವರು ಸಂಪ್ರೀತನಾಗುತ್ತಾನೆ. ತಮ್ಮ ಕಷ್ಟಗಳನ್ನು ಆಲಿಸಿ ನಿವಾರಿಸುತ್ತಾನೆ ಎಂಬ ನಂಬಿಕೆ ಜನತೆಯದು. ಕಷ್ಟಗಳಿಂದ ಬಳಲಿಹೋದ ಭಕ್ತರು ತಮ್ಮ ಕೋರಿಕೆ ಈಡೇರಿದರೆ ಮುತ್ತತ್ತಿರಾಯನಿಗೂ ಉರುಳುಸೇವೆ ಮಾಡುವುದಾಗಿ ಹರಕೆ ಕಟ್ಟುತ್ತಾರೆ. ಅರಿಶಿನ ಬಟ್ಟೆಯಲ್ಲಿ ಹಣವೊಂದನ್ನು ಬಿಗಿದುಕಟ್ಟಿ ಮನೆಯ ಪವಿತ್ರಸ್ಥಳದಲ್ಲಿ ಇಡುತ್ತಾರೆ ಹಾಗೂ ನಿರ್ದಿಷ್ಟ ಸಮಯದಲ್ಲಿ ಮುತ್ತತ್ತಿಗೆ ಬಂದು ಇಲ್ಲಿನ ಕಾವೇರಿ ನದಿಯಲ್ಲಿ ಮಿಂದು ಅಗರಬತ್ತಿಯನ್ನು ಕರಗಳಲ್ಲಿ ಹಿಡಿದುಕೊಂಡು ತಮ್ಮ ಶಕ್ತ್ಯಾನುಸಾರ ಅಂದರೆ ಹೊಳೆಯ ತೀರದಿಂದಲೋ ಅಥವಾ ದೇವಾಲಯದ ಸುತ್ತಲೋ ಉರುಳುತ್ತಾ ತಮ್ಮ ಭಕ್ತಿ, ನಿಷ್ಠೆ ಮತ್ತು ಶ್ರದ್ಧೆಗಳನ್ನು ಪ್ರದರ್ಶಿಸುತ್ತಾರೆ. ಸ್ತ್ರೀ-ಪುರುಷರೇ ಅಲ್ಲದೆ ಪುಟ್ಟಮಕ್ಕಳು ಸಹ ಈ ಉರುಳುಸೇವೆಯಲ್ಲಿ ಪಾಲ್ಗೊಳ್ಳುತ್ತಾರೆ.

ದೆವ್ವ-ಪೀಡೆಗಳಿಂದ ಬಾಧಿಸಿದವರನ್ನು ಇಲ್ಲಿಗೆ ಕರೆದುಕೊಂಡು ಬಂದು ಕಾವೇರಿಯಲ್ಲಿ ಮೀಯಿಸಿ ಉರುಳುಸೇವೆಗೆ ತೊಡಗಿಸಿದಾಗ ಅವರು ಮುತ್ತತ್ತಿರಾಯನಿಗೆ ಹೆದರಿದವರಂತೆ ದೆವ್ವ-ಭೂತಗಳು ತಮ್ಮ ಮೈಮೇಲಿದ್ದು ಮತ್ತೆಂದೂ ಇಲ್ಲಿಗೆ ಬರುವುದಿಲ್ಲ ಎಂಬಂತಹ ಅತೀಮಾನುಷವಾದ ವರ್ತನೆಗಳನ್ನು ಮಾಡುತ್ತಾರೆ. ದೇವರಿಗೆ ಮುಡಿ ನೀಡಿ ಬಂದವರು ಹೀಗೆ ಉರುಳುಸೇವೆಯನ್ನು ಮಾಡಿ ತಮ್ಮ ಕಾಣಿಕೆಯನ್ನು ಪೂರೈಸುತ್ತಾರೆ. ಈ ವೇಳೆಯಲ್ಲಿ ಮುತ್ತತ್ತಿರಾಯನ ಪಾದಕ್ಕೆ ಗೋವಿಂದ, ಗೋವಿಂದ, ಪಾದಾರಪ್ಪನ ಪಾದಕ್ಕೆ ಗೋವಿಂದ, ಗೋವಿಂದ ಎಂಬ ಉದ್ಘೋಷಗಳನ್ನು ಕೂಗುತ್ತಿರುತಾರೆ. ತದನಂತರ ದೇವಾಲಯದ ಒಳಗೆ ದೇವರನ್ನು ಪೂಜಿಸಿ ತೀರ್ಥಪಡೆದು ಮರಳಿ ಕಾವೇರಿ ನದಿಗೆ ಬಂದು ಸ್ನಾನ ಮಾಡಿ ಮಡಿವಸ್ತ್ರಗಳನ್ನು ತೊಡುತ್ತಾರೆ. ಈ ಬಗೆಯ ಮಾನಸಿಕ ಸಮಾಧಾನಗಳಿಂದ ಭಕ್ತರು ತಮ್ಮ ಕಷ್ಟಕಾರ್ಪಣ್ಯಗಳಿಗೆ ಪರಿಹಾರವನ್ನು ಕಂಡುಕೊಳ್ಳುತ್ತಾರೆ. ದೇವರಿಗೆ ಪ್ರಿಯವಾದ ಶನಿವಾರ, ಶ್ರಾವಣಮಾಸದ ಶನಿವಾರಗಳು ಅಲ್ಲದೆ ಜಾತ್ರೆಯ ವೇಳೆಯಲ್ಲಿ ಉರುಳುಸೇವೆ ಮಾಡುತ್ತಿರುವ ಹಲವಾರು ಭಕ್ತರನ್ನು ಕಾಣಬಹುದಾಗಿದೆ.

ಸಹಜವಾಗಿ ನಡೆದುಬಂದು ದೇವರಲ್ಲಿ ಮೊರೆಯಿಡುವುದಕ್ಕಿಂತ ಉರುಳಿ ಬಂದು ಬೇಡಿದರೆ ಭಕ್ತರ ಮೇಲೆ ಭಗವಂತ ಶೀಘ್ರವಾಗಿ ಕರುಣೆತೋರಿ ಇಷ್ಟಾರ್ಥಗಳನ್ನು ನೆರವೇರಿಸುತ್ತಾನೆ ಎಂಬ ಆಶಯ ಈ ಸೇವೆಯ ಹಿಂದೆ ಅಡಗಿದೆ.

## ೩.೬ ಹರಕೆಗಳು

ತಮ್ಮ ಮನದ ಇಷ್ಟಾರ್ಥಗಳನ್ನು ಈಡೇರಲು ಭಕ್ತರು ಭಗವಂತನಲ್ಲಿ ಮೊರೆ ಇಡುವುದು ಸಾಮಾನ್ಯ. ಹೀಗೆ ಭಕ್ತನು ಬಂದು ದೇವರ ಸನ್ನಿಧಿಯಲ್ಲಿ ದೇವರಿಗೆ ಪ್ರಿಯವಾಗುವ ಸೇವೆ, ಕಾಣಿಕೆಗಳನ್ನು ಅರ್ಪಿಸಿದಾಗ ಅದು ಹರಕೆಯಾಗುತ್ತದೆ. ಭಗವಂತನು ಇದಕ್ಕೆ ಬದಲಾಗಿ ಭಕ್ತನಿಗೆ ಒದಗಿ ಬಂದಿರುವ ಕಷ್ಟಗಳನ್ನು ನಿವಾರಣೆ ಮಾಡುತ್ತಾನೆ. ಒಟ್ಟಿನಲ್ಲಿ ಹರಕೆಯು ಭಕ್ತನಿಗೂ ಭಗವಂತನಿಗೂ ಬೆಸೆಯುವ ಒಂದು ಕೊಂಡಿಯ ಹಾಗೆ ಕೆಲಸ ಮಾಡುತ್ತದೆ. ಎಲ್ಲಾ ದೈವಗಳಿಗೂ ಹರಕೆ ಕಟ್ಟುವಂತೆಯೇ ಮುತ್ತತ್ತಿಯ ಮುತ್ತತ್ತಿರಾಯನಿಗೂ ಹರಕೆಯನ್ನು ವಿವಿಧ ಬಗೆಗಳಲ್ಲಿ ಕಟ್ಟಲಾಗುತ್ತದೆ. ಭಕ್ತರು ತಮ್ಮ ತಮ್ಮ ಶಕ್ತ್ಯಾನುಸಾರ ವಿವಿಧ ಬಗೆಯ ಹರಕೆಗಳನ್ನು ದೇವರಲ್ಲಿ ಕಟ್ಟಿಕೊಳ್ಳುತ್ತಾರೆ. ಹುಂಡಿಯೊಂದನ್ನು ಇಟ್ಟು ದಿನವೂ ನಾಣ್ಯಗಳನ್ನು ಹಾಕಿ ಮುತ್ತತ್ತಿರಾಯನಲ್ಲಿಗೆ ಬಂದು ಅದನ್ನು ಕಾಣಿಕೆಯಾಗಿ ಸಲ್ಲಿಸುವ ಹರಕೆ. ದೇವರ ಸನ್ನಿಧಿಗೆ ನಡೆದುಕೊಂಡೇ ಬಂದು ಪೂಜಿಸಿ ಹರಕೆ ತೀರಿಸುವುದು.

ಕುರಿ, ಕೋಳಿಗಳ ಬಲಿಯನ್ನು ನೀಡುವುದರ ಮೂಲಕ ಸೇವೆಯನ್ನು ಮಾಡಿ ಹರಕೆ ತೀರಿಸುವುದು, ಕೇಶವನ್ನು ಮುಡಿಕೊಡುವ ಹರಕೆ, ಉರುಳುಸೇವೆ, ದೇವರಿಗೆ ಪ್ರಿಯವಾದ ತುಳಸಿಮಾಲೆ ಅರ್ಪಿಸುವ ಹರಕೆ, ಹುಂಡಿಗೆ ಹಣವನ್ನು ಹಾಕುವ ಹರಕೆ, ಉತ್ಸವವಾಹನದ ಮೇಲೆ ದವನ ಬಾಳೇಹಣ್ಣು ಎಸೆಯುವುದು, ದೇವರಿಗೆ ಪೂಜಾಸಾಮಗ್ರಿ ತಂದುಕೊಡುವ ಹರಕೆ, ಈಡುಗಾಯಿ ಹೊಡೆಯುವ ಹರಕೆಗಳನ್ನು ಕಟ್ಟುತ್ತಾರೆ. ಸೇವೆ ಮಾಡುವುದು ಒಂದು ವ್ಯವಸ್ಥಿತ ಹರಕೆಯಾಗಿದ್ದು, ಇದಕ್ಕೆ ಬಲಿ ನೀಡಲು ಕುರಿ, ಆಡು, ಕೋಳಿಗಳು ಬೇಕಾಗಿರುತ್ತವೆ. ಭಕ್ತರು ಸಾಮೂಹಿಕವಾಗಿ ಬಂದು ಬಲಿ ನೀಡಿದ ನಂತರ ಊಟವನ್ನು ದೇವರಿಗೆ ಅರ್ಪಿಸಿ ತಾವೂ ಊಟ ಮಾಡುತ್ತಾರೆ. ಕೆಲವರು ಬೆಳ್ಳಿ, ಬಂಗಾರದ ಆಭರಣಗಳ ಅರ್ಪಣೆಯನ್ನು ಮಾಡುವ ಹರಕೆಯನ್ನು ಹೊರುತ್ತಾರೆ. ಭಕ್ತರ ಮತ್ತು ದೇವರ ನಡುವಿನ ಒಪ್ಪಂದ ಈ ಹರಕೆ ಎಂಬುದು ಮೇಲಿನ ನೋಟಕ್ಕೆ ತಿಳಿದು ಬಂದರೂ, ಭಕ್ತರ ಭಕ್ತಿ, ನಿಷ್ಠೆ, ಶ್ರದ್ಧೆಗಳು ಇದರಲ್ಲಿ ಅಡಗಿವೆ.

ಭಗವಂತನ ಕ್ಷಮಾಗುಣ, ಆಶೀರ್ವಾದ ಮತ್ತು ಅಭಯಗಳು ಇಲ್ಲಿ ಕಾರ್ಯವನ್ನು ಮಾಡುತ್ತವೆ. ಮುತ್ತತ್ತಿಯ ಮುತ್ತತ್ತಿರಾಯನಿಗೆ ದಕ್ಷಿಣ ಮೈಸೂರಿನ ಪ್ರಾಂತ್ಯವೇ ಅಲ್ಲದೇ ಕರ್ನಾಟಕದ ಇತರ ಜಿಲ್ಲೆಗಳಿಂದಲೂ ಹರಕೆಗಳನ್ನು ಹೊತ್ತ ಭಕ್ತರು ಬಂದು ತಮ್ಮ ಹರಕೆಗಳನ್ನು ಸಲ್ಲಿಸಿ ಪೂರೈಸುತ್ತಾರೆ.

## ೩.೭ ದಾಸಯ್ಯಗಳು

ಮುತ್ತತ್ತಿಯ 'ಮುತ್ತತ್ತಿರಾಯ' ಪಾದ್ದಾರೆಯ 'ಪಾದ್ದಾರಪ್ಪ' ಇವರನ್ನು ಪೂಜಿಸುವ ದಾಸಯ್ಯಗಳು ವೈಷ್ಣವಧರ್ಮದ ದೇವರೇ ಆದ ತಿರುಪತಿಯ ತಿಮ್ಮಪ್ಪ, ಮೇಲುಕೋಟೆಯ ಚೆಲುವರಾಯ, ಬಿಳಿಗಿರಿರಂಗನಾಥನನ್ನು ಸಹ ಪೂಜಿಸುತ್ತಾರೆ. "ಕರ್ನಾಟಕದಲ್ಲಿ ಪ್ರಚಲಿತವಾಗಿರುವ ಪ್ರಮುಖ ಸಂಪ್ರದಾಯಗಳಲ್ಲಿ ದಾಸಪ್ಪ ಸಂಪ್ರದಾಯವು ಒಂದು. ಈ ಸಂಪ್ರದಾಯ ಒಂದು ಪ್ರತ್ಯೇಕ ಸ್ಥಳಕ್ಕಾಗಲಿ ಅಥವಾ ಒಂದು ಜಾತಿಗಾಗಲಿ ಸೀಮಿತವಾದುದಲ್ಲ. ಕರ್ನಾಟಕದ ಎಲ್ಲ ಪ್ರಾಂತ್ಯಗಳಲ್ಲಿ ಹಾಗೂ ಅನೇಕ ಜಾತಿಗಳ ಜನರಲ್ಲಿ ಇವರನ್ನು ಕಾಣಬಹುದು. ಇವರು ಉತ್ತರಕರ್ನಾಟಕದಲ್ಲಿ ಅಲ್ಲಲ್ಲಿಯೂ ಮತ್ತು ದಕ್ಷಿಣಕರ್ನಾಟಕದ ಬಹುತೇಕ ಸ್ಥಳಗಳಲ್ಲಿಯೂ ಕಂಡುಬರುತ್ತಾರೆ. ಅದ್ದರಿಂದ ಈ ಸಂಪ್ರದಾಯ ಒಂದು ಪ್ರಮುಖ ಹಾಗೂ ಪ್ರಸಿದ್ಧ ಸಂಪ್ರದಾಯವಾಗಿದೆ[೧೪]"

"ದಾಸ ಎನ್ನುವ ಪದಕ್ಕೆ ನಾನಾ ಅರ್ಥಗಳಿವೆ. ಸೇವಕ, ಆಳು, ವಿಧೇಯ, ಭಕ್ತ, ಭಿಕ್ಷೆಯಿಂದ ಜೀವಿಸುವವ ಇತ್ಯಾದಿ. ಪ್ರಸ್ತುತ ಸಂಪ್ರದಾಯದ ದಾಸಪ್ಪಗಳು ಭಿಕ್ಷೆಯನ್ನು ಉಪವೃತ್ತಿಯಾಗುಳ್ಳ ವಿಧೇಯಗುಣವುಳ್ಳವರಾಗಿ ಒಂದು ನಿರ್ದಿಷ್ಟ ದೇವರ ಭಕ್ತರಾಗಿದ್ದಾರೆ[೧೫]" ದಾಸಪ್ಪನು ಮುತ್ತತ್ತಿರಾಯನ ಭಕ್ತನಂತೆ ಪ್ರಸಿದ್ಧನಾದ ತಿರುಪತಿಯ ತಿಮ್ಮಪ್ಪನ ಭಕ್ತನು ಹೌದು. "ಈ ದೇವರಿಗೆ ಭಕ್ತರ ಸಂಖ್ಯೆ ಹೆಚ್ಚಾಗಬೇಕಾದರೆ ಮತ್ತು ಅವರನ್ನು ಸ್ಥಿರವಾಗಿ ಆ ದೇವರಿಗೆ ನಿಷ್ಠವಂತನನ್ನಾಗಿ ಮಾಡಬೇಕಾದರೆ ಈ ದಾಸಪ್ಪಗಳ ಅವಶ್ಯಕತೆಯಿತ್ತು. ಆದ್ದರಿಂದ ಇಲ್ಲಿಂದ ತಿರುಪತಿಗೆ ಕುತೂಹಲದಿಂದ ಹೋದ ಜನರಿಗೆ ಮಹಂತರ ಮಠದಲ್ಲಿ ದೀಕ್ಷೆಕೊಟ್ಟು, 'ದಾಸಪ್ಪ'ನನ್ನಾಗಿ ಮಾಡಿರಬೇಕು ಅಥವಾ ಅಲ್ಲಿಂದ ಬಂದಿದ್ದ 'ಪ್ರಚಾರದಾಸರು' ಇಲ್ಲಿಯ ನಂಬುಗೆಯ ಜನಕ್ಕೆ 'ದಾಸದೀಕ್ಷೆ'ಯನ್ನು ಕೊಟ್ಟು ತಿರುಪತಿ ತಿಮ್ಮಪ್ಪನೇ ನಿಮ್ಮ ಆದಿದೈವವೆಂದು ಹೇಳಿಹೋಗಿರಬೇಕು[೧೬]" ಈ ದಾಸಪ್ಪನಿಗೆ ಒಬ್ಬ ಯೋಗ್ಯ ಗುರುವಿನಿಂದ 'ದೇವರದೀಕ್ಷೆ' ಆಗುತ್ತದೆ. ಕನಕದಾಸರು ಮತ್ತು ಪುರಂದರದಾಸರಿಗೂ ಇವರ ಗುರುಗಳಾದ ವ್ಯಾಸರಾಯರಿಂದ ದೀಕ್ಷೆಯಾಗಿರುವುದನ್ನು ಕಾಣಬಹುದು. "ಹಳ್ಳಿಗರ ಭಾವನೆಯಲ್ಲಿ ದಾಸಪ್ಪ ಎಂದರೆ ತಿರುಪತಿಯ ತಿಮ್ಮಪ್ಪನ ಪ್ರತಿನಿಧಿ ಎಂದೇ ಅರ್ಥ. ಅವರ ಕಲ್ಪನೆಯ ಪ್ರಕಾರ ತಿಮ್ಮಪ್ಪ, ದಾಸಪ್ಪನ ರೂಪದಲ್ಲಿ ಅವರಿಗೆ ಕಾಣಿಸುತ್ತಾನೆ.

ಅವರ ಮನೆಗೆ ಹೋಗುತ್ತಾನೆ, ಉಣ್ಣುತ್ತಾನೆ, ಉಡುತ್ತಾನೆ. ದಾಸಪ್ಪ ತನ್ನ ಉಡುಪುಗಳನ್ನು ಧರಿಸಿ ದೇವರ ಲಾಂಛನವನ್ನು ಜೊತೆಗೆ ತೆಗೆದುಕೊಂಡು ಹೊರಟರೆ ನಮ್ಮ ಜನ ಸಾಕ್ಷಾತ್ ವೆಂಕಟರಮಣನನ್ನು ಕಂಡರೆ ಎಷ್ಟು ಗೌರವ ಕೊಡುವರೋ, ಅಷ್ಟೇ ಗೌರವವನ್ನು ದಾಸಪ್ಪನಿಗೆ ಕೊಡುತ್ತಾರೆ[೧೭]"

ಸಾಮಾನ್ಯವಾಗಿ ದಾಸಯ್ಯ ತಲೆಗೆ ಕೆಂಪುಪೇಟಸುತ್ತಿ, ಕಚ್ಚೆಪಂಚೆ ಉಟ್ಟಿರುತ್ತಾರೆ. ಅಂಗಿ, ಕೋಟುಗಳಿರುತ್ತವೆ. ಪಂಚೆ ಕಿತ್ತಳೆಬಣ್ಣದ್ದು ಮತ್ತು ಕೆಲವು ವೇಳೆ ಬಿಳಿಯ ಬಣ್ಣದ್ದು ಆಗಿರುತ್ತದೆ. ಹಣೆ, ಅಂಗೈ, ಮುಂಗೈ, ಬೆನ್ನು, ಕೊರಳು, ಎದೆ ಮೊದಲಾದ ಭಾಗಗಳಲ್ಲಿ ವೈಷ್ಣವಧರ್ಮದ ನಾಮವನ್ನು ಬಳಿದುಕೊಂಡಿರುತ್ತಾನೆ. ಎಡದ ಕೈಯಲ್ಲಿ ಜಾಗಟೆ, ಇದು ಹಿತ್ತಾಳೆ ಲೋಹದಿಂದ ಮಾಡಿದ ವೃತ್ತಾಕಾರದ ಒಂದು ತಟ್ಟೆ. ಇದರ ಮೇಲೆ ಯಾವ ಚಿತ್ರವು ಇರುವುದಿಲ್ಲ, ಯಾವ ಅಲಂಕಾರವು ಇರುವುದಿಲ್ಲ. ಇದರ ಮೇಲ್ತುದಿಯಲ್ಲಿ ಒಂದು ರಂಧ್ರಮಾಡಿ ಅದರ ಮೂಲಕ ಒಂದು ಗಟ್ಟಿಯಾದ ದಾರ ತೂರಿಸಿ ಕೈಯಿಂದ ಹಿಡಿದುಕೊಳ್ಳುವ ಹಾಗೆ ಮಾಡಿರುತ್ತಾರೆ. ಆ ದಾರದ ಜೊತೆಗೆ ಇನ್ನೊಂದು ದಾರ ಸೇರಿಸಿ ಅದಕ್ಕೆ ಒಂದು ಬಿದಿರುಕಡ್ಡಿಯ ತುಂಡನ್ನು ಕಟ್ಟಿರುತ್ತಾರೆ. ಅಂದರೆ ಒಂದು ದಾರದಿಂದ ಹಿಡಿದುಕೊಳ್ಳುವುದು, ಇನ್ನೊಂದು ದಾರಕ್ಕೆ ಕಟ್ಟಿದ ಕಡ್ಡಿಯಿಂದ ಜಾಗಟೆಯನ್ನು ಬಡಿಯುವುದು. ಹೀಗೆ ಬಡಿದಾಗ ಢಣ್_ಢಣ್_.ಢಣ್ ಎಂಬ ಶಬ್ದ ಬರುತ್ತದೆ. ಇದಕ್ಕೆ ದಾರ ಕಟ್ಟಿರುವ ಉದ್ದೇಶವೆಂದರೆ ನಾದ ಕೆಡದಿರಲಿ ಎಂದು[೧೮]" ಬಲಕೈನಲ್ಲಿ ಗರುಡಗಂಭ ಹಿಡಿದಿರುತ್ತಾನೆ. "ಸುಮಾರು ಮೂರು ನಾಲ್ಕು ಅಡಿ ಎತ್ತರವಿರುವ ಒಂದು ಕಬ್ಬಿಣದ ಸರಳಿನ ರಚನೆ, ಮೇಲ್ಭಾಗ ತಟ್ಟೆಯಂತಿರುತ್ತದೆ. ಎಣ್ಣೆ ಬತ್ತಿ ಹಾಕಲು ಅನುಕೂಲವಾಗಿರುತ್ತದೆ. ಕೆಳಭಾಗದಲ್ಲಿ ಚಕ್ರಾಕಾರವಾಗಿದ್ದು, ನೆಲದ ಮೇಲೆ ನಿಲ್ಲಿಸುವಂತೆ ಸಮತಟ್ಟಾಗಿರುತ್ತದೆ. ಹಗಲಿನಲ್ಲಿ ತಾಮ್ರದಿಂದ ಮಾಡಿದ 'ಬವನಾಸಿ' ಇದನ್ನು ಗ್ರಾಮೀಣರು 'ಬೋನಾಸಿ' ಎಂತಲೂ ಕರೆಯುತ್ತಾರೆ. "ಸಾಮಾನ್ಯವಾಗಿ ತಾಮ್ರದ ಲೋಹದಿಂದ ಮಾಡಿರುತ್ತಾರೆ. ಸುಮಾರು ಮೂರು ಕೆ.ಜಿ.ಯಿಂದ ಆರು ಕೆ.ಜಿಯವರೆಗೆ ಆಹಾರ, ದವಸಧಾನ್ಯಗಳನ್ನು ತುಂಬುವಂತೆ ವಿಧವಿಧವಾಗಿರುತ್ತದೆ. ಇದರ ತಳ ಸ್ವಲ್ಪ ಅಗಲವಾಗಿದ್ದು, ಬಾಯಿ ಸ್ವಲ್ಪ ಕಿರಿದಾಗಿರುತ್ತದೆ. ಒಂದು ಒಂದೂವರೆ ಅಡಿ ಉದ್ದವಾಗಿರುತ್ತದೆ.

"ಬೋನಾಸಿ ಎಂದರೆ ಬೋನವನ್ನು ತುಂಬುವುದು ಎಂದು ಅರ್ಥ. 'ಬೋನಾ=ಬಾನಅನ್ನ' ಬೋನಾ ಎಂದರೆ ಅನ್ನ ಎನ್ನುವ ಅರ್ಥ ನಮ್ಮ ಹಳ್ಳಿಗಳಲ್ಲಿ ದೊರೆಯುತ್ತದೆ. ರಾಗಿಯನ್ನೇ ಹೆಚ್ಚಾಗಿ ಬೆಳೆಯುವ ನಮ್ಮ ಹಳ್ಳಿಗರಿಗೆ ಭತ್ತದ ಅಕ್ಕಿಯಿಂದ ಮಾಡಿದ ಅನ್ನ ಕಂಡರೆ ಅಂದು ಹಬ್ಬ ಮಾಡಿದಷ್ಟು ಸಂತೋಷ. 'ಬಾನ ಅಂದರೆ ಹಬ್ಬ ಆದಷ್ಟು ಖುಷಿ' ಎಂದು ಹೇಳುತ್ತಿರುತ್ತಾರೆ. ಅದ್ದರಿಂದ ಅನ್ನವನ್ನು ತುಂಬುವ ಪಾತ್ರೆಯೇ ಬೋನಾಸಿ[೧೯]" ಭಕ್ತರು ನೀಡುವ ಎಡೆ, ಧಾನ್ಯ, ತರಕಾರಿ ಇತ್ಯಾದಿಗಳನ್ನು ದಾಸಪ್ಪ ಇದರಲ್ಲಿ ಹಾಕಿಕೊಳ್ಳುತ್ತಾನೆ. ಇದರ ಮೇಲೂ ನಾಮವಿರುತ್ತದೆ. ಇದರ ಕಂಠದ ಎರಡು ಪಕ್ಕಗಳಿಗೆ ದಾರ ಅಥವಾ ಸರಪಳಿ ಕಟ್ಟಿ ಹೆಗಲಿಗೆ ಇಳಿಬಿಟ್ಟಿರುತ್ತಾನೆ. ಗಂಟೆಯೊಂದನ್ನು ಇಟ್ಟುಕೊಂಡಿರುತ್ತಾನೆ. "ಇದು ಹಿತ್ತಾಳೆ ಲೋಹದಿಂದ ಮಾಡಿದ ಕೈಗಂಟೆ, ದಾಸಪ್ಪ ಇದನ್ನು ಹಿಡಿದು ಅಲ್ಲಾಡಿಸಿದರೆ ಟಣ, ಟಣ, ಟಣ ಎಂದು ಮಧುರವಾದ ಶಬ್ದ ಬರುತ್ತದೆ[೨೦]" ಶಂಖವೊಂದನ್ನು ನೇತುಹಾಕಿಕೊಂಡಿರುತ್ತಾನೆ. ಒಂದು ಅಥವಾ ಎರಡು ಕೈಗಳಲ್ಲಿಯೂ ಹಿಡಿದು ಬಾಯಿಯಿಂದ ಊದಿದರೆ ನಾದವು ಹೊಮ್ಮುತ್ತದೆ. ಮನೆಯ ಮುಂದೆ ಬಂದು ನಿಂತು ಇದನ್ನು ಊದುತ್ತಾನೆ. ಇದರ ಜೊತೆಗೆ ಬಾಂಕಿಯೊಂದನ್ನು "ಇದನ್ನು ಹಿತ್ತಾಳೆ ಲೋಹದಿಂದ ಮಾಡಿದ ಒಂದು ವಾದ್ಯವಿಶೇಷ". ಇದನ್ನು ಒಂದು 'ತುತ್ತೂರಿ' ಎನ್ನಬಹುದು. ಸುಮಾರು ಎರಡೂವರೆ ಅಡಿ ಉದ್ದವಿರುತ್ತದೆ. ಒಂದು ತುದಿಯಲ್ಲಿ ಸಣ್ಣ ಪೀಪೀಯಂತೆ ಇದ್ದು, ಇನ್ನೊಂದು ತುದಿಯಲ್ಲಿ ಅಗಲವಾದ ಬಾಯಿಯಿದೆ. ಸಣ್ಣ ಪೀಪೀಯ ಕಡೆಯಿಂದ ಊದಿದರೆ ದೊಡ್ಡಬಾಯಿಯಲ್ಲಿ ತುತ್ತೂ.ತ್ತೂ.ತ್ತೂ. ಎನ್ನುವ ಶಬ್ದ ಹೊರಬರುತ್ತದೆ. ಸಾಮಾನ್ಯವಾಗಿ ಕಹಳೆ ಊದಿದಾಗ ಬರುವಂತಹ ಭಾರಿ ಶಬ್ದ ಇದರಿಂದಲೂ ಬರುತ್ತದೆ ಎನ್ನಬಹುದು. ನಮ್ಮ ಹಳ್ಳಿಗಳಲ್ಲಿ ಈ ಶಬ್ದ ಒಂದು ಹಳ್ಳಿಯಿಂದ ಇನ್ನೊಂದು ಹಳ್ಳಿಗೆ ಕೇಳಿಸುವುದುಂಟು[೨೧]"

ಹೊರಗಡೆಯ ಮನೆಮನೆಗಳ ಮುಂದೆ ಬರುವಾಗ ಇವಿಷ್ಟು ವಸ್ತುಗಳನ್ನು ಹಿಡಿದುಕೊಂಡಿದ್ದರೆ "ಮನೆಯ ಒಳಗೆ ಪೂಜೆ ಮಾಡುವಾಗ ಪಂಚಪಾತ್ರೆ, ಇದು ತಾಮ್ರ, ಹಿತ್ತಾಳೆ, ಕಂಚು ಇತ್ಯಾದಿ ಪಂಚಲೋಹಗಳಿಂದ ಮಾಡಿದ ಒಂದು ಸಣ್ಣಪಾತ್ರೆ. ಒಂದು ಕಪ್ ಎನ್ನಬಹುದು. ಇದರಲ್ಲಿ ದಾಸಯ್ಯ ತೀರ್ಥ ಇಟ್ಟುಕೊಂಡು, ಅದೇ ತರಹ ಲೋಹದಿಂದ ಮಾಡಿದ ಒಂದು 'ಸ್ಪೂನ್' ಆಕಾರದ ಕೈಚಮಚದಿಂದ ಪಂಚಪಾತ್ರೆಯಲ್ಲಿರುವ ತೀರ್ಥವನ್ನು ಭಕ್ತರಿಗೆ ಕೊಡುತ್ತಾನೆ. ಇದನ್ನು ತೀರ್ಥದ ಬಟ್ಟಲು ಎಂದು ಕರೆಯುತ್ತಾರೆ[೨೨]"

"ಧೂಪಮಂಡಿಗೆ ಇದನ್ನು ಮಣ್ಣಿನಿಂದ ಮಾಡಿರುತ್ತಾರೆ. ಕೆಲವು ಸಲ ಲೋಹದಲ್ಲೂ ಮಾಡಿರುತ್ತಾರೆ. ಕೆಳಗೆ ವೃತ್ತಾಕಾರದ ಒಂದು ಸ್ಟಾಂಡ್ ಇದ್ದ ಹಾಗೆ ಇರುತ್ತದೆ. ಇದು ನೆಲದ ಮೇಲೆ ಸರಿಯಾಗಿ ನಿಲ್ಲುವಂತೆ ಮಾಡಿರುತ್ತಾರೆ. ಮೇಲೆ ಅಗಲವಾದ ಬಟ್ಟಲು ಬಾಯಿ ಇರುತ್ತದೆ. ಇದರೊಳಕ್ಕೆ ಧೂಪ ಹಾಕುತ್ತಾರೆ. ಅಂದರೆ ಸುವಾಸನೆ ಬೀರುವ ಗಂಧ, ಪಚ್ಚಕರ್ಪೂರ ಇತ್ಯಾದಿ ಹಾಕಿ ಅದರ ಮೇಲೆ ಬೆಂಕಿ ಕೆಂಡ ಸುರಿಯುತ್ತಾರೆ. ಆ ಕೆಂಡದ ಮೇಲೆ ಆಗಾಗ್ಗೆ ಗಂಧದ ಚಕ್ಕೆ ಹಾಕುತ್ತಿರುತ್ತಾರೆ. ಸುವಾಸನೆ ಮನೆ ತುಂಬ ಹರಡುತ್ತಿರುತ್ತದೆ. ಅದ್ದರಿಂದ ಧೂಪ ಹಾಕುವ ಈ ಬಟ್ಟಲನ್ನು 'ಧೂಪಮಂಡಿಗೆ' ಎಂದು ಕರೆಯುತ್ತಾರೆ[೨೩]" ಮಂಗಳಾರತಿ ತಟ್ಟೆ "ಇದು ಹಿತ್ತಾಳೆ ಲೋಹದ ಒಂದು ತಟ್ಟೆ. ಇದರ ಒಳಗೆ 'ಚಿತ್ತಾರ' ಬರೆದಿರುತ್ತಾರೆ. ಅಂದರೆ ರಂಗೋಲೆ ತರಹ ಚಿತ್ರ ಇರುತ್ತದೆ. ಇದರ ಒಳಕ್ಕೆ ಕರ್ಪೂರ ಇಟ್ಟು ಹಚ್ಚಿ ದೇವರಿಗೆ ಆರತಿ ಬೆಳಗುತ್ತಾರೆ[೨೪]" ನಾಮದ ಡಬ್ಬಿ "ದಾಸಪ್ಪನ ಜೋಳಿಗೆಯಲ್ಲಿ ಯಾವಾಗಲೂ ಕೆಂಪುನಾಮ, ಬಿಳಿನಾಮದ ಎರಡು ಡಬ್ಬಿಗಳು ಒಂದು ನಾಮ ಇಕ್ಕುವ ಕಡ್ಡಿಯು ಇರುತ್ತದೆ[೨೫]"

ಈ ವಸ್ತುಗಳನ್ನು ದಾಸಪ್ಪ ಯಾವಾಗಲೂ ತನ್ನ ಜೋಳಿಗೆಯಲ್ಲಿ ಇಟ್ಟುಕೊಂಡಿರುತ್ತಾರೆ. ಇವೆಲ್ಲವನ್ನು ದಾಸಪ್ಪ ತನ್ನ ಆಸ್ತಿಯಂತೆ ಕಾಪಾಡಿಕೊಂಡು ಬರುತ್ತಾನೆ. ಮುತ್ತತ್ತಿರಾಯನ ಭಕ್ತರು ಮನೆಗಳಲ್ಲಿ ನಾಮಕರಣ, ಹೊಸಮನೆಗೆ ಹೋಗುವಾಗ, ಹರಕೆ ಹೊತ್ತಾಗ ಅಥವಾ ಯಾತ್ರಸಂದರ್ಭದಲ್ಲಿ ಹರಿಗೆಗಳ ಜೊತೆ ಮೇಲ್ಕಾಣಿಸಿದ ವಸ್ತುಗಳನ್ನು ತಂದು ದೇವರನ್ನು ಪೂಜಿಸುತ್ತಾನೆ. ಇವುಗಳ ಜೊತೆಗೆ ಮುತ್ತತ್ತಿರಾಯನ ದುಂಡಾದ ಲೋಹದ ಮೂರ್ತಿಗಳು, ತಿರುಪತಿ ತಿಮ್ಮಪ್ಪನ ಮೂರ್ತಿಗಳನ್ನು ಇಟ್ಟುಕೊಂಡಿರುತ್ತಾನೆ. ಅವುಗಳನ್ನೆಲ್ಲ ಇಟ್ಟು ಶಂಖು ಧ್ವನಿ ಮೊಳಗಿಸಿ ಬಾಂಕಿ ಊದಿ, ಪೂಜೆ ಮಾಡುತ್ತಾನೆ. ಈ ವೇಳೆಯಲ್ಲಿ ಹಲವು ಬಗೆಗಳಿಂದ ಗೋವಿಂದವನ್ನು ಇಕ್ಕುತ್ತಾನೆ.

ಶ್ರೀಮದ್ ರಮಾರಮಣ ಗೋವಿಂದಾ ಗೋವಿಂದಾ, ಆಂಜನೇಯ ವರದರಾಯ ಸ್ವಾಮಿ ಗೋವಿಂದಾ ಗೋವಿಂದಾ, ಮೂಡಲಗಿರಿವಾಸ ನಿನ್ನ ಪಾದಾರವೇ ಗತಿ ಗೋವಿಂದಾ,ಅಯ್ಯಾ ಮುದ್ದ ಮೂಡಲಗಿರಿವಾಸ ನಿನ್ನ ಪಾದರವೇ ಗತಿ ಗೋವಿಂದಾ, ಅಯ್ಯಾ ಬಂಗಾರದ ಗಿರಿಯವನೇ ನಿನ್ನ ಪಾದವೇ ಗತಿ ಗೋವಿಂದಾ, ಚಿನ್ನದ ಗಿರಿಯವನೇ ನಿನ್ನ ಪಾದವೇ ಗತಿ ಗೋವಿಂದಾ, ಪಟ್ಟೆನಾಮದ

ಸ್ವಾಮಿ ನಿನ್ನ ಪಾದವೇ ಗತಿ ಗೋವಿಂದಾ, ನೀಲಿನಾಮದ ಸ್ವಾಮಿ ನಿನ್ನ ಪಾದವೇ ಗತಿ ಗೋವಿಂದಾ, ಸಹಸ್ತ್ರ ನಾಮದಯ್ಯ ನಿನ್ನ ಪಾದವೇ ಗತಿ ಗೋವಿಂದಾ, ಶತಕೋಟಿ ನಾಮದಯ್ಯ ನಿನ್ನ ಪಾದವೇ ಗತಿ ಗೋವಿಂದಾ, ಮುತ್ತತ್ತಿರಾಯನ ಪಾದಕ್ಕೆ ಗೋವಿಂದಾ ಗೋವಿಂದಾ, ಪಾದ್ದಾರಪ್ಪನ ಪಾದಕ್ಕೆ ಗೋವಿಂದಾ ಗೋವಿಂದಾ, ಕಂಬದರಾಯ ನಿನ್ನ ಪಾದಕ್ಕೆ ಗೋವಿಂದಾ ಗೋವಿಂದಾ, ಕಾವೇರಿ ಮುತ್ತಾ ನಿನ್ನ ಪಾದಕ್ಕೆ ಗೋವಿಂದಾ ಗೋವಿಂದಾ, ಹೊಳೆಸಾಲ್ ಮುತ್ತ ನಿನ್ನ ಪಾದಕ್ಕೆ ಗೋವಿಂದಾ ಗೋವಿಂದಾ, ವನಮುತ್ತಾ ನಿನ್ನ ಪಾದಕ್ಕೆ ಗೋವಿಂದಾ ಗೋವಿಂದಾ, ಮುನಮುತ್ತಾ ನಿನ್ನ ಪಾದಕ್ಕೆ ಗೋವಿಂದಾ ಗೋವಿಂದಾ, ಕಮರಿ ಉಚ್ಚಯ್ಯ ನಿನ್ನ ಪಾದಕ್ಕೆ ಗೋವಿಂದಾ ಗೋವಿಂದಾ, ಸಂಜೀವರಾಯ ನಿನ್ನ ಪಾದಕ್ಕೆ ಗೋವಿಂದಾ, ಬೂದಿಮುಚ್ಚಿದ ಕೆಂಡಾ ನಿನ್ನ ಪಾದಕ್ಕೆ ಗೋವಿಂದಾ ಗೋವಿಂದಾ, ಗೋವಿಂದಾ ಅನ್ನೊರ್ ಪಾದಕ್ಕೆ ಗೋವಿಂದಾ ಗೋವಿಂದಾ, ಎಂದು ಗೋವಿಂದ ಇಡುವುದರ ಮೂಲಕ ಮನೆಯ ಜನತೆಯನ್ನು ಹರಸುತ್ತಾನೆ. ಅಲ್ಲದೆ ಮನೆ ಮನೆಗಳ ಮುಂದೆ ಬಂದು ನಿಂತಾಗಲೂ ಇದೇ ಗೋವಿಂದಾವನ್ನು ಇಡುತ್ತಾನೆ. ಶನಿವಾರಗಳಂದು ತಪ್ಪದೇ ಮುಂಜಾನೆ ಸಿದ್ಧಮಾಡಿಕೊಂಡು ಮನೆಗಳ ಮುಂದೆ ನಿಂತು ಗೋವಿಂದಾ ಹೇಳುವುದರ ಮೂಲಕ ಕಾಣಿಸಿಕೊಂಡು ಭಕ್ತರು ನೀಡುವ ಕಾಣಿಕೆಗಳನ್ನು ಸ್ವೀಕರಿಸುತ್ತಾನೆ. ಅಂದು ಎಷ್ಟೇ ಒಳ್ಳೆಯ ಲಾಭ ಬರುವ ವ್ಯವಹಾರವಿದ್ದರೂ ಅದನ್ನು ತ್ಯಜಿಸಿ ಈ ಪೂಜಾ ಕೈಂಕರ್ಯದಲ್ಲಿ ಭಾಗಿಯಾಗುತ್ತಾನೆ. ದಾಸಯ್ಯನ ಮನೆತನದಲ್ಲಿ ಜನಿಸುವ ಮೊದಲನೇ ಮಗನನ್ನು ದಾಸಯ್ಯನನ್ನಾಗಿ ಮಾಡುತ್ತಾರೆ. ಹೀಗೆ ಇವರ ಪರಂಪರೆ ಮುಂದುವರೆದುಕೊಂಡು ಬರುತ್ತದೆ. ಗ್ರಾಮೀಣ ಪ್ರದೇಶಗಳಲ್ಲಿ ಹೀಗೆ ಪೂಜೆ ಮಾಡಿಕೊಂಡು ಬರುತ್ತಿದ್ದು, ಆಗಾಗ ಶನಿವಾರಗಳಂದು ಮುತ್ತತ್ತಿಗೂ ಬರುತ್ತಾರೆ. ಶ್ರಾವಣ ಶನಿವಾರಗಳಂದು ಹಲವಾರು ದಾಸಯ್ಯಗಳು ಇಲ್ಲಿ ಸಿಗುತ್ತಾರೆ. ಜಾತ್ರೆ ಸಮಯದಲ್ಲಿ ಹೊಳೆಯ ತೀರದಲ್ಲೂ, ಮುಖ್ಯರಸ್ತೆಯಲ್ಲೂ, ದೇವಾಲಯದ ಬಳಿಯೂ ಇವರು ಕಾಣಿಸಿಕೊಳ್ಳುತ್ತಾರೆ. ಸೇವೆ ಮಾಡುವವರು ದಾಸಯ್ಯನಿಂದಲೇ ಪೂಜೆ ಮಾಡಿಸಬೇಕಾಗಿರುವುದರಿಂದ ಅಂದು ಇವರಿಗೆ ಬೇಡಿಕೆ ಹೆಚ್ಚು. ನದಿಯ ತೀರದಲ್ಲಿ ನಾಮದ ಡಬ್ಬಿ ಮತ್ತು ಕಡ್ಡಿಯೊಂದನ್ನು ಹಿಡಿದು ಭಕ್ತರಿಗೆ ನಾಮವನ್ನಿಟ್ಟು ಕಾಣಿಕೆಯನ್ನು ಪಡೆಯುತ್ತಿರುತ್ತಾರೆ.

ಈ ದಾಸಯ್ಯಗಳು ಕೆಲವೊಮ್ಮೆ ಮಣೇವುಸೇವೆಯಲ್ಲಿಯೂ ಭಾಗವಹಿಸುತ್ತಾರೆ. ಕೆ.ಅನಂತರಾಮುರವರು ತಾವು ಕಂಡ ಒಂದು ದೃಶ್ಯವನ್ನು ಹೀಗೆ ವಿವರಿಸಿದ್ದಾರೆ. "ಇನ್ನೊಂದು ಕಡೆ ದಾಸಯ್ಯಗಳಿಗೆ ಬಾಯಿ ಮಣೆಯಿಕ್ಕುವ ಅಬ್ಬರ, ಹರಕೆ ಹೊತ್ತವರು ತೆಂಗಿನಕಾಯಿ ಚೂರು, ಕಜ್ಜಾಯ,

ಬೆಲ್ಲ, ಬಾಳೇಹಣ್ಣು, ಕಡಲೇಪುರಿ, ಕಡಲೇಕಾಯಿಬೀಜ ಮುಂತಾದ ಖಾದ್ಯವಸ್ತುಗಳಲ್ಲಿ ಕೆಲ ಕೆಲವನ್ನು ಪಾತ್ರೆಗಳಿಗೆ ತುಂಬಿಕೊಂಡರು. ಹೊಳೆ ದಂಡೆಯಲ್ಲಿ ಪೂಜೆ ಮಾಡಿ ಅಲ್ಲಿಂದಲೇ ಪ್ರಾರಂಭಿಸಿದರು. ಬಿಳಿಯ ವಸ್ತ್ರವನ್ನು ನೆಲದ ಮೇಲೆ ಹಾಸಿ ಅದರ ಮಧ್ಯಕ್ಕೆ ಮತ್ತು ನಾಲ್ಕು ತುದಿಗಳಿಗೆ ಆ ಖಾದ್ಯವಸ್ತುಗಳ ಒಂದೊಂದು ಗುಪ್ಪೆಯನ್ನಿಟ್ಟರು. ಮೊದಲೇ ಗೊತ್ತುಪಡಿಸಿಕೊಂಡಿದ್ದ ದಾಸಯ್ಯನನ್ನು ಅನಂತರ ಆಡಲು ಬಿಟ್ಟರು. ಅವನು ಕೈಯಲ್ಲಿ ಕೆಂಚಣ್ಣ, ಕರಿಯಣ್ಣರ ಒಂದು ಹರಿಗೆಯನ್ನು ಒಂದು ಬೆತ್ತವನ್ನು, ಜಾಗಟೆಯನ್ನು ಹಿಡಿದು 'ಭೋ, ಪರಾಕ್, ಭೋ ಪರಾಕ್' ಎಂದು ಕೂಗು ಹಾಕುತ್ತಾ ಆಹಾ ಎಂದು ಬಾಯಿ ತೆರೆದು ಅದನ್ನು ನುಂಗುವವನಂತೆ ನಟಿಸುತ್ತಾ, ಅದರ ಸುತ್ತ ಹತ್ತಾರುಬಾರಿ ಸುತ್ತಿದನು. ಇತರರೂ ಅವನೊಡನೆ ತಿರುಗುತ್ತ, ತಾವು ಸಹ ಹುಲ್ಯಾ ಹುಲ್ಯಾ ಎಂದು ಭೋಪರಾಕಿಗೆ ಪ್ರತ್ಯುತ್ತರವಾಗಿ ಕೂಗುತ್ತಾ, ದಾಸಯ್ಯನಿಗಿಲ್ಲದಂತೆ ತಾವೇ ತಿಂದು ಮುಗಿಸುತ್ತೇವೆ ಎಂಬಂತೆ ಕಿತ್ತಾಡಿದರು. ದಾಸಯ್ಯನಿಗ ಆವೇಶ ಬಂದಂತಾದಾಗ ಅವನು ಮುಖವಡಿಯಾಗಿ ಮಲಗಿ, ವಸ್ತ್ರಕ್ಕೆ ಬಾಯಿ ಹಾಕಿ ಬಕಬಕನೆ ಮುಕ್ಕಿದನು. ಅವನನ್ನು ಹುರಿದುಂಬಿಸಿದವರು, ವಸ್ತ್ರದ ಬೇರೆ ಬೇರೆ ಅಂಚುಗಳಲ್ಲಿದ್ದ ಖಾದ್ಯವನ್ನು ಅವನ ಬಾಯಿಗೆ ಹೊಂದಿಸಿ ಕೊಟ್ಟರು. ಗಂಟಲಿಗೆ ಸಿಕ್ಕಿ ಸಂಕಟವಾಗದಂತೆ ಅವನು ಮೇಲೆದ್ದ ಮೇಲೆ ನೀರು ಕುಡಿಸಿದರು. ೫೦ ಹೆಜ್ಜೆ ಮುಂದಕ್ಕೆ ಹೋದನಂತರ ಮತ್ತೆ ವಸ್ತ್ರವನ್ನು ನೆಲಕ್ಕೆ ಹಾಸಿ ಖಾದ್ಯಗಳನ್ನು ಗುಪ್ಪೆಯಿಟ್ಟರು. ಹಿಂದಿನ ಕ್ರಮವೇ ಪುನರಾವರ್ತನೆಗೊಂಡಿತು. ಹೊಳೆಯಕಡೆಯಿಂದ ದೇವಾಲಯದವರೆಗೆ ಬಂದು, ಅದನ್ನೊಂದು ಪ್ರದಕ್ಷಿಣೆ ಹಾಕುವುದರೊಂದಿಗೆ ಆ ಕೆಲಸ ಮುಗಿಯಿತು. ಈ ಕ್ರಮದಲ್ಲಿ ೨೫ಕ್ಕೂ ಹೆಚ್ಚು ದಾಸಯ್ಯಗಳು ಆಡುತ್ತಿದ್ದರೆಂದರೆ ಆ ಕೋಲಾಹಲವನ್ನು ಕೇಳಬೇಕೆ! ಬಾಯಿ ಮಣೆಯಿಕ್ಕುವುದರ ಇನ್ನೊಂದು ರೂಪ 'ಬಾಯಿಕವಳ' ಇಕ್ಕುವುದು ಅದರಲ್ಲಿ. ದಾಸಯ್ಯನನ್ನು ಆಡಿಸುವ ಭಕ್ತನು ಖಾದ್ಯವಸ್ತುಗಳನ್ನು ತನ್ನ ಮುಷ್ಟಿಯಲ್ಲಿಯೇ ತುಂಬಿಕೊಂಡು ಅದನ್ನು ದಾಸಯ್ಯನಿಗೆ ಕೊಟ್ಟು ಕೊಡದವನಂತೆ ಮಾಡುತ್ತ, ಅವನನ್ನು ಛೇಡಿಸುತ್ತ ಆಟವಾಡಿಸಿದನು. ದಾಸಯ್ಯನು ಅವನ ಮೇಲೆ ಮೇಲೆಯೇ ಹಾಯ್ದು, ಕೈಯಿಂದಲೇ ಗೆಬರಿಕೊಳ್ಳುವನಂತೆ ನೆಗೆದಾಡಿದನು. ಕೊನೆಗೆ ಭಕ್ತನು ತಾನೆ ಅದನ್ನು ದಾಸಯ್ಯನ ಬಾಯಿಗೆ ಮುಕ್ಕಿಸಿ ನೀರು ಕುಡಿಸಿದನು. ಇಬ್ಬರು ದಾಸಯ್ಯದಿರನ್ನು ಒಂದೇ ಮಣೆಗೆ ಬಿಟ್ಟು ಕೆಲವರು ಆ ಕಾರ್ಯಕ್ರಮಕ್ಕೆ ಎಲ್ಲಿಲ್ಲದ ರಂಗೇರಿಸಿದರು[೨೬]"

ದಾಸಯ್ಯರುಗಳಿಗೆ ಕೆಲವು ವೇಳೆ ಮೈಮೇಲೆ ದೇವರು ಬಂದಂತೆ ಭಾಸವಾಗುವುದೂ ಉಂಟು. ಮನೆಯಲ್ಲಿ ಪೂಜೆ ಮಾಡುವಾಗಲೂ ಹೀಗೆ ವರ್ತನೆ ಮಾಡುವವರಾದರು, ಹೆಚ್ಚು ಜನಸಂದಣಿ ಇರುವ ಜಾತ್ರೆ ಸಮಯದಲ್ಲಿ ಹೆಚ್ಚು. ಕೆ.ಅನಂತರಾಮುರವರು ಕಂಡ ಒಂದು ದೃಶ್ಯ ಹೀಗಿದೆ. “ಹುಣಿಸೆಮರದಡಿಯಲ್ಲಿ ದಾಸಯ್ಯನೊಬ್ಬನ ಮೇಲೆ ದೇವರು ಬಂದಿತ್ತು. ಅವನು ಕೈಗಳನ್ನು ಒದರುತ್ತ, ಹಿಂದುಮುಂದಕ್ಕೆ ತೂಗುತ್ತ, ದಿಗಂತದತ್ತ ದೃಷ್ಟಿಚಾಚಿ, ಜನರ ಕೇಳಿಕೆಗಳಿಗೆ ಉತ್ತರ ಕೊಡುತ್ತಿದ್ದನು. ‘ನನ್ ಮನಸಲ್ಲೇನೋ ಅದೆ. ನೀನ್ ತಿಳೀದೆ ಇರೋದಿದ್ದಾತಾ, ಅದ್ ಹೆಂಗಾಯ್ತದೆ ಅಂತ ಹೇಳ್ಬೇಕು’ ಎಂದು ಹೆಂಗಸೊಬ್ಬಳು ಕೇಳಿದಳು. ‘ನಿನ್ನ್ ಮನಸಲ್ಲಿರೋದ್ ನಾನ್ ಹೇಳ್ಬೇಕಾ? ನಡಿ, ನಿನ್ನ್ ಕನಸಿಗೆ ಬತ್ತೀನಿ, ತಿಳಿದು ಹೇಳ್ತಿನಿ’ ಎಂದಿತು ದೇವರು. ಇನ್ನೊಬ್ಬ ಯುವ ಮುಂದೆ ಬಂದು ‘ಆಡ್ಮಾತು ಕೇಳೋ ಹಂಗಾಯ್ತು, ಕುಂಟೋ ಕುರುಡೋ, ಎಂತೇದೋ ಒಂದ್ ಕೋಟ್ ಬುಡು, ಇದು ಸೇರಿ ಐದ್ ದಪ್ಪ ಆಯ್ತು ನಿನ್ ಕೇಳಿ’ ಎಂದನು. ‘ನಮ್ಮ್ ಅಣ್ಣನಹತ್ರ ಹೋಗ್ ಬಂದಿದ್ದೀಯಾ’ ಎಂದು ದೇವರು ಕೇಳಿತು. ‘ನೀನೂ ಆಯ್ತು ನಿಮ್ಮಣ್ಣನೂ ಆಯ್ತು, ಎಲ್ಲಾರೂ ಕಳ್ರೇಯ, ನೋಡು ಈದಪ್ಪ ಸರಿಯಾಗಿ ಹೇಳ್ಬುಡು’ ಎಂದ ಯುವಕ. ಅಷ್ಟರಲ್ಲೇ ದಾಸಯ್ಯನು ಒಮ್ಮೆ ಎಲ್ಲರೂ ಬೆಚ್ಚುವಂತೆ ಕಾಕುಹಾಕಿ ನೆಲದ ಮೇಲೆ ಉರುಳಿಕೊಂಡುಬಿಟ್ಟನು[೨೭]”

ಈ ದಾಸಯ್ಯಗಳು ಭಕ್ತರ ಮನೆಯಲ್ಲಿ ಪೂಜಿಸುವ ಸಮಯದಲ್ಲಿ ನೀಡುವ ನಿಗದಿತ ಕಾಣಿಕೆ ಮತ್ತು ಮೀಸಲು ಹಣವನ್ನು ತಂದು ಮುತ್ತತ್ತಿರಾಯದೇವರ ಕಾಣಿಕೆಹುಂಡಿಯಲ್ಲಿ ಹಾಕುತ್ತಾರೆ. ಮುತ್ತತ್ತಿರಾಯನಿಗೂ ಭಕ್ತರಿಗೂ ನಡುವೆ ಪೂಜಿಸಿ ಒಳಿತನ್ನು ಮಾಡಿಕೊಡುವ ದಾಸಪ್ಪನ ಸೇವೆ, ಸಾರ್ಥಕವಾದ ಬದುಕೇ ಆಗಿದೆ. ಇವರಲ್ಲಿ ಕೆಲವರು ಮದುವೆಯಾಗದೆ ಬ್ರಹ್ಮಚಾರಿಯಾಗಿ ಉಳಿದು ಬಿಡುತ್ತಾರೆ. ಬಹಳಷ್ಟು ಸಂಸಾರಸ್ಥರಾಗಿರುತ್ತಾರೆ. ಇವರು ಪಾದ್ದಾರೆಯಲ್ಲಿ ನಡೆಯುವ ಜಾತ್ರೆಯಲ್ಲಿಯೂ ಭಾಗವಹಿಸಿ ನಂತರ ಮುತ್ತತ್ತಿಯ ಜಾತ್ರೆಗ ಬರುತ್ತಾರೆ. ಕೆಲವರು ಉದ್ದನೆಯ ಜುಟ್ಟು ಬಿಟ್ಟಿರುತ್ತಾರೆ. ಆಗಾಗ ತಿರುಪತಿಯ ತಿಮ್ಮಪ್ಪನ ಬಳಿಗೂ ಹಾಗೂ ಮುಳಬಾಗಿಲಿನ ಆಂಜನೇಯ ದೇವಾಲಯಕ್ಕೂ ಹೋಗಿ ಬರುತ್ತಾರೆ. ಮಂಟೇಸ್ವಾಮಿ ಕಾವ್ಯಗಳಲ್ಲಿ ಮುತ್ತತ್ತಿರಾಯನನ್ನು ದಾಸಪ್ಪನಂತೆಯೇ ಚಿತ್ರಿಸಿದ್ದಾರೆ. ದಾಸಪ್ಪ ಹಿಡಿಯುವ ಎಲ್ಲಾ ಪರಿಕರಗಳು ಇವನ ಬಳಿ ಇವೆ ಎಂಬಂತೆಯೂ ಚಿತ್ರಿಸಿದ್ದಾರೆ.

# ಅಡಿ ಟಿಪ್ಪಣಿಗಳು

೧.೨.೩.೪.೫.ಡಾ.ದೇ.ಜವರೇಗೌಡ, ಜಾನಪದ ಅಧ್ಯಯನ, ಚೇತನ ಬುಕ್ ಹೌಸ್, ನಾರಾಯಣಶಾಸ್ತ್ರಿ ರಸ್ತೆ, ಮೈಸೂರು. ಪುಟ-೩೬೮,೩೭೦,

೧೯೯೧,

೬. ೭. ಶ್ರೀ.ಜೀ.ಶಂ.ಪರಮಶಿವಯ್ಯ, ಶ್ರೀಮಂಟೇಸ್ವಾಮಿಕಾವ್ಯ, ಸಾಹಿತ್ಯ ಸದನ, ಮೈಸೂರು,

ಪುಟ-೪೨೭, ೪೨೮

೮. ಕೆ.ಅನಂತರಾಮು, ಸಕ್ಕರೆಸೀಮೆ, ಅನಂತಪ್ರಕಾಶನ, ಮೈಸೂರು, ಪುಟ-೨೨೪, ೧೯೮೨

೯. ಶ್ರೀ.ಹಿ.ಚಿ.ಬೋರಲಿಂಗಯ್ಯ, ದಾಸಪ್ಪಜೋಗಪ್ಪ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

ಪುಟ-೧೧, ೨೦೦೪

೧೦. ಶ್ರೀ.ಗೊ.ರು.ಚನ್ನಬಸಪ್ಪ, ಕರ್ನಾಟಕ ಜನಪದ ಕಲೆಗಳು, ಕನ್ನಡ ಸಾಹಿತ್ಯ ಪರಿಷತ್ತು,

ಬೆಂಗಳೂರು, ಪುಟ-೧೮೦, ೧೯೭೭

೧೧. ಹಿ.ಚಿ.ಬೋರಲಿಂಗಯ್ಯ, ಪೂರ್ವೋಕ್ತ

ಪುಟ- ೧೨, ೨೦೦೪

೧೨.೧೩. ಗೊ.ರ.ಚನ್ನಬಸಪ್ಪ, ಪೂರ್ವೋಕ್ತ

ಪುಟ-೧೮೧, ೧೮೨,೧೮೫,೧೮೬ ೧೯೭೨

೧೪.೧೫.೧೬.೧೭೧೮.೧೯.೨೦.೨೧.೨೨.೨೩.೨೪.೨೫. ಹಿ.ಚಿ.ಬೋರಲಿಂಗಯ್ಯ, ಪೂರ್ವೋಕ್ತ ಪುಟ-೧, ೭,೧೨,೧೩ ೨೦೦೪

೨೬.೨೭. ಕೆ.ಅನಂತರಾಮು, ಪೂರ್ವೋಕ್ತ, ಪುಟ-೨೨೭,೨೨೬, ೧೯೮೦

# ಅಧ್ಯಾಯ–೪

## ಮುತ್ತತ್ತಿಯ ಜಾತ್ರೆ

"ಜಾತ್ರೆ ಎಂಬುದು ಜಾನಪದ ರೂಢಿ, ಸಂಪ್ರದಾಯಗಳ ಒಂದು ಅಂಗ. ಜಾನಪದ ತಜ್ಞ ಶಂಕರಸೇನಾಗುಪ್ತಾ ಬಂಗಾಲದ ಜಾನಪದ ಬಗ್ಗೆ ಬರೆದ ಪ್ರಸ್ತಾವನೆಯಲ್ಲಿ ಜಾತ್ರೆಯನ್ನು ಜಾನಪದದ ವಿಷಯ ಪಟ್ಟಿಯಲ್ಲಿ ಸೇರಿಸಿದ್ದು ಸಹಜ. ಭಾರತದಲ್ಲಿ ಜಾತ್ರೆ ಬಹು ಪರಿಚಿತವಾದ, ಬಹಳ ಆಕರ್ಷಕವಾದ ವಿಷಯ. ಅದು ಎಲ್ಲ ಕಡೆಗೂ ಕಂಡು ಬರುವ, ಎಲ್ಲರನ್ನೂ ರಂಜಿಸುವ ಸಂಪ್ರದಾಯ. ಹೀಗಿದ್ದೂ ಅದರ ಬಗ್ಗೆ ನಾವು ವೈಜ್ಞಾನಿಕವಾಗಿ ಅಧ್ಯಯನ ಮಾಡಿದ್ದು ಕಡಿಮೆ. ಕನ್ನಡದಲ್ಲಂತೂ ಇಂಥ ಅಧ್ಯಯನಗಳು ಇಲ್ಲವೇ ಇಲ್ಲ ಎನ್ನುವಷ್ಟು ಅತ್ಯಲ್ಪ. ಜಾತ್ರೆಯ ಹತ್ತಿರ ಸಂಬಂಧಿಯಾದ ಹಬ್ಬ–ಹುಣ್ಣಿಮೆಗಳ ಬಗ್ಗೆ, ಭಾರತದ ಹಾಗೂ ಕರ್ನಾಟಕದ ಹಬ್ಬಗಳ ಬಗ್ಗೆ, ಆಸಕ್ತರು ಈಗೀಗ ಅಷ್ಟಿಷ್ಟು ಅಧ್ಯಯನ ಮಾಡುತ್ತಿದ್ದಾರೆ. ಆದರೆ ಜಾತ್ರೆಗಳ ಬಗ್ಗೆ ನಾವು ಈವರೆಗೆ ದಿವ್ಯ ನಿರ್ಲಕ್ಷ್ಯ ತೋರಿಸಿದ್ದೇವೆ. ಜಾನಪದಕ್ಕೆ ಸಂಬಂಧಿಸಿದ ಸುಮಾರು ೧೦೦–೧೨೦ ಕನ್ನಡ ಗ್ರಂಥಗಳನ್ನು ತಿರುವಿದರೂ ಜಾತ್ರೆಯ ಪರಿಕಲ್ಪನೆಯ ಬಗ್ಗೆ, ಅದರ ಹುಟ್ಟು ಬೆಳವಣಿಗೆ ಮಹತ್ವಗಳ ಬಗ್ಗೆ ಹೆಚ್ಚಿನ ಮಾಹಿತಿ ಸಿಗುವುದಿಲ್ಲ. ನಾಲ್ಕಾರು ಸಾಲು ಪ್ರಸ್ತಾಪ ಇರುವ ಕಡೆಗಳಲ್ಲಿ ನಮ್ಮ ಲೇಖಕರು ಜಾತ್ರೆ ಮತ್ತು ಹಬ್ಬವನ್ನು ಅವಿನಾಭಾವದಿಂದ ನೋಡಿ ಸುಮ್ಮನಾಗಿಬಿಟ್ಟಿದ್ದಾರೆ. ಒಂದೆರಡು ಕಡೆ ಕೇವಲ ಹತ್ತಿಪ್ಪತ್ತು ಸಾಲುಸಿಕ್ಕವು. ಉಳಿದಂತೆ ಸಿಕ್ಕಿದ್ದು ಕೆಲವು ವಿಶಿಷ್ಟ ಜಾತ್ರೆಗಳ ವರ್ಣನೆಗಳು ಮಾತ್ರ. ಅವುಗಳಲ್ಲಿಯೂ ಸಹ ಹೆಚ್ಚಿನವು ಜಾಳು ಜಾಳು. ಒಟ್ಟಿನಲ್ಲಿ ನಮ್ಮ ಈವರೆಗಿನ ಜಾನಪದ ಅಧ್ಯಯನದಲ್ಲಿ ಜಾತ್ರೆಯನ್ನು ಕುರಿತಂತೆ ನಮ್ಮ ದುಡಿಮೆ ಹೆಚ್ಚು ಕಡಿಮೆ ಶೂನ್ಯ[೧]"

"ಕರ್ನಾಟಕದಲ್ಲಿ ಒಂದು ಸಾವಿರಕ್ಕೂ ಮಿಗಿಲಾಗಿ ಜಾತ್ರೆಗಳುಂಟೆಂದು ಡಾ.ಮಲ್ಲಿಕಾರ್ಜುನ ಲಠೆಯವರು ಹೇಳುತ್ತಾರೆ[೨]" ಇತ್ತೀಚಿಗೆ ದಿನಪತ್ರಿಕೆಗಳಲ್ಲಿ ಜಾತ್ರೆಗಳು ನಡೆದ ಬಗ್ಗೆ ವರದಿಗಳು ಬರುತ್ತವೆಯಾದರೂ ಅದರಲ್ಲಿ ಜಾತ್ರೆಯ ಕುರಿತು ಒಂದೆರಡು ತುಣುಕು ವಿಷಯಗಳು ಇರುತ್ತವೆ. ಉಳಿದ ಅನ್ಯ, ಅಸಂಬದ್ಧ ವಿಷಯಗಳೇ ಆಗಿರುತ್ತದೆ. ನಮ್ಮ ಕರ್ನಾಟಕದ 'ಜಾನಪದ' ವಲಯದಲ್ಲಿ ಜಾನಪದ ತಜ್ಞರಿಗೇನೂ ಕೊರತೆ ಇಲ್ಲ.

ಶಾಲಾ-ಕಾಲೇಜುಗಳ ಅಧ್ಯಾಪಕರೇ ಅಲ್ಲದೇ ವಿಶ್ವವಿದ್ಯಾಲಯಗಳ 'ಜಾನಪದ' ವಿಭಾಗಗಳ ಅಧ್ಯಾಪಕರು, ವಿದ್ಯಾರ್ಥಿಗಳು ಸಾಕಷ್ಟು ಜಾನಪದ ಅಧ್ಯಯನದ ಬಗ್ಗೆ ಸಂಶೋಧನೆ, ಪ್ರಕಟಣೆ, ವಿಚಾರಸಂಕಿರಣಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ. ಕರ್ನಾಟಕ ಜಾನಪದ ಯಕ್ಷಗಾನ ಅಕಾಡೆಮಿಯೂ ಸಹ ಈ ನಿಟ್ಟಿನಲ್ಲಿ ಗಮನಾರ್ಹ ಕೆಲಸ ಮಾಡುತ್ತಿದ್ದು, ಜಾನಪದ ಪರಿಷತ್ತುದಿಂದ ಕಾರ್ಯ ಸ್ತುತ್ಯಾರ್ಹವಾಗಿದೆ. ಆದರೆ 'ಕರ್ನಾಟಕದ ಸಮಗ್ರ ಜಾತ್ರೆಗಳ ಅಧ್ಯಯನ'ದ ಕೊರತೆ ಕನ್ನಡ ಜಾನಪದವನ್ನು ಕಾಡುತ್ತಿದೆ. ಈ ನಿಟ್ಟಿನಲ್ಲಿ ಪ್ರಯತ್ನಗಳು ನಡೆಯಬೇಕಾಗಿದೆ. ಕೆ.ಅನಂತರಾಮುರವರು ತಾವು ಕಂಡ ವಿವರಣೆ ನಿಡಿದ್ದಾರೆ[೩]" ಆದರೂ "ಮುತ್ತತ್ತಿ ಜಾತ್ರೆಯ ಕುರಿತು ಶಾಸ್ತ್ರೀಯ ಅಧ್ಯಯನಗಳೇ ನಡೆದಿಲ್ಲ. ಮಂಡ್ಯ ಜಿಲ್ಲಾ ಜಾತ್ರೆಗಳ ಪುಸ್ತಕದಲ್ಲಿ ಸ್ಥಾನವನ್ನು ಪಡೆದಿಲ್ಲ[೪]" ಆದರೂ "ನಾನು ಬಹು ಹಿಂದೆ ಈ ಕುರಿತು ಒಂದು ಲೇಖನವನ್ನು ಬರೆದಿದ್ದೆ ಅದು ಎಷ್ಟು ಜಾನಪದ ತಜ್ಞರಿಗೆ ತಲುಪಿದೆ ಎಂಬುದು ಸಹ ಅನುಮಾನ[೫]" ಮುತ್ತತ್ತಿಯ ಜಾತ್ರೆಯು ಅರಣ್ಯದ ಮಧ್ಯದ ಕುಗ್ರಾಮದಲ್ಲಿ ನಡೆಯುತ್ತಿದ್ದುದೇ ಇದಕ್ಕೆ ಕಾರಣವಿರಬಹುದು. ಪ್ರಸ್ತುತ ಅಧ್ಯಾಯದಲ್ಲಿ ಈ ಕುರಿತು ವಿಸ್ತಾರವಾಗಿ ಚರ್ಚಿಸಲಾಗುವುದು.

ಜಾತ್ರೆ, ಯಾತ್ರೆ, ಪರಿಷೆ, ಸಂತೆ ಇವುಗಳ ಅರ್ಥವಿವರಣೆ ಕುರಿತು "ಜಾತ್ರೆಯ ಬಗ್ಗೆ ಈಗಾಗಲೇ ಪ್ರಕಟವಾಗಿರುವ 'ಕರ್ನಾಟಕದ ಜಾತ್ರೆಗಳು[೬]" "ಕರ್ನಾಟಕ ಜಾತ್ರೆಗಳು[೭]" ಹಾಗೂ 'ಜಾನಪದವಾಹಿನಿ[೮]' ಪುಸ್ತಗಳಲ್ಲಿ ವಿವರವಾಗಿ ವಿವರಗಳು ಪ್ರಕಟವಾಗಿವೆ. ಆದುದರಿಂದ ಈ ಚರ್ಚೆಯ ಗೊಡವೆಗೆ ಹೋಗುವುದಿಲ್ಲ. "ವ್ಯಾಪಾರ ವ್ಯವಹಾರಗಳೊಂದಿಗೆ ಜನಪದರಿಗೆ ಮನರಂಜನೆಯನ್ನು ಒದಗಿಸುವ ವರ್ಷದ ಒಂದು ನಿರ್ದಿಷ್ಟ ಕಾಲದಲ್ಲಿ ಸ್ಥಳದಲ್ಲಿ ನಡೆಯುವ ಸಾಮಾಜಿಕ ಚಟುವಟಿಕೆಯನ್ನು ಜಾತ್ರೆ ಎನ್ನಬಹುದು. ಜನಸಂದಣಿಯೇ ಜಾತ್ರೆಯ ಮುಖ್ಯ ಬಂಡವಾಳ. ಹೆಚ್ಚಿನ ಸಂಖ್ಯೆಯಲ್ಲಿ ಜನ ನೆರೆಯದಿದ್ದಲ್ಲಿ ಅದನ್ನು ಜಾತ್ರೆ ಎನ್ನಲಾಗದು. ಇಡೀ ವರ್ಷ ಬದುಕಿನ ಒತ್ತಡಗಳಲ್ಲಿ ನಲುಗಿದ, ಏಕತಾನತೆಯಲ್ಲಿ ಬೇಸತ್ತ ಜನ ತಮ್ಮ ಕುಟುಂಬ ವರ್ಗದೊಡನೆ, ಬಂಧುಬಾಂದವರೊಂದಿಗೆ ಹರಟೆ ಹೊಡೆಯುತ್ತ, ಕಣ್ಣಿಗೆ ಹಬ್ಬವುಂಟು ಮಾಡುವ ದೃಶ್ಯಾವಳಿಗಳನ್ನು ನೋಡುತ್ತ, ಪೂಜೆ-ಪುನಸ್ಕಾರಗಳಲ್ಲಿ ತೊಡಗುತ್ತ, ತಮ್ಮ ಆರ್ಥಿಕ ಸಾಮರ್ಥ್ಯಕ್ಕೆ ನಿಲುಕುವ ವಸ್ತುಗಳನ್ನು ಕೊಳ್ಳುತ್ತಾ, ನಲಿಯುವುದಕ್ಕೆ ಭವಿಷ್ಯದ ಬದುಕಿಗೆ ಬೇಕಾದ ಉತ್ಸಾಹವನ್ನು ಪಡೆದುಕೊಳ್ಳುವುದಕ್ಕೆ ಅವಕಾಶ

ಕಲ್ಪಿಸಿಕೊಡುವ ವಿಶಿಷ್ಟ ಪರಿಸರವೇ ಜಾತ್ರೆ" ಈ ಮೇಲಿನ ಸರಳ ಮತ್ತು ನೇರವಾದ ವಿವರಗಳು ಮುತ್ತತ್ತಿಯ ಜಾತ್ರೆ ಅಧ್ಯಯನ ಮಾಡುವಾಗ ಉಲ್ಲೇಖಿಸಲು ಅರ್ಹವಾದ ವಿಷಯಗಳಾಗಿವೆ.

ಸಾಮಾನ್ಯವಾಗಿ ಕರ್ನಾಟಕದ ಜಾತ್ರೆಗಳು ಸುಗ್ಗಿಕಾಲ ಮುಗಿದು ಬೇಸಿಗೆ ಕಾಲದ ಬಿಡುವು ದಿನಗಳಲ್ಲಿ ಏರ್ಪಡುವುದಾದರೂ, ಕೆಲವು ಜಾತ್ರೆಗಳು ಮಳೆಗಾಲದಲ್ಲಿ ನಡೆಯುತ್ತವೆ. ಅಂತಹ ಮಳೆಗಾಲದ ಜಾತ್ರೆಗಳಲ್ಲಿ ಮುತ್ತತ್ತಿಯ ಜಾತ್ರೆಯೂ ಒಂದು. ಕಾರಣ, ವೈಷ್ಣವ ಧರ್ಮದ ಪವಿತ್ರ ದಿನವೆಂದು ಶ್ರೀಕೃಷ್ಣನ ಗೋಕಲಾಷ್ಟಮಿಯಿ ಸಂದರ್ಭವನ್ನು ಪರಿಗಣಿಸುತ್ತೇವೆ. ಇದೇ ಮಾಸದಲ್ಲಿ ಶ್ರಾವಣ ಶನಿವಾರಗಳೂ ಬರುತ್ತವೆ. ಈ ಶ್ರಾವಣ ಶನಿವಾರಗಳಲ್ಲಿ ಭಾರತದಾದ್ಯಂತ ವಿಶೇಷ ಪೂಜೆಗಳು ದೇವಾಲಯಗಳಲ್ಲಿ ನಡೆಯುತ್ತವೆ. ಅಂತೆಯೇ ವೈಷ್ಣವಧರ್ಮದ ದೇವರೇ ಆಗಿರುವ ಮುತ್ತತ್ತಿರಾಯನ ಜಾತ್ರೆಗೆ ಸೂಕ್ತವಾದ ದಿನವೆಂದು ಕಡೆ ಶ್ರಾವಣ ನಂತರದ ಬುಧವಾರ ಮತ್ತು ಗುರುವಾರವನ್ನು ನಿಗದಿ ಮಾಡಲಾಗಿದೆ. ಸಾಮಾನ್ಯವಾಗಿ ದ್ರಾವಿಡದೇವರು ಎಂದು ಪರಿಗಣಿಸಲ್ಪಟ್ಟ ಶಿಷ್ಟದೇವರಪಟ್ಟವನ್ನು ಹೊತ್ತು ನಿಂತಿರುವ ಮಾಂಸಾಹಾರವನ್ನು ತ್ಯಜಿಸಿ ಸಸ್ಯಾಹಾರಿಯಾಗಿರುವ, ಆಂಜನೇಯ ಅರ್ಥಾತ್ ಮುತ್ತತ್ತಿರಾಯನ ಜಾತ್ರೆಗೆ ಪ್ರತಿ ವರುಷವು ನಿಗದಿತವಾಗಿ ಈ ದಿನಾಂಕವನ್ನು ಗೊತ್ತುಪಡಿಸಲಾಗಿದೆ. ಪಾದ್ದಾರೆಯಲ್ಲಿ ಮಂಗಳವಾರ, ಬುಧವಾರಗಳಲ್ಲಿ ಜಾತ್ರೆ ನಡೆದರೆ, ಮುತ್ತತ್ತಿಯಲ್ಲಿ ಬುಧವಾರ, ಗುರುವಾರ ಹಾಗೂ ಸಂಬಾಪುರದ ಕಂಬದರಾಯನ ಗುಡಿಯಲ್ಲಿ ಶುಕ್ರವಾರ, ಶನಿವಾರಗಳೆಂದು ತೀರ್ಮಾನಿಸಲಾಗಿದೆ.

ಕರ್ನಾಟಕದಲ್ಲಿನ ಜಾತ್ರೆಗಳು ಆರಂಭವನ್ನು ಕುರಿತು "ಆದಿ ಮಾನವನ ಜೀವನವಿಧಾನದಿಂದ ಸಮಾಜ ನಿರ್ಮಾಣ ಆಯಿತೆನ್ನಬಹುದು. ನಿಸರ್ಗದತ್ತವಾದ ಆಚಾರ, ವಿಚಾರಗಳು ಬದಲಾವಣೆಯಾಗ ತೊಡಗಿದವು. ಕಾಡು ನಾಡಾಗಿ ಆತನ ವಸತಿಗಳ ರಚನೆಯಲ್ಲೂ ಬದಲಾವಣೆ ಕಂಡು ಬಂದಿತು. ಕಾಡಿನಲ್ಲಿ ಪೂಜಿಸುತ್ತಿದ್ದ ದೈವಗಳಲ್ಲಿ ಒಂದು ದೇವತೆಯನ್ನು ತಾನು ವಾಸಿಸುವ ಹಟ್ಟಿಯಲ್ಲೇ ಪ್ರಮುಖ ದೈವವೆಂದು ಗುರುತಿಸಿ ಅದಕ್ಕೆ ಪ್ರಮುಖ ಪ್ರಾಧಾನ್ಯತೆ ನೀಡತೊಡಗಿದ. ಈ ದೈವಗಳ ಆಚರಣೆಗಳಲ್ಲಿ ಸಾಮೂಹಿಕವಾಗಿ ಪಾಲ್ಗೊಂಡು ಆರಾಧನೆ ಮಾಡುತ್ತಾ ಬರತೊಡಗಿದರು. ಆಹಾರವನ್ನವಲಂಬಿಸಿ ಪುರುಷರು ಬೇಟೆಯನ್ನು ಅವಲಂಬಿಸಿದರೆ, ಸ್ತ್ರೀಯರು ಕೃಷಿಕಾರ್ಯಗಳಿಗೆ ಹೆಚ್ಚಿನ ಒತ್ತನ್ನು ಕೊಟ್ಟಿರುವುದನ್ನು ಕಾಣಬಹುದಾಗಿದೆ ಅವರ ಹಾಡಿ ಅಥವಾ ಹಟ್ಟಿಗಳಲ್ಲಿ

ವಾಸಿಸುತ್ತಿದ್ದ ದೈವಗಳೊಂದಿಗೆ ದೂರದಲ್ಲಿರುವ ಕಾಡಿನ ದೈವಗಳನ್ನು ವರ್ಷಕ್ಕೊಂದು ಸಲ ಇಲ್ಲವೇ ನಿಗದಿತ ವರ್ಷದಲ್ಲಿ ಅಲ್ಲಿಗೆ ತನ್ನ ಕುಟುಂಬದೊಂದಿಗೆ ಹೋಗಿ ಆಚರಣೆ ಮಾಡುತ್ತಾ ಬರುತ್ತಿದ್ದನು.

ಒಟ್ಟಾರೆಯಾಗಿ ಕಾಡಿನ ದೈವಗಳ ಆರಾಧನೆಯು ವಾರ್ಷಿಕಾಚರಣೆಗಳಾಗಿ ಮೂಡಿ ಬಂದವು. ತಾನು ಬೆಳೆದ ಬೆಳೆ ಪ್ರಮುಖ ಕಾರಣವೆಂದು ತಿಳಿದು ಬೆಳೆದ ದಾನ್ಯ ತೆಗೆದುಕೊಂಡು ದೇವಾಲಯಕ್ಕೆ ಬಂದು ಕಾಡಿನ ದೈವಗಳ ಜೊತೆಗೆ ಜನಪದ ದೈವಗಳೊಂದಿಗೆ ಶಿಷ್ಟ ದೈವಗಳು ಸೇರಿಸಿ ಆರಾಧಿಸಿದ ಮಾನವನಾಗಿ ಜೀವಿಸಿದ ವ್ಯಕ್ತಿಗಳು ಅತೀತ ಶಕ್ತಿಗಳನ್ನು ಪ್ರದರ್ಶಿಸಿದ ಕಾರಣದಿಂದ ದೈವಗಳ ಸ್ಥಾನವನ್ನು ಪಡೆದುಕೊಂಡವು. ನಾಡು ಬೆಳೆದಂತೆಲ್ಲಾ ಕಾಡಿನ ದೈವಗಳ ಆರಾಧನೆಯು ಗೌಣಗೊಳ್ಳಲು ತೊಡಗಿದವು. ಇವುಗಳ ಸ್ಥಾನದಲ್ಲಿ ಶಿಷ್ಟ ದೈವಗಳ ಆರಾಧನೆ ಮಾಡುತ್ತಾ ಬರತೊಡಗಿದರು. ಅವುಗಳ ಇರುವ ಸ್ಥಳದಲ್ಲೇ ಹೋಗಿ ಹಲವು ದಿನಗಳವರೆಗೆ ಇದ್ದು ಆಚರಣೆ ಮಾಡುವುದರ ಜೊತೆಗೆ ಸಮಾಜದಲ್ಲಿ ವಾಸಿಸುತ್ತಿದ್ದ ಎಲ್ಲರೂ ಸಾಮೂಹಿಕವಾಗಿ ಪಾಲ್ಗೊಂಡು ಆ ದೈವಕೃಪೆಗೆ ಪಾತ್ರರಾಗಿ ಹಿಂದಿರುಗಿ ಬರುತ್ತಿದ್ದರು. ಇದೇ ಪದ್ಧತಿ ಈಗಲೂ ಚಾಲ್ತಿಯಲ್ಲಿರುವುದು ಗಮನಾರ್ಹ. ಹೀಗೆ ಆಚರಿಸಿಕೊಂಡು ಬಂದ ಆಚರಣೆ ಉತ್ಸವಗಳು ಜಾತ್ರೆಗಳಾಗಿ ಪರಿಣಮಿಸಿದವು[೧೦]"

ಈ ಮಾತುಗಳು ಬಸವನಬೆಟ್ಟ ಅರಣ್ಯದೊಳಗೆ ಕಾವೇರಿ ನದಿಯ ತಟದಲ್ಲಿರುವ ಮುತ್ತತ್ತಿಯ ಮುತ್ತತ್ತಿರಾಯನ ಜಾತ್ರೆಗೆ ಅನ್ವಯಿಸುತ್ತದೆ. ಆಂಜನೇಯ ಕರ್ನಾಟಕ ಮೂಲದವನು. ತನ್ನ ಅಸಾಧಾರಣ ಮಹಿಮೆಯಿಂದ ಖ್ಯಾತಿವೆತ್ತು ಗ್ರಾಮೀಣರ ಧಾರ್ಮಿಕ ಭಕ್ತಿಯೊಳಗೆ ಪ್ರವೇಶಿಸಿ ಜನಪದದ ಜನತೆಯಿಂದ ಪೂಜೆಗೊಂಡವನು. ರಾಮಾಯಣದ ಶ್ರೀರಾಮನಭಂಟನೆಂದು ಪರಿಗಣಿಸಿ ಶಿಷ್ಟದೇವತೆಗಳ ಪರಿಧಿಯೊಳಗೆ ಬಂದ ಮೇಲೆ ಊರೊಟ್ಟಿನ ದೇವರಾದವನು. "ದುಷ್ಟಶಕ್ತಿಗಳನ್ನು, ಶತ್ರುಗಳನ್ನು ದಮನ ಮಾಡುವುದು, ರೋಗ, ಪೀಡೆ ಮೊದಲಾದುವನ್ನು ಪರಿಹರಿಸುವುದು, ಭೀತಿಯನ್ನು ಹೋಗಲಾಡಿಸುವುದು, ಬಯಕೆಯನ್ನು ತೀರಿಸುವುದು ಇವೆಲ್ಲ ಹನುಮಂತನ ನೆರವಿನಿಂದಲೇ ಆಗಬೇಕು. ಹಳ್ಳಿಗಳಲ್ಲಿ ಇಂದಿಗೂ ಬೇನೆ, ಪೀಡೆ, ಕಾಟ ಇವುಗಳಿಗೆ ಪರಿಹಾರವಾಗಿ ಹನುಮಂತನ ಪೂಜೆ ಮಾಡುವ ವಾಡಿಕೆಯಿದೆ. ಬೆದರಿದ ಮಕ್ಕಳಿಗೆ ಹನುಮಂತನ ತಾಯಿತ ಕಟ್ಟುವುದಿದೆ, ಅಭಿಚಾರ ಕರ್ಮಗಳಲ್ಲಿ ಹನುಮಂತೋಪಾಸಕರು ತೊಡಗುವುದಿದೆ. ಬಸವಿ ಬಿಟ್ಟ ಹೆಂಗಸರು ಹನುಮಂತನಿಗೆ ತಾಳಿಯನ್ನು ಕಟ್ಟುವುದಿದೆ.

ವೇಶ್ಯೆಯರು ಹನುಮಂತನ ತಾಳಿಯನ್ನು ಕಟ್ಟಿಕೊಳ್ಳುವುದಿದೆ. ಮನೆಯ ರಕ್ಷಣೆಗೆಂದು ಹನುಮಂತನ ಗುಂಡನ್ನು ನೆಡುವುದಿದೆ''" ಗ್ರಾಮೀಣ ಜನತೆಗೆ ಇಷ್ಟೊಂದು ಬಗೆಯಲ್ಲಿ ಬೇಕಾದ ಆಂಜನೇಯ 'ಮುತ್ತತ್ತಿ'ಯಲ್ಲಿ ನೆಲೆಗೊಂಡಿರುವುದು ಸಹಜವೇ ಆಗಿದೆ.

ಮಾದಿಗ ಜನಾಂಗದ ಕಕ್ಕೆಸೊಪ್ಪಿನ ಕಾಳದಾಸ ಮತ್ತು ಅವನಿಗೆ ಸಹಾಯಕನಾಗಿ ಗಡ್ಡದ ಗಿರಿಯಯ್ಯರಿಂದ ಪೂಜೆಗೊಳ್ಳುತ್ತಿದ್ದ ಈ ದೈವ ಮುಂದೆ ಈ ಪರಿಸರದ ಎಲ್ಲಾ ಗ್ರಾಮೀಣ ಜನತೆಯ ಆರಾಧ್ಯದೈವವಾಗಿ ರೂಪುಗೊಂಡು ವರ್ಷಗೊಮ್ಮೆ ಜಾತ್ರೆಯ ಅಳವಡಿಕೆಯಾಯಿತು ಎಂದು ಯಾವ ವರ್ಷದಲ್ಲಿ ಆರಂಭವಾಯಿತೆಂಬ ಕಷ್ಟಸಾಧ್ಯ. ಜಾತ್ರೆಗಾಗಿ ಶ್ರಮ ವಿಭಜನೆ, ಹೊಣೆಗಾರಿಕೆಯ ಹಂಚಿಕೆಗಳೂ, ಜಾತ್ರೆಯ ಕಾರ್ಯಕ್ರಮಗಳು ಹೇಗೆ, ಯಾರಿಂದ ರೂಪುಗೊಂಡವು ಎಂಬುದಕ್ಕೆ ಸರ್ಕಾರಿ ಅಥವಾ ವಾಕ್ಪರಂಪರೆಯ ಯಾವುದೇ ದಾಖಲೆಗಳು ಲಭ್ಯವಾಗಿಲ್ಲ. ಕ್ರಿ.ಶ.೧೯೬೮ಕ್ಕಿಂತ ಮುಂಚೆ ಕೆ.ಅನಂತರಾಮುರವರು ಖುದ್ದಾಗಿ ನೋಡಿ ವರ್ಣಿಸಿರುವ ಉಲ್ಲೇಖ ಹೀಗಿದೆ. "ಕೆಂಚೇಗೌಡರು ಕಂಡಂತೆ ಅಲ್ಲಿದಿದ್ದು ಒಂದೇ ಗುಡಿಸಲು. ದೇವಾಲಯಕ್ಕೆ ಒಳ್ಳೆಯ ವರಮಾನವಿದ್ದು ಅದು ಕೈಯಾಳು, ಬಾಯಾಳು ಆಗುತ್ತಿದುದ್ದನ್ನು ಅವರು ಕಂಡರು. ಭಕ್ತನ ನೆರವಿನಿಂದ ಅದನ್ನು ಮುಜರಾಯಿ ಇಲಾಖೆಗೆ ಸೇರಿಸಿದರು. ಮುಡಿ, ಹುಲಿವಾಹನೋತ್ಸವ, ಜಾತ್ರೆಯ ಅಂಗಡಿಗಳು ಮುಂತಾದ ಬಾಬ್ತುಗಳಿಂದ ಹತ್ತು ಸಾವಿರದಷ್ಟು ವಾರ್ಷಿಕ ವರಮಾನ ಅದಕ್ಕೆ ಸೇರುವಂತೆ ಮಾಡಿದರು. ದೇವಾಲಯದ ಹೊಸ ಕಟ್ಟಡ, ತಳಿಗೆಮನೆ, ಅವರ ಕಾಲದಲ್ಲಿಯೇ ನಿರ್ಮಾಣವಾದುವು. ಮಾತುಕತೆಯಲ್ಲಿಯೇ ಹಾಗೂ ಹೀಗೂ ಹನ್ನೊಂದು ಗಂಟೆಯಾಯಿತು. ಬೆಂಗಳೂರಿನಿಂದ ಬಂದಿದ್ದ ಲಕ್ಷ್ಮೀಪತಿಯವರೊಡನೆ ಜಾತ್ರೆಯೊಳಗೆಲ್ಲ ಒಮ್ಮೆ ಸುತ್ತಾಡಿದೆ. ಜನ ಕಕ್ಕಡಗಳನ್ನು, ಗ್ಯಾಸ್ ಲೈಟುಗಳನ್ನು ಹತ್ತಿಸಿಕೊಂಡು ವ್ಯಾಪಾರ ಮಾಡುತ್ತಿದ್ದರು. ಮಾರೇಹಳ್ಳಿಯಲ್ಲಿ ನೆರೆದಿದ್ದಂತಹ ಲಾಟರಿ ಆಟದವರೇ ಜಾತ್ರೆಯ ಕಾಲುಭಾಗವನ್ನು ತುಂಬಿಕೊಂಡಿದ್ದರು. ಯಾತ್ರಿಕರು ಇಳಿದುಕೊಳ್ಳಲು ಛತ್ರಪತ್ರಗಳೇನೂ ಇಲ್ಲ. ಕೆಳಗೆ ಭೂಮಿ ಮೇಲೆ ಆಕಾಶ ಅವರೆಲ್ಲ ಕಾಡಿನಿಂದ ಸೊಪ್ಪು, ಚಿಗುರು ಕಡಿದು ತಂದು ಹಾಸಿಮಲಗಿದ್ದರು. ನೀಲಗಾರರು ಮಂಟೇಸ್ವಾಮಿಯ ಕಥೆಯನ್ನು ಭಕ್ತಮಂಡಳಿಗೆ ಭಿತ್ತರಿಸುತ್ತಲಿದ್ದರು. ಅಲ್ಲೆಲ್ಲಾ ಆನೆಗಳ ಕಾಟವಾದ್ದರಿಂದ ಜನರು ಬೆಂಕಿ ಹಾಕಿಕೊಂಡು ಧಗಧಗನೆ ಉರಿಸುತ್ತಾ ರಾತ್ರಿಯನ್ನು ಕಳೆಯುತ್ತಿದ್ದರು. ಮುತ್ತತ್ತಿಯ ಪರಿಸರದ ಸುತ್ತಲೂ ಅಲ್ಲಲ್ಲಿ ಉರಿಯುತ್ತಿದ್ದ ಜ್ವಾಲೆಯ ಬೆಂಕಿಯ ಕೋಟೆಯನ್ನು ನಿರ್ಮಿಸಿದಂತೆ ಇತ್ತು.

ಆ ಇರುಳ ಮೆರಗನ್ನು ನೋಡಿ ಜಗುಲಿಗೆ ಹಿಂದಿರುಗಿದಾಗ ವಾದ್ಯಗಳು ಭೋರನೆ ಮೊಳಗುತ್ತಿದ್ದವು. 'ದೊಡ್ಡಮುತ್ತತ್ತಿಯಲ್ಲಿ ಉಪವಾಸ' ಎಂಬುದು ಆಹ್ವಾನಪತ್ರಿಕೆಯ ಪ್ರಕಾರ ಅಂದಿನ ಕಾರ್ಯಕ್ರಮವಾಗಿತ್ತು. ಆ ಉಪವಾಸ ಜನರಿಗಲ್ಲ ದೇವರಿಗೆ. ಬೆಳಗಿನಿಂದಲೂ ಸ್ವಾಮಿಗೆ ನೈವೇದ್ಯ ಮಾಡಿರಲಿಲ್ಲ. ಆಗ ತಳಿಗೆಮನೆಯಿಂದ ನೈವೇದ್ಯವನ್ನು ಹೊರಡಿಸಿದರು. ಬೆಲ್ಲದ ಪೊಂಗಲು ಹೊತ್ತ ಏಳು ಜನ ತಮ್ಮಡಿಗಳು ಮಡಿಯಾದ ವಸ್ತ್ರಗಳನ್ನುಟ್ಟು, ಬಾಯಿಗೆ ಬಟ್ಟೆ ಕಟ್ಟಿಕೊಂಡು, ಒಬ್ಬರ ಹಿಂದೊಬ್ಬರು ನಡೆಮಡಿಯ ಮೇಲೆ ತಳಿಗೆಮನೆಯಿಂದ ಹೊರಬಂದರು. ಪರಿಚಾರಕರು ಚಾಮರ ಬೀಸುತ್ತಿದ್ದರು, ಕೊಂಡೇಕಾರನು ಕೊಂಡೇಕೊಲ್ಲನ್ನು ಝುಣಝುಣ ಎಂದು ನೆಲಕ್ಕೆ ಕುಟ್ಟುತ್ತಾ, ದಾರಿ ಬಿಡಿಸುತ್ತಾ ಮುಂದೆ ನಡೆದನು. ಸ್ವಾಮಿಗೆ ತಳಿಗೆ ತೋರಿಸಿ, ಭಕ್ತರಿಗೆ ಪ್ರಸಾದ ವಿನಿಯೋಗವಾಗುವ ವೇಳೆಗೆ ರಾತ್ರಿಯ ಒಂದು ಗಂಟೆಯಾಯಿತು. ಕುಳಿತಿದ್ದ ಜನ ದಿಕ್ಕುದೆಸೆಗಳನ್ನು ನೋಡದೆ ಹಾಗೆಯೇ ಉರುಳಿಕೊಂಡರು. ನಾವು ಅವರಿಗಿಂತ ಸ್ವಲ್ಪ ಪರಿಷ್ಕಾರವಾಗಿ ತಲೆಯೂರಿದೆವು.

ರಾತ್ರಿಯೆಲ್ಲ ಜನರ ಓಡಾಟ, ಕರಪಲ, ಮಾತುಕತೆಗಳಿಂದಾಗಿ ಸರಿಯಾಗಿ ನಿದ್ರೆ ಬರಲಿಲ್ಲ. ಬೆಳಗಾಗುವ ಮುನ್ನವೇ ಯಾತ್ರಿಕರು ಪಾತ್ರೆಗಳಿಗಾಗಿ ಕೆಂಚೇಗೌಡರನ್ನು ಬಂದು ಮುತ್ತಿದ್ದರು. ಭಕ್ತರೇ ಕಾಲಕಾಲಕ್ಕೆ ದಾನ ಮಾಡಿದ ಕೆಲವು ಪಾತ್ರೆ ಪಡಗಗಳು ಅಲ್ಲಿವೆ. ಎಲ್ಲರಿಗೂ ಸಾಕಾಗುವಷ್ಟು ಇಲ್ಲವಾದ್ದರಿಂದ ಜನರು ದೇಕುತ್ತಾ ದೇಕುತ್ತಾ ಗೌಡರ ಮೈಮೇಲೆ ಬಂದರು. ಇದಷ್ಟನ್ನು ಬೇಗ ಬೇಗನೆ ಕೊಟ್ಟು ಅವರು ಕೈತೊಳೆದುಕೊಂಡರು. ಆಮೇಲೆ ಬಂದವರಿಗೆ ಇಲ್ಲ ಎಂದು ಹೇಳಿಕಳುಹಿಸುವುದು ಕಷ್ಟದ ಕೆಲಸವೇ ಆಯಿತು. ಹಾಲರಬಿಸೇವೆ ಮತ್ತು ಕಾಯಿಸೇವೆ ಇಂದಿನ ಕಾರ್ಯಕ್ರಮಗಳು, ನಾಳೆ ಮತ್ತು ನಾಡಿದ್ದು ರಥೋತ್ಸವ ಎಂದು ಹಾಕಿಸಿದ್ದರು. 'ರಥಯಿದೆಯೇ ಗೌಡರೇ' ಎಂದು ಕೇಳಿದೆ. ಅವರು ರಥವು ಇಲ್ಲ ಪಥ ಮೊದಲೇ ಇಲ್ಲ. ಇನ್ನು ಮೇಲೆ ಮಾಡಿಸಬೇಕು. ಜಾತ್ರೆ ಅಂಗಡಿ ಕಂಟ್ರಾಕ್ಟರು ಹಿಡಿದವರು ನಾಲ್ಕಾರು ದಿನ ಜನರು ನಿಲ್ಲಲಿ. ವ್ಯಾಪಾರ ಸಾಪಾರ ಚೆನ್ನಾಗಿ ಆಗಲಿ ಅಂತಾ ಸುಮ್ಮನೆ ಪ್ರಿಂಟು ಮಾಡಿಸಿದ್ದಾರೆ ಎಂದರು. ಮಾದಿಗರವನು ತಾನೇ ಮುತ್ತತ್ತಿರಾಯನನ್ನು ಬೆಳಕಿಗೆ ತಂದದ್ದು. ಆದ್ದರಿಂದ ಹಾಲರಬಿಸೇವೆ ಮತ್ತು ಕಾಯಿಸೇವೆಗಳಲ್ಲಿ ಅವರದೇ ಪ್ರಧಾನ ಪಾತ್ರ. ಮಳವಳ್ಳಿಯಾದಿಯಾಗಿ ದೂರ ದೂರದ ಗ್ರಾಮಗಳಿಂದ ಅವರು ತಂಡೋಪತಂಡವಾಗಿ ಬಂದು ಶ್ರದ್ಧಾ,ಭಕ್ತಿಗಳಿಂದ ದೇವರು ಮಾಡಿಕೊಂಡು ಹೋಗುತ್ತಾರೆ.

ಎಂಟುಗಂಟೆಯ ವೇಳೆಗೆ ವಸಂತರಾಯನ ಮಜ್ಜನಕಡುವಿಗೆ ಅಗ್ರೋದಕ ಕುಂಭಾದಿಗಳನ್ನು ಕಳುಹಿಸಿಕೊಡಲು ಗೌಡರಿಗೆ ಹೇಳಿ ನಾವು ಹೊಳೆಯ ಕೆರೆಗೆ ನಡೆದೆವು. ಉರುಳುಸೇವೆಯ ಭಕ್ತರು ಸ್ನಾನಮಾಡಿ ಉದುಬತ್ತಿ ಹತ್ತಿಸಿ, ಎರಡು ಕೈಗಳಿಂದ ಎತ್ತಿಹಿಡಿದು ಉರುಳಿಕೊಂಡು ದೇವಾಲಯದ ಕಡೆಗೆ ಬರುತ್ತಿದ್ದರು. ದಡದಲ್ಲಿ ಯಾತ್ರಿಕರು ಸೂಚಿ ಕುಕ್ಕಲು ಜಾಗವಿಲ್ಲದಂತೆ ಉದ್ದಕ್ಕೂ ನೈದುಕೊಂಡಿದ್ದರು. ನಾವು ಮೊದಲು ನಮ್ಮ ಮಾಮುಲು ಜಾಗಕ್ಕೆ ಹೋಗಿ ಕಾಫಿ ಮಾಡಿ ಕುಡಿದೆವು. ಅನಂತರ ಸ್ನಾನಕ್ಕೆಂದು ತೊಂಬಾರವಿಲ್ಲದ ಜಾಗವನ್ನು ಹುಡುಕುತ್ತಾ ಅರ್ಧ ಮೈಲಿ ಹೋದೆವು[೧೨]" "ಮಿತಿಮೀರಿ ಬಂದ ಪ್ರವಾಹವು ದಡದ ನೂರಾರು ಮರಗಳನ್ನು ಮುಳುಗಿಸಿತ್ತು. ಸ್ನಾನ ಮಾಡಿ ಮಡಿಯುಟ್ಟು ನಾವು ಮಜ್ಜನಕಡುವಿಗೆ ಬಂದೆವು. ಉದ್ದಕ್ಕೂ ಜನರು ಅಲ್ಲಲ್ಲಿ ಕೋಳಿಗಳ ಕೊರಳು ಕೊಯ್ದು, ರಕ್ತಸೋರಿಸಿ ಉರುಳಿಸುತ್ತಿದ್ದರು. ಕೆಲವರು ರೆಕ್ಕೆಪುಕ್ಕಗಳನ್ನು ಕಡಿದು ಬೆಂಕಿಯಲ್ಲಿ ಸುಡುತ್ತಿದ್ದರು. ಕುರಿಗಳು ತಮ್ಮ ಮೇಲೆ ತೂಗುತ್ತಿರುವ ಕತ್ತಿಯನ್ನರಿಯದೇ ತಲೆಬಗ್ಗಿಸಿ ಸೊಪ್ಪು ಮೇಯುತ್ತಿದ್ದವು[೧೩]"

"ಪಾಂಡುರಂಗರು ಅಲ್ಲೇ ರಕ್ಷಾಯಂತ್ರಗಳನ್ನು ಒಡ್ಡಿಕೊಂಡು ಕಟ್ಟಿಕೊಡುತ್ತಿದ್ದರು. ಪಂಡಿತರು ಮೀಸಲು ನೀರಿನ ಕುಂಭವನ್ನು ಹೆಗಲ ಮೇಲೆ ಹೊತ್ತರು. ನಾನು ಅವರ ಹಿಂದೆ ಛತ್ರಚಾಮರ, ಓಲಗ, ಜಾಗಟೆಗಳ ಗೌರವದೊಂದಿಗೆ ದೇವರನ್ನು ಮುಟ್ಟಿದೆವು. ಆ ಮರ್ಯಾದೆಯೆಲ್ಲ ಸ್ವಾಮಿಯ ತಲೆಯ ಮೇಲೆ ಬೀಳುವ ಆ ಜಲಕ್ಕೆ, ಬಾಗಿಲಿಗೆ ಬಂದಾಗ ಭಕ್ತನೊಬ್ಬನು ಕುಂಭಕ್ಕೆ ಇಡುಗಾಯಿ ಹೊಡೆದು ಪಂಡಿತರ ಕಾಲಿಗೆ ಅಡ್ಡಬಿದ್ದನು. ಹೋಮ, ಪುಣ್ಯಾಹ, ಅಭಿಷೇಕ, ಸಹಸ್ರನಾಮ ಮುಂತಾದ ಪೂಜಾಕಾರ್ಯಗಳನ್ನು ನೆರವೇರಿಸಿದೆವು. ಪಂಡಿತರು ಹೇಳುತ್ತಿದ್ದ ಮಂತ್ರಗಳಿಗೆ ನಾನು ಧ್ವನಿಗೂಡಿಸಿದೆ. ನಾನು ಸಹಸ್ರನಾಮ ಓದಿದಾಗ ಅವರು ಕುಂಕುಮಾರ್ಚನೆ ಮಾಡಿದರು. ಹನ್ನೆರಡು ಗಂಟೆಯ ಸಮಯಕ್ಕೆ ಮಹಾಮಂಗಳಾರತಿಯಾಗಿ ಭಕ್ತರು ಸುಖನಾಸಿಯೊಳಗೆ ತುಂಬಿಕೊಂಡು ನನ್ನದು ತನ್ನದೆಂದು ಹಣ್ಣುಕಾಯಿ ಬುಟ್ಟಿಗಳನ್ನು ನಮ್ಮ ಮುಂದೆ ಚಾಚಿದರು. ನಾವಿಬ್ಬರು ಒಂದೇ ಸಮನೆ ಥೈಡ್ ಥೈಡ್ ಎಂದು ಕಾಯಿಗಳನ್ನು ಚಚ್ಚಿ ಪೂಜೆ ಮಾಡಿಕೊಟ್ಟೆವು[೧೪]"

"ಕಾವೇರಿ ನೀರು ಕುಡಿದು ಕತ್ತಲು ಕವಿಯುವ ವೇಳೆಗೆ ಜಗಲಿಗೆ ಹೋದೆವು. ಆ ವೇಳೆಗೆ ಜಗಲಿಯ ವಾತಾವರಣಕ್ಕೆ ಎಲ್ಲಿಲ್ಲದ ಕಳೆ ಬಂದಿತು. ಪೆಟ್ರೋಮ್ಯಾಕ್ಸ್ ದೀಪವನ್ನು ಹತ್ತಿಸಿಟ್ಟಿದ್ದರು. ದೇವಾಲಯದ ಕನ್ವೀರನಾದ ಬೂವಳ್ಳಿ ಕೆಂಚೇಗೌಡರು ಮೂಲೆಯಲ್ಲಿ ಜೋಡುನಳಿಕೆ ಬಂದೂಕವನ್ನು ಒರಗಿಸಿಕೊಂಡು, ದೊಡ್ಡ ಜಮಖಾನ ಹಾಸಿಕೊಂಡು ಅಲ್ಲಿ ಕುಳಿತ್ತಿದ್ದರು. ಅವರ ಜೊತೆ ಹಲಗೂರಿನ ನರಸಿಂಹೇಗೌಡರು ಇದ್ದರು[೧೫]" "ಎಪ್ಪತ್ತಾರು ವರ್ಷದ ಕೆಂಚೇಗೌಡರು ಅಜಾನುಬಾಹುತ್ವ, ದಪ್ಪನಾದ ಬಿಳಿಯ ಮೀಸೆ, ಅಗಲವಾದ ಮುಖ, ಹೆಸರಿಗೆ ತಕ್ಕ ಬಣ್ಣ ಅವರನ್ನು ನೋಡುವವರ ಮನಸ್ಸಿನಲ್ಲಿ ಭಯಭಕ್ತಿಗಳನ್ನುಂಟು ಮಾಡುತ್ತಿದ್ದವು. 'ಗೌಡರು ಜೋಡ್ ಬಂದೂಕ ಮಡಿಕೊಂಕುಂತವ್ರೆ, ಏನ್ ಸುಮ್ಕಾಯ್ತಾ' ಎಂದು ಜನರು ತಮಗೆ ತಾವೇ ನಿಯಂತ್ರಿತರಾಗುತ್ತಿದ್ದರು[೧೬]" "ಜಗುಲಿಯ ಬಳಿ ಗೌಡರು ಪಂಚಾಮೃತ ಪ್ರಸಾದವನ್ನು ಹಂಚಿಸುತ್ತಿದ್ದರು. ಕೋಲು ಹಿಡಿದುಕೊಂಡು 'ಈಗ ಹೊಡೆದರು, ಈಗ ಹೊಡೆದೇ ಬಿಟ್ಟರು, ಈಗ ಏಟು ಬಿತ್ತೇ-ಬಿತ್ತು' ಅನ್ನುವ ಹಾಗೆ ಅದನ್ನು ಆಗಾಗ ಬೀಸುತ್ತಾ ಗುಂಪನ್ನು ನಿಯಂತ್ರಿಸುತ್ತಿದ್ದರು. ಪಂಡಿತರು ತಮಗೆ ಬಂದ ಅಮ್ರುತಪಡಿಯನ್ನು ಗಂಟುಕಟ್ಟಿಕೊಂಡರು.[೧೭]"

ಈ ಕೆಂಚೇಗೌಡರೆಂದರೆ ಬೂವಳ್ಳಿಯೇ ಅಲ್ಲದೇ ಸುತ್ತಮುತ್ತಲ ಗ್ರಾಮದವರಿಗೆ ಅಪಾರ ಗೌರವ. ಅದರಿಂದಲೇ ಅವರು ಮುತ್ತತ್ತಿ ದೇವಾಲಯದ ಕನ್ವೀನರಾಗಿ ದೇವಾಲಯದ ಅಭಿವೃದ್ಧಿಗೆ ಅಪಾರ ಸೇವೆ ಮಾಡಿದರು. ಜಾತ್ರೆಗಳಲ್ಲಿ ತಾವೇ ಖುದ್ದಾಗಿ ನಿಂತು ಯಶಸ್ವಿಗೊಳಿಸುತ್ತಿದ್ದರು. ಮುತ್ತತ್ತಿ ಕ್ಷೇತ್ರವನ್ನು 'ಧರ್ಮಸ್ಥಳ ಹಾಗೂ ತಿರುಪತಿಯ' ಹಾಗೆ ಅಭಿವೃದ್ಧಿ ಪಡಿಸಿ ನಾನಾ ಕಡೆಗಳಿಂದ ಭಕ್ತರು ಬರುವ ಹಾಗೆ ಮಾಡುವ ಹಂಬಲವನ್ನು ಉಳ್ಳವರಾಗಿದ್ದರು. ದೇವರಿಗೆ ಸಂಬಂಧಿಸಿದ ಬಹುಮುಖ್ಯ ಬೆಲೆಬಾಳುವ ವಸ್ತುಗಳನ್ನು ತಮ್ಮ ಮನೆಯಲ್ಲಿಯೇ ಇರಿಸಿಕೊಂಡು ಜಾತ್ರಾ ಸಮಯದಲ್ಲಿ ಮುತ್ತತ್ತಿಗೆ ಬರುವ ವ್ಯವಸ್ಥೆ ಮಾಡುತ್ತಿದ್ದರು.

ಪಂಡಿತ ಮ.ಮಲ್ಲಪ್ಪನವರು ನೀಡಿರುವ ಉಲ್ಲೇಖ ಹೀಗಿದ್ದು ಅಲ್ಪಮಾಹಿತಿಯನ್ನು ಜಾತ್ರೆಯ ಕುರಿತು ಒದಗಿಸಿಕೊಡುತ್ತದೆ. "ಮುತ್ತತ್ತಿರಾಯನ ವಿಶೇಷಪೂಜೆಯೇ ಜಾತ್ರಾಪೂಜೆ. ದಿನಗಟ್ಟಳೆಯ ಪೂಜೆಯ ಗಂಗಡಕಾರ ಒಕ್ಕಲಿಗನದಾದರೆ, ವಿಶೇಷಪೂಜೆಯು ವಿಪ್ರರದು. ಪ್ರತಿ ಶ್ರಾವಣ ಬಹುಳದಲ್ಲಿ ಕಡೆಯ ಹಿಂದಿನ ಗುರುವಾರ ಇಲ್ಲಿ ಜಾತ್ರೆಯು ಸೇರುತ್ತದೆ ಎಂದರೆ ಆಗಸ್ಟ್ ಎರಡನೇ ವಾರದ

ಅಂತ್ಯದಲ್ಲಿ ಆಗುತ್ತದೆ. ಕನಕಪುರ, ಕೊಳ್ಳೇಗಾಲ, ಚನ್ನಪಟ್ಟಣ, ದೊಡ್ಡಆಲಹಳ್ಳಿ, ಮಂಡ್ಯ, ಮಳವಳ್ಳಿ ಮೊದಲಾದ ಕಡೆಗಳಿಂದ ಯಾತ್ರಾರ್ಥಿಗಳು ಇಲ್ಲಿಗೆ ಬರುತ್ತಾರೆ. ಜನವೋಜನ, ಗುಂಪೋಗುಂಪು ಜಾತ್ರೆಯ ವಿಶೇಷಪೂಜೆಯಲ್ಲಿ ಮೊದಲನೇಯ ಪೂಜೆಯು ಹರಿಜನ-ಮಾದಿಗರ ವ್ಯಕ್ತಿಯದು. ಈ ಜಾತ್ರೆಯ ಅವಧಿಯು ಮುಗಿಯುವವರೆಗೂ ಆತನು ಉಪವಾಸ ಕೈಗೊಂಡು, ನಿರಾಹಾರಿಯಾಗಿ ಹಣ್ಣು, ಹಾಲು, ನೀರು ಇವುಗಳ ಸೇವನೆಯಿಂದಲೇ ಕಾಲ ಕಳೆಯುತ್ತಾನೆ[೧೮]"

ಮುತ್ತತ್ತಿ ಜಾತ್ರೆ ಎರಡು ದಿನಗಳದ್ದಾದರೂ, ಗ್ರಾಮೀನ ಭಕ್ತರು ಸಡಗರದಿಂದ ಭಾಗವಹಿಸುವಂತೆ ಮಾಡುವುದು ಎರಡನೆಯ ದಿನವಾದ ಗುರುವಾರವೇ ಆಗಿದೆ. ಬುಧವಾರ ಪಾದ್ದಾರೆಯಲ್ಲಿ ಹಾಲರಬಿ, ಕಾಯಿಬುಡೋಸೇವೆ, ವಾಹನೋತ್ಸವ ಮುಗಿಸಿ, ಅಪಾಸಂಖ್ಯೆಯಲ್ಲಿ ಭಕ್ತರು, ೩.ಕಿ.ಮೀ.ದೂರದಲ್ಲಿರುವ ಮುತ್ತತ್ತಿಗೆ ನಡೆದುಕೊಂಡು ಅಥವಾ ವಾಹನವುಳ್ಳವರು ವಾಹನದಲ್ಲಿ ಬಂದು ತಲುಪುತ್ತಾರೆ. ಹಲಗೂರು ದಾರಿಯಿಂದ ತಾಳವಾಡಿ ಭೀಮೇಶ್ವರಿ, ತಿರುಗಣೆ ಮಡುಗಳಲ್ಲಿ ಪೂಜೆ ಮುಗಿಸಿ ಭಕ್ತರು ಇಲ್ಲಿಗೆ ಬಂದು ನೆರೆಯುತ್ತಾರೆ. ಕೊಳ್ಳೇಗಾಲ ತಾಲ್ಲೂಕಿನಿಂದ ಚಿಕ್ಕಲ್ಲೂರು, ತೆಳ್ಳೂರು ಮಾರ್ಗವಾಗಿಯೂ ಜನ ಬಂದು ಸುಮಾರು ೧೦ ಸಾವಿರಕ್ಕೂ ಹೆಚ್ಚು ಮಂದಿ ಸೇರುತ್ತಾರೆ. ಇತ್ತೀಚಿಗೆ ನಾಲ್ಕಾರು ಖಾಸಗಿ ವಸತಿಗೃಹಗಳು, ಛತ್ರ ನಿರ್ಮಾಣವಾಗಿದ್ದರೂ ಸಾಲುವುದಿಲ್ಲ. ಆದುದರಿಂದ ಮುತ್ತತ್ತಿ ದೇವಾಲಯದ ಆವರಣದಿಂದ ಹಿಡಿದು ನದಿಯ ತೀರದವರೆಗೂ ಭಕ್ತಜನ ಜಮಾವಣೆಯಾಗುತ್ತಾರೆ. ಕೈಗಳಲ್ಲಿ ಒಂದೊಂದು ಮಚ್ಚುಗಳನ್ನು ಪುರುಷರು ಹಿಡಿದುಕೊಂಡು ಬೆಟ್ಟದ ಬಳಿಯ ಮರಗಳಿಂದ ನಾನಾ ಪ್ರಕಾರದ ಸೊಪ್ಪುಗಳನ್ನು ಕಡಿದು ಹೊತ್ತುತಂದು ಮಲಗಿಕೊಳ್ಳು ಹಾಸಿಕೊಳ್ಳುತ್ತಾರೆ. ಮನೆಯಿಂದ ತಾವು ತಂದಿರುವ ಹುಳಿಅನ್ನದಮುದ್ದೆ, ರಾಗಿರೊಟ್ಟಿ, ಹುರುಳಿಕಾಳು ಜುನುಕ, ಇತರ ಚಟ್ನಿಗಳನ್ನು ಸವಿಯುತ್ತಾರೆ. ಮತ್ತೇ ಸಾಲದೇ ಬಂದವರು ಅಲ್ಲೇ ಕಲ್ಲುಗಳನ್ನೊಡ್ಡಿ ಒಲೆ ಹೊತ್ತಿಸಿ ರಾಗಿ ಮುದ್ದೆ, ಅನ್ನಸಾರು ಇತ್ಯಾದಿಗಳನ್ನು ಮಾಡಿ ಸಾಮೂಹಿಕವಾಗಿ ಕುಳಿತು ಊಟ ಮಾಡಿ, ಮುತ್ತತ್ತಿರಾಯನಿಗೆ ಸಂಬಂಧಿಸಿದ ಕತೆಗಳನ್ನು ಮತ್ತು ಮಹದೇಶ್ವರ, ಮಂಟೇಸ್ವಾಮಿ, ಸಿದ್ಧಾಪ್ಪಾಜಿಯವರಿಗೆ ಸಂಬಂಧಿಸಿದ ಕತೆ, ಕಾವ್ಯದ ತುಣುಕುಗಳು, ಇತರ ಜನಪದ ಹಾಡುಗಳನ್ನು ಹೇಳಿಕೊಳ್ಳುತ್ತಾ ಕೆಲವರು ದೇವಾಲಯದ ಬಳಿ ಸಾಲುಗಟ್ಟಿರುವ ಅಂಗಡಿ, ಹೋಟೆಲುಗಳ ಮುಂದೆ ಸುಳಿದಾಡುತ್ತಾ ಕಾಲ ಕಳೆಯುತ್ತಿರುತ್ತಾರೆ.

ದೇವಾಲಯ ಹಳೆಯದಿದ್ದಾಗ ದೇವಾಲಯದ ಸುತ್ತವೇ ಅಲ್ಲದೆ ಎದುರಿಗಿರುವ ಭೈರವಗುಡಿಯ ಎತ್ತರವಾದ ಕಟ್ಟೆಯ ಮೇಲೆ, ಎದುರಿಗಿರುವ ಪುಟ್ಟಕೊಂಡದ ಸುತ್ತ ನೆರೆದಿರುತ್ತಾ ಇಡೀ ರಾತ್ರಿಯನ್ನು ಕಳೆಯುತ್ತಿದ್ದರು. ಹೆಂಡದ ಮಾರಾಟದ ಸಮಯದಲ್ಲಂತೂ ಕತ್ತೆಗಳ ಮೇಲೆ ಹೇರಿಕೊಂಡು ಹಲಗೂರಿನಿಂದ ತಂದು ಮಾರುತ್ತಿದ್ದರು. ಕುಡಿಯುವವರಿಗಂತೂ ಬಲು ಸುಗ್ಗಿಯಾಗಿ ಪರಿಣಮಿಸುತ್ತಿತ್ತು. ಈಗ ಆ ಸ್ಥಾನವನ್ನು ಪಾಕೆಟ್ ಸಾರಾಯಿಯೇ ಅಲ್ಲದೇ ಪಾಶ್ಚಾತ್ಯ ಮದ್ಯಪಾನಗಳು ಆಕ್ರಮಿಸಿಕೊಂಡಿವೆ. ರಾತ್ರಿಯೆಲ್ಲ ಈ ಅಂಗಡಿಗಳ ಬಳಿ ಓಡಾಡಿಕೊಂಡು ಆಗಾಗ ಈ ಮದ್ಯಪಾನವನ್ನು ಮಾಡುತ್ತಿರುತ್ತಾರೆ. ಅಂದೇ ಮುತ್ತತ್ತಿರಾಯನ ಉಪವಾಸವಾದುದರಿಂದ ಸುಮಾರು ಹತ್ತು ಗಂಟೆ ವೇಳೆಗೆ ದೇವರ ತಳಿಗೆಮನೆಯಲ್ಲಿ ತಯಾರಿಸಿದ ಬೆಲ್ಲದ ಪೊಂಗಲ್‌ನ್ನು ದೇವರ ಬಳಿಗೆ ತಮ್ಮಡಿಗಳು ನಡೆ ಮುಡಿಗಳ ಚವರಿ ಮತ್ತು ಕೊಂಡಕಾರರ ಸಹಾಯದಿಂದ ತಂದು ಎಡೆಯಿಟ್ಟು ಪೂಜಿಸುತ್ತಾರೆ. ನಂತರ ಭಕ್ತರಿಗೆ ರಸಾಯನದ ಪಂಚಾಮೃತ ಪ್ರಸಾದ ವಿನಿಯೋಗವಾಗುತ್ತದೆ.

ದೇವರು ಸಹ ಮನುಷ್ಯನ ಹಾಗೆ ತಿನ್ನುತ್ತಾನೆ, ತಿರುಗುತ್ತಾನೆ, ವಸ್ತ್ರಗಳನ್ನು ಧರಿಸುತ್ತಾನೆ, ನಿದ್ರೆ ಉಪವಾಸಗಳನ್ನು ಮಾಡುತ್ತಾನೆ ಎಂದ ನಂಬಿರುವ ಗ್ರಾಮೀಣಭಕ್ತರು ಆರಾಧನೆಯಲ್ಲಿ ಈ ಉಪವಾಸವನ್ನು ಅಳವಡಿಸಿಕೊಂಡಿದ್ದಾರೆ. ಅಂದು ತಮ್ಮಡಿಗಳು ಸಹ ಉಪವಾಸವಿದ್ದು ಮಡಿಯಿಂದ ದೇವರ ಉಪವಾಸವನ್ನು ಮುಗಿಸಿ ತಾವು ಆಹಾರವನ್ನು ಸ್ವೀಕರಿಸುತ್ತಾರೆ.

ಗುರುವಾರ ಬೆಳಗ್ಗೆ ಸಡಗರವೋ ಸಡಗರ. ಎಲ್ಲರೂ ಎದ್ದು ನಿತ್ಯಕರ್ಮಗಳಿಗಾಗಿ ಕಾಡಿನ ಮರದ ಮರೆಗಳು, ಬಯಲುಗಳಿಗೂ ಹೋಗಿ ನದಿಯ ಕಡೆಗೆ ಬರುತ್ತಾರೆ. ಅಲ್ಲಿ ಕೊಳಕಾದರೂ ಹರಿಯುವ ನದಿಯಲ್ಲಿ ಇದೆಲ್ಲ ಗಣನೆಗೆ ಬರುವುದಿಲ್ಲ. ಮೂರು ಬೆಟ್ಟಗಳ ನಡುವೆ ಮೇಕೆದಾಟುವಿನ ಕಡೆಗೆ ತಿರುಗುವ ನದಿ, ನದಿಯಿಂದ ಮುಂಜಾನೆ ಹೊರಬರುವ ಹೊಗೆ, ಸುತ್ತಲಿನ ಅರಣ್ಯಸಸ್ಯಗಳ ಚೆಲುವು, ಭಕ್ತರಿಗೆ ಮುದವನ್ನು ಹೆಚ್ಚಿಸುತ್ತದೆ. ಕೆಲವರು ಇದೆಲ್ಲ ಮುತ್ತಪ್ಪನ ಕೃಪೆ ಎಂದೇ ಭಾವಿಸಿ ಸ್ನಾನವನ್ನು ಮಾಡುತ್ತಾರೆ. ಎರಡು ಕಿ.ಲೋ.ಮೀಟರ್ ತನಕ ಈ ಮಜ್ಜನಕಾರ್ಯ ನಡೆಯುತ್ತದೆ. ದೇವರ ಮಜ್ಜನಸೇವೆ, ಹಲಗೂರಿನ ಬ್ರಾಹ್ಮಣ ಮನೆತನದ ಅರ್ಚಕರು ನದಿಗೆ ಬಂದು ಸ್ನಾನ ಮಾಡಿ ಮಡಿಯುಟ್ಟು ಈ ಸ್ಥಳಗಳಲ್ಲೆಲ್ಲಾ ಆಯಕಟ್ಟಿನ ಸ್ಥಳಗಳಿಗೆಲ್ಲಾ ಒಂದೊಂದು ಕಡಗಳೆಂದು ಹೆಸರನ್ನು

ನೀಡಲಾಗಿದೆ. ಅವುಗಳೆಂದರೆ ; ಭೀಮೇಶ್ವರಿಕಡ, ತಿರುಗಣೆಮಡಕಡ, ಅರಗಲಕಡ (ದೋಣಿಕಡ), ದಾಸಗೊಳಕಡ, ವಸಂತರಾಯನಕಡ, ಮಜ್ಜನಕಡ, ಉಗನೇದೊಡ್ಡಿಕಡ, ಇಟ್ರೆಕಲ್ಲುಕಡ, ದೊಮ್ಮನಕಡ, ಐರಾಕುಂಟ-ಮಾರ್ರಟ್ಟಿಕಡ ಎಂದು ಇವುಗಳಲ್ಲೆಲ್ಲಾ ಭಕ್ತರು ತುಂಬಿ ಸ್ನಾನಶೌಚಗಳನ್ನು ಮುಗಿಸುತ್ತಾರೆ. ಹೆಂಗಳೆಯರು ನದಿಯ ದಡದಲ್ಲಿರುವ ಪುಟ್ಟ ಪುಟ್ಟ ೭ ಕಲ್ಲುಗಳನ್ನು ಇಟ್ಟು ಗಂಗೆಪೂಜೆ ಮಾಡುತ್ತಾರೆ. ಕಲ್ಲುಗಳಿಗೆ ಅರಿಶಿನ, ಕುಂಕುಮ, ಬಾಳೇಹಣ್ಣು, ವೀಳೆದೆಲೆ, ಅಡಿಕೆಗಳನ್ನಿಟ್ಟು ತೆಂಗಿನಕಾಯಿ ಹೊಡೆದು ಅಗರಬತ್ತಿ ಮತ್ತು ಕರ್ಪೂರಗಳಿಂದ ಪೂಜಿಸುತ್ತಾರೆ. ವೀಳೆದೆಲೆಯ ಮೇಲೆ ನಾಣ್ಯವನ್ನು, ಕರ್ಪೂರಗಳನ್ನಿಟ್ಟು ನೀರಿನಲ್ಲಿ ತೇಲಿಬಿಡುತ್ತಾರೆ. ಹಾಗೆ ತೇಲಿಬಿಟ್ಟ ಎಲೆ ಬಹುದೂರ ಹೋದರೆ ಪಾಪವೆಲ್ಲಾ ಕಳೆದುಹೋಯಿತು, ಅಲ್ಲೇ ಮುಳುಗಿಹೋದರೆ ಇನ್ನು ಪಾಪ ಕಳೆದಿಲ್ಲವೆಂದು ನಂಬಿಕೆ ಇರಿಸಿಕೊಂಡಿದ್ದಾರೆ. ಮಡಿ ಬಟ್ಟೆಗಳನ್ನು ಧರಿಸಿ ಮಲಿನ ವಸ್ತ್ರಗಳನ್ನು ತೊಳೆದು ಒಣಗಿಸಲು ಹಾಕುತ್ತಾರೆ. ಉರುಳುಸೇವೆ ಹರಕೆ ಹೊತ್ತವರು ನದಿಯ ತೀರದಿಂದ ಕೈಯಲ್ಲಿ ಅಗರಬತ್ತಿಗಳನ್ನು ಹಿಡಿದು ದೇವರಿಗೆ ಗೋವಿಂದಾವಿಡುತ್ತಾ ದೇವಾಲಯದ ಬಳಿಯವರೆಗೂ ಅಲ್ಲಲ್ಲಿ ಉರುಳುತ್ತಾ ತುಸುದೂರ ನಡೆಯುತ್ತಾ ಸಾಗುತ್ತಾರೆ. ದೇವಾಲಯದ ಬಳಿ ಬಂದು ದೇವಾಲಯವನ್ನು ಮೂರು ಸುತ್ತು ಉರುಳಿ ದೇವಾಲಯದೊಳಗೆ ಪ್ರವೇಶಿಸಿ ಪೂಜೆ ಮಾಡಿಸಿಕೊಂಡು ನದಿಗೆ ಮರಳಿ ಮತ್ತೊಮ್ಮೆ ಮಿಂದು ಮಡಿಯುಟ್ಟು ಸಿದ್ಧರಾಗುತ್ತಾರೆ.

ನದಿಯ ತೀರದಲ್ಲಿಯೇ ನೀರಿಗೆ ಆಸರೆಯಿರುವ ಆಯಾಕಟ್ಟಿನ ಸ್ಥಳದಲ್ಲಿ ಬಲಿ, ಅಡುಗೆ, ಪೂಜೆಗಳನ್ನು ಮಾಡಿ ಊಟಕಾರ್ಯ ಮುಗಿಸುತ್ತಾರೆ. ಬಹಳಷ್ಟು ದಾಸಯ್ಯಗಳು ಈ ವೇಳೆಯಲ್ಲಿ ನದಿ ತೀರದಲ್ಲಿ ಮುಡಿ ತೆಗೆಸಿ ಮಿಂದವರಿಗೆ ನಾಮವನ್ನಿಡುತ್ತಾರೆ. ಅಷ್ಟರಲ್ಲಿ ದೇವಾಲಯಕ್ಕೆ ಬಂದಿರುವ ವೈದಿಕ ಅರ್ಚಕರು ನದಿಯಲ್ಲಿ ಮಿಂದು ಮಡಿ ವಸ್ತ್ರಗಳನ್ನು ಧರಿಸಿ ಕುಂಭಗಳಲ್ಲಿ ಶುದ್ಧಜಲವನ್ನು ತೆಗೆದುಕೊಳ್ಳುತ್ತಾರೆ. ಛತ್ರಿ, ಚವರಿ ಮತ್ತು ಮಡುವಾಳಿ ಹಾಸುವ ನಡೆಮುಡಿಗಳ ಮೇಲೆ ದೇವಾಲಯಕ್ಕೆ ತಂದು ದೇವರಿಗೆ ಜಲಾಭಿಷೇಕ ಮಾಡಿ, ಬಗೆ ಬಗೆಯ ಹೂವು, ತುಳಸಿಮಾಲೆಗಳನ್ನು ಹಾಕಿ, ನಾಮ, ಕುಂಕುಮಗಳನ್ನು ಲೇಪಿಸಿ ಶಾಸ್ತ್ರೋಕ್ತವಾಗಿ ಮಧ್ಯಾಹ್ನ ೧೨ ಗಂಟೆಯವರೆಗೂ ಪೂಜೆ ನಡೆಸುತ್ತಾರೆ. ನಂತರ ತಮ್ಮಡಿಗಳ ಪೂಜೆ ಈ ವೇಳೆಯಲ್ಲಿ ಭಕ್ತರು ಭಕ್ತಿಯಿಂದ ತಂದ ಬಾಳೇಹಣ್ಣು ಮುರಿಯುತ್ತಾ ತೆಂಗಿನಕಾಯಿ ಹೊಡೆದು ಪೂಜಿಸಿ ನೀಡುತ್ತಿರುತ್ತಾರೆ. ಭಕ್ತರು ತೀರ್ಥವನ್ನು ಪಡೆದು ಬಾಟಲಿಯಲ್ಲಿ ತುಂಬಿಸಿಕೊಂಡು ಹೊರಗೆ ಬಂದು ದೇವರಿಗೆ ಅಡ್ಡಬಿದ್ದು ಈಡುಗಾಯಿಗಳನ್ನು ಹೊಡೆಯುತ್ತಾರೆ. ನಂತರ ಜಾತ್ರಾ ನೋಟಗಳಲ್ಲಿ ತಮ್ಮನ್ನು

ತೊಡಗಿಸಿಕೊಳ್ಳುತ್ತಾರೆ. ಜಾತ್ರೆಗಳಲ್ಲಿ ಇತ್ತೀಚೆಗೆ ತಾತ್ಕಾಲಿಕ ಸ್ಟುಡಿಯೋ, ಕ್ಯಾಸೆಟ್, ಸಿ.ಡಿ. ಮಾರಾಟದ ಅಂಗಡಿ, ದಿನಬಳಕೆಯ ವಸ್ತುಗಳು, ಊಟದೆಲೆಗಳ ಅಂಗಡಿಗಳು, ತಿಂಡಿ ಊಟಗಳ ಸಸ್ಯಹಾರಿ, ಮಾಂಸಾಹಾರಿ ಹೋಟೆಲುಗಳು ಕಳೆಯನ್ನು ತಂದಿರುತ್ತವೆ. ಇಲ್ಲೆಲ್ಲಾ ಜನರು ವ್ಯವಹಾರವನ್ನು ನಡೆಸುತ್ತಾ ಜಾತ್ರೆಯಲ್ಲಿ ಪಾಲ್ಗೊಳ್ಳುತ್ತಾರೆ.

ಮಧ್ಯಾಹ್ನ ಹಾಲರಬಿ, ಕಾಯಿಸೇವೆ ಕ್ರೀಡೆಗಳಾದ ಮೇಲೆ ಇತ್ತೀಚೆಗೆ ಭಕ್ತರೊಬ್ಬರು ನೀಡಿರುವ ಪುಟ್ಟ ರಥದಲ್ಲಿ ಸಂಜೆ ತೇರು ಎಳೆಯುವ ವ್ಯವಸ್ಥೆಯು ನಡೆಯುತ್ತದೆ. ದೇವರ ಉತ್ಸವಮೂರ್ತಿಯನ್ನು ಹೂವುಗಳಿಂದ ಶೃಂಗರಿಸಿದ ರಥದಲ್ಲಿರಿಸಿ ನದಿ ತೀರದವರೆಗೂ ಮೆರವಣಿಗೆ ಮಾಡುತ್ತಾರೆ. ಮನೆಗಳಿಗೆ ತೆರಳುವವರು, ವಾಹನಗಳಲ್ಲಿ ತೆರಳುತ್ತಿರುತ್ತಾರೆ. ತಮ್ಮಡಿ ಮುಕ್ತಾಯದ ಪೂಜೆಯನ್ನು ದೇವಾಲಯದಲ್ಲಿ ಮಾಡುವುದರೊಂದಿಗೆ ಜಾತ್ರೆ ಮುಕ್ತಾಯವಾಗುತ್ತದೆ. ಮೊದಲು ಇಲ್ಲಿಯ ರೋಗ, ಪೀಡೆ, ಗಾಳಿಯನ್ನು ಹೋಗಲಾಡಿಸುವ ಯಂತ್ರವನ್ನು ತಮ್ಮಡಿ ಕಟ್ಟುದಿದ್ದನಾದರೂ ಇತ್ತೀಚೆಗೆ ಆ ಪದ್ಧತಿ ಇಲ್ಲವಾಗಿದೆ. ಉಳಿಯುವವರು ಅಲ್ಲೇ ಮಲಗಿದ್ದು ನಂತರ ಮನೆಗಳಿಗೆ ತೆರಳುತ್ತಾರೆ. ನದಿಯಲ್ಲಿ ಸ್ನಾನ, ಈಜುವ ಕಾರಣದಿಂದ ಕೊಚ್ಚಿಕೊಂಡು ಹೋಗುವ ಘಟನೆಗಳು ಈ ಜಾತ್ರೆಯಲ್ಲಿ ಸಾಮಾನ್ಯ ಕೆಲವು ವೇಳೆ ಕಿಡಿಕೇಡಿಗಳ ದುಷ್ಕೃತ್ಯಕ್ಕೆ ಜಗಳ ಪೋಲಿಸ್ ಲಾಠಿಜಾರ್ಜ ನಡೆದು ಜಾತ್ರೆ ಅವ್ಯವಸ್ಥೆಗೆ ಒಳಗಾಗುವುದುಂಟು.

ಜಾತ್ರೆಯಲ್ಲಿ ಸೋಲಿಗರು ತಂದು ನೀಡಿರುವ ಧೂಪ, ಜೇನುತುಪ್ಪಗಳು ಮಾರಾಟದ ವಿಶೇಷಗಳಾದರೂ ಅಷ್ಟೇನೂ ಮಾರಾಟವಾಗುವುದಿಲ್ಲ. ರಸ್ತೆಗಳು ಉತ್ತಮವಾಗಿ ಸಾರಿಗೆ ಸಂಪರ್ಕಗಳು ಉತ್ತಮವಾದ ಮೇಲೆ ಜಾತ್ರೆಯಲ್ಲಿ ಜನರ ಸಂಖ್ಯೆ ಕಡಿಮೆಯಾಗತೊಡಗಿದೆ. ಬಂದವರು ಬಹುಬೇಗ ಮನೆಗಳಿಗೆ ತೆರಳುವುದರಿಂದ ಈ ಭಾವನೆ ಬಂದಿದೆ. ಬಸವನಬೆಟ್ಟ ಅರಣ್ಯದ ಕುಗ್ರಾಮದಲ್ಲಿ ನಡೆಯುತ್ತಿರುವ 'ಮುತ್ತತ್ತಿ ಜಾತ್ರೆ' ಕರ್ನಾಟಕ ಜಾನಪದ ಕ್ಷೇತ್ರದಲ್ಲಿ ಗುರುತಿಸಿಕೊಳ್ಳುವ ಕಾರ್ಯ ಆಗಬೇಕಾಗಿದೆ.

## ೪.೧ ಹಾಲರಬಿ ಸೇವೆ

ಮುತ್ತತ್ತಿ ಜಾತ್ರೆಯ ಪ್ರಮುಖಭಾಗವಾಗಿ ಈ ಸೇವೆ ನಡೆಯುತ್ತದೆ. ಮಡಿಕೆಯೊಂದರಲ್ಲಿ ಹಾಲು, ಮೊಸರು, ತುಪ್ಪ, ಬೆಣ್ಣೆಗಳನ್ನು ಹಾಕಿ ಮಡಕೆಯ ಕಂಟಕ್ಕೆ ಉದ್ದನೆಯ ಮತ್ತು ಗಟ್ಟಿಯಾದ ಹಗ್ಗವನ್ನು ಕಟ್ಟಿ ಮುತ್ತತ್ತಿರಾಯ ದೇವಾಲಯದ ಆವರಣದಲ್ಲಿರುವ ಅರಳಿಮರದ ಮೇಲಿನಿಂದ ಇಳಿಬಿಟ್ಟು ಕೆಳಗಿರುವ ಮಾದಿಗ ಭಕ್ತರು ದೊಣ್ಣೆಗಳಿಂದ ಹೊಡೆಯುವುದೇ ಆಗಿದೆ. ಇದು ಒಂದು ಕ್ರೀಡಾರೂಪದ ಸೇವೆಯೇ ಆಗಿದೆ. ಹಾಲು+ಅರವಿ ಸೇರಿ ಹಾಲರಬಿಯಾಗಿದೆ. ಗ್ರಾಮೀಣ ದೇವತೆಗಳಿಗೆ ಆಲರವಿಸೇವೆ ಬಹುಪ್ರಿಯ. ವಿವಿಧ ಭಾಗಗಳಲ್ಲಿ ಬಗೆಬಗೆಯಾಗಿ ಹಾಲರವಿ ಸೇವೆಗಳು ನಡೆಯುತ್ತದೆ. ಅವು ಶೈವ ವೈಷ್ಣವ ದೇವತೆಗಳ ಬೇಧಗಳಿಲ್ಲದೆ. ಈ ಹಿನ್ನೆಲೆಯಲ್ಲಿಯೇ ಜನಪ್ರಿಯ ಜನಪದ ಗೀತೆ –

**"ಹಾಲರವಿ ಬಂದೊ ನೂರೊಂದ್ ಆಲರವಿ ಬಂದೊ**
**ಆಲರವಿ ಮೇಲೊಂದೂವಿನದಂಡೆವಾಲಾಡಿ ಬಂದೊ"**

ವೈಷ್ಣವ ಪಂಥದ ಶ್ರೀಕೃಷ್ಣನಿಗೆ ಹಾಲು, ಮೊಸರು, ಬೆಣ್ಣೆ, ತುಪ್ಪಗಳೆಂದರೆ ಅತ್ಯಂತ ಪ್ರಿಯವಾದ ಸೇವಿಸುವ ವಸ್ತುಗಳು. ಕೃಷ್ಣನ ಜನ್ಮದಿನವಾದ ಗೋಕುಲಾಷ್ಟಮಿಯ ವೇಳೆಗಳಲ್ಲಿ ಭಾರತದಾದ್ಯಂತ ಹಾಲರವಿಗೆ ಸಂಬಂಧಿಸಿದ ವಿವಿಧ ಸೇವೆಗಳ ಕ್ರೀಡೆಗಳು ಜರಗುತ್ತವೆ. ಮಥುರ ಮುಂಬೈಗಳಲ್ಲೂ ಸಹ ಅತಿವಿಜೃಂಭಣೆಯಿಂದ ಮೊಸರಿನಗಡುಗೆ ಮುಟ್ಟುವ ಹೊಡೆಯುವ ಸೇವೆಗಳು ನಡೆಯುತ್ತವೆ.

ಕೆ.ಅನಂತರಾಮುರವರು ತಾವು ಕಂಡ ಹಾಲರಬಿ ಸೇವೆಯೊಂದನ್ನು ತಮ್ಮ ಪುಸ್ತಕದಲ್ಲಿ ಹೀಗೆ ದಾಖಲಿಸಿದ್ದಾರೆ. "ಏಳಗಳ್ಳಿಗ್ರಾಮದ ಮುತ್ತೇಗೌಡರ ಮನೆಯಿಂದ ಚಿಕ್ಕದೊಂದು ಮಣ್ಣಿನ ಹರಬಿಯಲ್ಲಿ ಹಾಲು ಬರುತ್ತದೆ. ಆಮೇಲೆ ದೇವಾಲಯದ ಮುಖ್ಯಸ್ಥರು ಮಾದಿಗರ ಯಜಮಾನನನ್ನು ಆಹ್ವಾನಿಸಿ ದೇವರೆದುರಿನಲ್ಲಿ ಆತನಿಗೆ ಹೂಮಾಲೆಯನ್ನು ಹಾಕಿ ಹಾಲರಬಿಸೇವೆ, ಕಾಯಿಸೇವೆಗಳಿಗೆ ಅಣಿಯಾಗಬೇಕೆಂದು ಹೇಳುತ್ತಾರೆ. ಅವನು ತನ್ನ ದಂಡಧಾರಿತ ತಂಡದವರೊಡನೆ ದೇವಾಲಯದ ಎದುರಿಗಿರುವ ಧೂಪದ ಮರದಡಿಯಲ್ಲಿ ಹೋಗಿ ನಿಲ್ಲುತ್ತಾನೆ. ತಮ್ಮಡಿಯೊಬ್ಬನು ಹಾಲಿನ ಹರಿಬಿಯನ್ನು ಒಂದು ಹಗ್ಗದೊಳಗಿಟ್ಟುಕೊಂಡು ಆ ಮರದ ಮೇಲೇರಿ ಕುಳಿತುಕೊಳ್ಳುತ್ತಾನೆ.

ಆ ಹರಬಿಯನ್ನು ಕೆಳಗೆ ನಿಂತು ದೊಣ್ಣೆ ಬೀಸುವವರಿಗೆ ಎಟಕಲೂ ಬೇಕು, ಎಟಕಲೂ ಬಾರದೆಂಬಂತೆ ಕೆಳಕ್ಕೂ, ಮೇಲಕ್ಕೂ ಅಕ್ಕಕ್ಕೂ, ಪಕ್ಕಕ್ಕೂ ತೂಗಾಡಿಸುತ್ತಿರುತ್ತಾನೆ. ಕೆಳಗಿದ್ದವರು ಹಾರಿ ಹಾರಿ, ನೆಗೆನೆಗೆದು, ಕುಣಿಕುಣಿದು ತಮ್ಮ ದೊಣ್ಣೆಗಳಿಂದ ಅದನ್ನು ಜಡೆದು ಹಾಕಲು ಯತ್ನಿಸುತ್ತಾನೆ. ಯಾವುದೋ ಕ್ಷಣದಲ್ಲಿ ಬಹು ಎತ್ತರಕ್ಕೆ ನೆಗೆದು ದೊಣ್ಣೆ ಬೀಸಿದವನ ಏಟಿಗೆ ಆ ಹರಬಿ ಬಲಿಯಾಗುತ್ತದೆ. ಅದರಲ್ಲಿರುವ ಹಾಲೆಲ್ಲ ಕೆಳಕ್ಕೆ ಸುರಿಯುತ್ತದೆ. ಎಲ್ಲರೂ ಅದಕ್ಕೆ ಮೈಯೊಡ್ಡಿ ನೆನೆದು, ಸ್ವಾಮಿಯು ತಮ್ಮ ಮೇಲೆ ಕೃಪಾವರ್ಷವನ್ನು ಸುರಿಸಿದನೆಂದು ಆನಂದ ಪಟ್ಟುಕೊಳ್ಳುತ್ತಾರೆ. ಹಾಲರಬಿಸೇವೆ ಮತ್ತು ಕಾಯಿಸೇವೆಗಳು ಸೇವೆ ಎಂದಾದರೂ, ನಿಜವಾಗಿ ನೋಡಿದರೆ ಅವು ದೊಣ್ಣೆ ಸೇವೆಗಳು. ಜಾತ್ರೆಯ ಸಂಭ್ರಮದಲ್ಲಿ ಮಾದಿಗರನ್ನೂ ಒಳಗು ಮಾಡಿಕೊಳ್ಳಲು ಬಹಳ ಹಿಂದೆಯೇ ತಿಳುವಳಿಕಸ್ಥರು ರೂಪಿಸಿರುವ ಕ್ರೀಡೆಗಳು ಅವೆಂದು ಭಾವಿಸಬಹುದಾಗಿದೆ.[೯]"

ಕೆ.ಅನಂತರಾಮುರವರು ವರ್ಣಿಸಿರುವ ಹಾಗೆ ಈ ಕ್ರೀಡೆ ಇಂದಿಗೂ ಜಾತ್ರೆಯಲ್ಲಿ ನಡೆಯುತ್ತಿರುವುದಾದರೂ ಬುರುಗದ ಮರದ ಬದಲಿಗೆ ಅರಳಿಮರ ಬಂದಿದೆ. ಅರಳಿಮರದ ಬುಡದಲ್ಲಿ ಮೊಸಳೆಕಾಳಗದ ಮತ್ತು ಇನ್ನೊಂದು ವೀರಗಲ್ಲನ್ನು ನಿಲ್ಲಿಸಲಾಗಿದೆ. ಏಳಗಳ್ಳಿ ಮುತ್ತೇಗೌಡರ ಮನೆಯಿಂದಲೇ ಹಾಲರಬಿ ಬರುವುದು ಸಂಕೇತ ಪರಿಶೀಲಿಸಿದರೆ, ದೇವಾಲಯ ಬೆಳೆದಂತೆ ಜಾತ್ರೆ ಹಮ್ಮಿಕೊಂಡಂತೆ ಇವರ ಮನೆಯಿಂದ ಹಾಲರಬಿ ಕಳುಹಿಸುವ ವ್ಯವಸ್ಥೆ ಆಗಿರಬಹುದು. ಏಳಗಳ್ಳಿ ಈಗ ಕನಕಪುರ ತಾಲ್ಲೂಕಿಗೆ ಸೇರಿದೆ. ಮನೆಯಲ್ಲಿ ಮಡಿ ಇದ್ದು ಅಂಟುಮುಟ್ಟು ಸೋಂಕದೆಹಾಗೆ ಪೂಜೆ ಮಾಡಿ ಶುಚಿಯಾದ ಹಾಲು, ಮೊಸರು, ಬೆಣ್ಣೆ, ತುಪ್ಪಗಳನ್ನು ಪುಟ್ಟ ಗಡಿಗೆ ಅಥವಾ ಅರವಿಗೆ ಹಾಕಿ ದೇವರ ಬಳಿಯಿಟ್ಟು ಪೂಜಿಸಿ ಇಲ್ಲಿಗೆ ತಂದು ದೇವರ ಬಳಿ ತಮ್ಮಡಿಗೆ ಅರ್ಪಿಸುತ್ತಾರೆ. ತಮ್ಮಡಿಯು ಅದಕ್ಕೆ ನಾಮವಿಟ್ಟು ಹೂವಿನ ಶೃಂಗಾರಗಳನ್ನು ಮಾಡಿ ಪೂಜಿಸಿ ಚವರಿ ಬೀಸುವವರ ಸಹಿತ ನಡೆಮುಡಿಯೊಡನೆ ದೇವಾಲಯದ ಬಲಬದಿಯಲ್ಲಿರುವ ಅರಳಿಮರದತ್ತ ಬರುತ್ತಾನೆ. ಹಿಂದೆ ಕುಣಿಕುಣಿದು ಎಲ್ಲಾ ಮಾದಿಗ ಭಕ್ತರು ತಮ್ಮ ತಮ್ಮ ದೊಣ್ಣೆಗಳನ್ನಿಡಿದು ಬರುತ್ತಾರೆ. ದೇವಾಲಯವನ್ನು ಒಂದು ಸುತ್ತು ಬಳಸಿಬಂದು ಮರದಡಿ ಇರುವ ವೀರಗಲ್ಲುವಿಗೆ ಹೂಮಾಲೆ ಹಾಕಿ ನಾಮ ಲೇಪಿಸ, ಎಣ್ಣೆ ಮಜ್ಜನಮಾಡಿ ಪೂಜಿಸುತ್ತಾನೆ. ಗಡಿಗೆ ಹೊಡೆಯಲು ಸಿದ್ಧರಿರುವ ದೊಣ್ಣೆ ಹಿಡಿದಿರುವ ಮಾದಿಗ ಭಕ್ತರೆಲ್ಲ ಹಾಲರಬಿಗೆ ಮುಟ್ಟಿ ನಮಸ್ಕಾರ ಮಾಡುತ್ತಾರೆ. ನಂತರ ಏಣಿಯ ಸಹಾಯದಿಂದ ತಮ್ಮಡಿಯು ಮರವನ್ನು ಏರಿ ಮೊದಲೇ

ಅಲ್ಲೊಂದು ಅಡ್ಡಕಂಬವನ್ನು ಕಟ್ಟಿರುತ್ತಾರೆ. ಅದಕ್ಕೆ ಇಳಿಬಿಟ್ಟಂತ ಹಾಲರವಿ ಕಂಠಕ್ಕೆ ಬಿಗಿದ ಉದ್ದನೆಯ ಹಗ್ಗವನ್ನು ಆಡಿಸುತ್ತ ಕೆಳಗೆ ಬಿಡುತ್ತಿರುತ್ತಾನೆ. ದೊಣ್ಣೆಗಳನ್ನು ಹಿಡಿದ ಮಾದಿಗರು ಇದನ್ನು ಚಚ್ಚಲು ಕಾತರದಿಂದ ಎಗಾರಾಡುತ್ತಿರುತ್ತಾರೆ. ತಮ್ಮಡಿಯು ಹಗ್ಗದಿಂದ ಬಿಗಿದ ಹಾಲರವಿಯನ್ನು ಕೆಳಕ್ಕೆ ಬಿಡುತ್ತಲೂ ಮೇಲಕ್ಕೆ ಎಳೆದುಕೊಳ್ಳುತ್ತಾನೆ. ಕೊನೆಗೊಮ್ಮೆ ಮಾದಿಗರ ಅರವಿ ಹೊಡೆಯಲು ಸಫಲಾರಾದಾಗ ಅವರ ಸಂತೋಷಕ್ಕೆ ಪಾರವೇ ಇರುವುದಿಲ್ಲ. ಸಂತೋಷದಿಂದ ಕುಣಿದಾಡುತ್ತ ಹೊಡೆದ ಮಡಕೆಯಿಂದ ಬಿದ್ದ ಹಾಲುಮೊಸರು ಬೆಣ್ಣೆತುಪ್ಪಗಳ ತುಣುಕುಗಳನ್ನು ಎತ್ತಿಕೊಂಡು ಹಣೆಗಳಿಗೆ ಲೇಪಿಸಿಕೊಳ್ಳುತ್ತಾರೆ. ಇಲ್ಲಿಗೆ ಹಾಲರಬಿ ಅಥವಾ ಹಾಲರವಿ ಸೇವೆ ಮುಕ್ತಾಯವಾಗುತ್ತದೆ. ಸಮಾಜದಲ್ಲಿ ಅಂತ್ಯಜರೆಂದು ಪರಿಗಣಿಸಲ್ಪಟ್ಟವರನ್ನು ಮಾನವೀಯತೆಯ ದೃಷ್ಟಿಯಿಂದ ಅಲ್ಲದೇ, ಈ ದೇವಾಲಯದ ಹಕ್ಕುದಾರರಾಗಿರುವವರಿಗೂ ಇದರಲ್ಲಿ ಪಾಲು ಇರಲೆಂದು ಜಾತ್ರೆಯಲ್ಲಿ ರೂಪಿಸಿಕೊಂಡಿರುವ ಆರಾಧನೆಯ ಸಾಮರಸ್ಯ ಇದಾಗಿದೆ.

ಪಂಡಿತ ಮ.ಮಲ್ಲಪ್ಪನವರು ಕೆ.ಅನಂತರಾಮುರವರು ವರ್ಣಿಸಿರುವ ವಿಷಯಗಳನ್ನೇ ತಿಳಿಸಿದ್ದರೂ “ಇದೊಂದು ದೊಣ್ಣೆದಾಂಡಿಗರ ಲೀಲಾವಿನೋದವೇ ಸರಿ[೨೦]” ಎಂದು ಉಲ್ಲೇಖಿಸಿದ್ದಾರೆ. ಪಾದ್ದಾರೆಗೂ ಸಹ ಮುತ್ತೇಗೌಡರ ಮನೆಯಿಂದಲೇ ಹಾಲರಬಿ ಬರುತ್ತದೆ. ಮುತ್ತತ್ತಿಯಲ್ಲಿ ಗುರುವಾರ ಜಾತ್ರೆಯಾದರೆ, ಪಾದ್ದಾರೆಯಲ್ಲಿ ಬುಧವಾರವೇ ನಡೆಯುತ್ತದೆ. ಅಲಸೂರು, ನಾಯಕನಹಳ್ಳಿ, ಬಾಳೇಹೊನ್ನಿಗ, ಮಳವಳ್ಳಿ, ದೊಡ್ಡಾಲಹಳ್ಳಿ, ಬೂದನೂರು ಮತ್ತು ಇತರ ಕಡೆಗಳಿಂದ ಬಂದ ಮಾದಿಗ ಜಾತಿಯ ಪುರುಷರು ಈ ಸೇವಾ ಕ್ರೀಡೆಗಳಲ್ಲಿ ಭಾಗವಹಿಸುತ್ತಾರೆ. ಸಂಬಾಪುರದ ಕದಂಬರಾಯನ ಗುಡಿ ಹೊನ್ನಗಳ್ಳಿ ಬಳಿಯ ಕಡೆಗುಡ್ಡೆ ಮುತ್ತಪ್ಪ ಮತ್ತು ಹನುಮೇನಹಳ್ಳಿ ಬಳಿಯಿರುವ ಗುಡಿಗಳ ಬಳಿಯು ಈ ಕ್ರೀಡೆ ಉತ್ಸವಗಳ ಸಮಯದಲ್ಲಿ ನಡೆಯುತ್ತದೆ. ಇಲ್ಲಿಯೂ ಸಹ ಹಾಲರಬಿಯನ್ನು ಹೊಡೆಯುವವರು ಮಾದಿಗರೇ ಆಗಿದ್ದಾರೆ. ಬೇರೆ ಬೇರೆ ತಮ್ಮಡಿಗಳು ಆಯಾ ದೇವಾಲಯಕ್ಕೆ ಸಂಬಂಧಿಸಿದವರು. ಹಾಲರಬಿಗಳನ್ನು ಹಿಡಿದುಬಿಡುತ್ತಾರೆ.

ದೇವರಿಗೆ ಪ್ರಿಯವಾದ ಹಾಲು, ಮೊಸರು, ಬೆಣ್ಣೆಗಳು ಪವಿತ್ರ, ಪೂಜಿಸಿದ ಅವುಗಳನ್ನು ಹಣೆಗೆ ಲೇಪಿಸಿಕೊಳ್ಳುವುದರಿಂದ ಒಳ್ಳೆಯದಾಗುತ್ತದೆ ಎಂಬ ಭಾವನೆ ಇದ್ದರೂ ಹಾಲರಬಿಯನ್ನು ಬ್ರಹ್ಮರಾಕ್ಷಸನ ತಲೆ ಎಂಬಂತೆ ಭಾವಿಸಿ ಅದನ್ನು ಒಡೆದು ದೇವತೆಗಳು ವಿಜಯಿಯಾದರು ಎಂಬ ಪ್ರತೀತಿಯನ್ನು ಗ್ರಾಮೀಣಭಕ್ತರು ಇರಿಸಿಕೊಂಡಿದ್ದಾರೆ. ಈ ಭಾಗದ ವಿಶಿಷ್ಟ ಹಾಲರಬಿ ಸೇವೆ ಇದಾಗಿದೆ.

## ೪.೨ ಕಾಯಿ ಹೊಡೆಯುವುದು

'ಕಾಯಿ ಹೊಡೆಯುವುದು (ಕಾಯಿಚಚ್ಚುವುದು) 'ಕಾಯಿಬುಡೊಸ್ಯಾವೆ' ಇವೆಲ್ಲಾ ಸಮಾನಾಂತರ ಪದಗಳಾಗಿ 'ಮುತ್ತತ್ತಿ' ಮತ್ತು 'ಪಾದ್ದಾರೆ' 'ಸಂಬಾಪುರದ ಕದಂಬರಾಯನಗುಡಿ'ಗಳ ಭಕ್ತರಲ್ಲಿ ಜನಪ್ರಿಯ ಸಹಜ ನುಡಿಗಳಾಗಿವೆ.

ಗೋಕುಲಾಷ್ಟಮಿ ಸಂದರ್ಭದಲ್ಲಿ ನಡೆಯುವ ಜಾತ್ರೆಯ ಒಂದು ಅಂಗವಾಗಿದೆ. ಹಾಲರಬಿ ಸೇವೆಯಾದ ನಂತರವೇ ಮಧ್ಯಾಹ್ನ ಈ ಕಾರ್ಯ ಜರಗುತ್ತದೆ. ವೈಷ್ಣವ ಪಂಥದಲ್ಲಿ ಇದು ದೈವವಾದ ಮುತ್ತತ್ತಿರಾಯನಿಗೆ ನಡೆದುಕೊಂಡು ಬಂದಿರುವ ಸೇವಾರೂಪದ ವಿಶಿಷ್ಟವು, ಸರಳವು ಆದ ದೊಣ್ಣೆಸೇವೆಯ ಕ್ರೀಡೆಯಾಗಿದೆ. ಇದು ಈ ಪರಿಸರದಲ್ಲೆಲ್ಲೂ ಕಾಣದ ಒಂದು ವಿಶಿಷ್ಟ ಬಗೆಯ ದೇವರ ಸೇವೆಯು ಹೌದು. ಇದರ ಆಶಯವೆಂದರೆ ದಾನವರನ್ನು ಕೊಲ್ಲುವುದು, ಎಳೆದಾಡಿಕೊಂಡು ಹೊಡೆದು ತಲೆಗಳನ್ನು ಚಚ್ಚುವುದು ಎಂಬುದಾಗಿದೆ. ಈ ಕುರಿತು ಇಲ್ಲಿ ಪ್ರಚಲಿತವಿರುವ ಒಂದು ಐತಿಹ್ಯ ಹೀಗಿದೆ :– "ರಾವಣನನ್ನು ಕೊಂದು ಶ್ರೀರಾಮ, ಸೀತೆ, ಲಕ್ಷ್ಮಣ, ಆಂಜನೇಯರು ಈ ಭಾಗದಲ್ಲಿ ಬರುತ್ತಿರುವಾಗ ಲಂಕೆಯಲ್ಲಿ ಅಳಿದುಳಿದ ರಾಕ್ಷಸರು ಹಿಂಬಾಲಿಸಿದರಂತೆ. ಅವರನ್ನು ಗುರುತಿಸಿದ ಶ್ರೀರಾಮ, ಲಕ್ಷ್ಮಣ, ಆಂಜನೇಯರು ಅವರನ್ನು ಎಳೆದಾಡಿಕೊಂಡು ಹೊಡೆದು ಅವರ ತಲೆಗಳನ್ನು ಜಜ್ಜಿದರಂತೆ" ಅಲ್ಲದೆ ಬ್ರಹ್ಮರಾಕ್ಷಸನ ತಲೆಗಳ ಸಂಕೇತ ಈ ತೆಂಗಿನಕಾಯಿಗಳು. ದೇವತೆಗಳು ದಾನವರ ಶಿರಗಳನ್ನು ಹೀಗೆ ಜಜ್ಜಿ ನಾಶಪಡಿಸಿದುದರ ವಿಜಯದ ಸಂಕೇತ ಇದು ಎಂದು ಗ್ರಾಮೀಣ ಭಕ್ತರು ನಂಬಿದ್ದಾರೆ. ಅಂದರೆ ಈ ಸೇವೆ ಹಿಂದೆ ಅಡಗಿರುವ ಆಶಯವೆಂದರೆ ಕೆಡಕಿನ ಮೇಲೆ ಒಳ್ಳೆಯದರ ವಿಜಯವೆಂಬುದಾಗಿದೆ.

ಪ್ರತಿವರ್ಷವು ತಪ್ಪದೇ ಇದು ನಡೆದುಕೊಂಡು ಬರುತ್ತಿರುವ ಕ್ರೀಡಾ ಪದ್ಧತಿಯಾಗಿದೆ. ಕೆ.ಅನಂತರಾಮುರವರು ತಾವು ನೋಡಿರುವ ಒಂದು ಜಾತ್ರೆಯ 'ಕಾಯಿ ಬಿಡುವ' ಸಂದರ್ಭದ ಚಿತ್ರಣ ಹೀಗಿದೆ: "ಉತ್ಸವದ ಮುಂದೆ ಕಾಯಿಸೇವೆ ಅದೇ ತಾನೇ ಪ್ರಾರಂಭವಾಗಿತ್ತು. ಅರ್ಧ ಮಾರುದ್ದದ ಬಿದಿರು ದೊಣ್ಣೆಗಳನ್ನು ಕೈಯಲ್ಲಿ ಹಿಡಿದು ಎದುರುಬದುರಾಗಿ ಎರಡು ಸಾಲುಗಳಲ್ಲಿ ಕಾಯಿ ಚಚ್ಚುವ ಸುಮಾರು ಮೂವತ್ತು ಮಂದಿ ಹುರಿಯಾಳುಗಳು ನಿಂತಿದ್ದರು. ಕಾರಾಚವೆಂಬ

ಮರದ ನಾರಿನಿಂದ ಹಗ್ಗವನ್ನು ಹೊಸೆದು, ಅದರ ತುದಿಗೆ ಕಲ್ಲು ಚೀಲದಂತಹ ಹೆಣಿಗೆಯನ್ನು ಅದೇ ನಾರಿನಲ್ಲಿ ಹೊಸೆದು ಕೂಡಿಸಿದ್ದರು. ಆ ಹೆಣಿಗೆಯೊಳಕ್ಕೆ ಬಲಿತ, ಸಿಪ್ಪೆಸಹಿತವಾದ, ಹಸಿರು ತೆಂಗಿನಕಾಯಿಯನ್ನು ತಮ್ಮಡಿಯೊಬ್ಬನು ಕೂರಿಸಿ ಹಗ್ಗವನ್ನು ಸಿಂಪಿಯಂತೆ ಸುತ್ತಿಕೊಂಡು ಎಡಗೈಯಲ್ಲಿ ಹಿಡಿದುಕೊಂಡನು. ಅನಂತರ ಬಲಗೈಯಲ್ಲಿ ಕಾಯಿಕೂರಿಸಿದ್ದ ತುದಿಯನ್ನು ಎತ್ತಿಹಿಡಿದು ಅದನ್ನು ಹಿಂದುಮುಂದಕ್ಕೆ ನಾಲ್ಕುಸಲ ತೂಗಾಡಿಸಿ, ಸಿಂಪಿಯಾಗಿ ಸುತ್ತಿಕೊಂಡಿದ್ದ ಹಗ್ಗವನ್ನು ಸಡಿಲಬಿಟ್ಟು, ದಂಡಧಾರಿಗಳ ಮಧ್ಯದಲ್ಲಿ ಹಾದುಹೋಗುವಂತೆ 'ಹಗ್ಗ ಹದಿನಾರು ಮಾರು, ಕುಣಿಕೆ ನನ್ನಕೈಲಿ' ಎಂಬಂತೆ ಕುಣಿಕೆಯನ್ನು ತನ್ನ ಎಡಗೈಯಲ್ಲಿ ಭದ್ರವಾಗಿ ಹಿಡಿದು, ವೇಗವಾಗಿ ಕಾಯನ್ನು ಉರುಳಿಸಿದನು. ಆಗ ಎರಡು ಕಡೆಗಳಲ್ಲಿ ನಿಂತ ದಂಡಧಾರಿಗಳು ತಮ್ಮ ಬಡಿಗೆಗಳಿಂದಷ್ಟೇ ತಡೆದು, ಗಸಿಯಂತೆಯಿರುವ ಅದರ ಮೊನೆಗಳಿಂದ ತಿವಿದು ಚಚ್ಚುವ ಪ್ರಯತ್ನ ಮಾಡಿದರು. ಆದರೆ ತಮ್ಮಡಿಯು ತಾನು ಉರುಳಿಬಿಟ್ಟ ವೇಗದಲ್ಲಿಯೇ ಅದನ್ನು ಹಿಂದಕ್ಕೆಳೆದುಕೊಂಡನು. ಕೋಲುಗಳ ತಿವಿತಕ್ಕೆ ಸಿಕ್ಕದಂತೆ ಮಾಡಿದನು. ಇವನು ಉರುಳಿಬಿಡುವುದು, ಅವರು ತಮ್ಮ ಕೋಲುಗಳನ್ನು ಹೆಣಿಗೆಯಂತೆ ಒಡ್ಡುತ್ತಾ ಅದರ ನಡುವೆ ಕಾಯಿ ಸಿಕ್ಕಿ ಬೀಳುವಂತೆ ಮಾಡುವುದು. ಅದಕ್ಕೆ ಅಸ್ಪದ ಕೊಡದೆ ಇವನು ಹಿಂದಕ್ಕೆಳೆದುಕೊಳ್ಳುವುದು, ಅವರ ಮರಳಿಯತ್ನಕ್ಕಾಗಿ ಓಹೋ ಎನ್ನುವುದು. ಇದೇ ಕಾಯಿಸೇವೆಯ ಸ್ವಾರಸ್ಯವಾದ ಭಾಗ: ನಾಲ್ಕಾರು ನಿಮಿಷಗಳು ಆ ಸ್ವಾರಸ್ಯ ಮುಂದುವರೆಯಿತು. ಯಾವುದೋ ಒಂದು ಕ್ಷಣದಲ್ಲಿ ದಂಡಧಾರಿಗಳ ಹಿಡಿತಕ್ಕೆ ಸಿಕ್ಕಿದ ಕಾಯಿ ನುಜ್ಜುನೂರಾಯಿತು. ಒನಕೆಯಿಂದ ಕುಟ್ಟುವಂತೆ ಆಳಿಗೊಂದೇಟು ಹೊಡೆದು ಅಜ್ಜಿಬಜ್ಜಿ ಮಾಡಿಬಿಟ್ಟರು. ದೇವಾಲಯದಿಂದ ಹಿಡಿದು ಎರಡು ಫರ್ಲಾಂಗು ದೂರದ ಹೊಳೆಯ ಕಡೆಯವರೆಗೆ ಆರು ಕಾಯಿಗಳನ್ನು ಹೀಗೆಯೇ ತೀರಿಸಿದರು. ಏಳನೇಯ ಕಾಯಿಯನ್ನು ತಮ್ಮಡಿಯು ಹೊಳೆಯ ನೀರಿನೊಳಗೆ ನಿಂತು ಹಾರಿಸಿದನು. ಅಲ್ಲಂತೂ ಅವನು ಅದು ಯಾರ ದೊಣ್ಣೆಗೂ ಸುಲಭವಾಗಿ ಸಿಕ್ಕಲು ಬಿಡದೆ ಚೆನ್ನಾಗಿ ಸತಾಯಿಸಿದನು. ಉರುಳಿ ಬಿಡುತ್ತಿರುವುದು ಸರಿಯಾಗಿಲ್ಲವೆಂದು ದಂಡಧಾರಿಗಳು ತಮ್ಮಡಿಯ ಮೇಲೆ ಎಗರಾಡಿದರು. ಕೊನೆಗೊಮ್ಮೆ ಅವರ ಏಟಿಗೆ ಸಿಕ್ಕಿದ ಕಾಯಿ ಗುರುತಿಲ್ಲದಂತೆ ಹೊಳೆಯ ಮರಳಿನಲ್ಲಿ ಅಪ್ಪಚ್ಚಿಯಾಗಿ ಹೂತು ಹೋಯಿತು. ಆಮೇಲೆ ಎಲ್ಲರೂ ಬಡಿಗೆಗಳಿಂದ ನೀರನ್ನು ಬಡಿಬಡಿದು ಹಾರಿದ ನೀರಿನಲ್ಲಿಯೇ ಮಿಂದರು. ಹುಲಿವಾಹನವು ದೇವಾಲಯಕ್ಕೆ ಮರಳಿತು[೨೧]" "ಇದೇ ವಿಷಯಗಳನ್ನು ತೆಗೆದುಕೊಂಡು ಪಂಡಿತ್ ಮ.ಮಲ್ಲಪ್ಪನವರು ತಮ್ಮ ಪುಸ್ತಕದಲ್ಲಿ ಉಲ್ಲೇಖಿಸಿದ್ದಾರೆ.[೨೨]"

ಇಲ್ಲಿ ಮುತ್ತತ್ತಿಗೆ ಸಂಬಂಧಿಸಿದ ಆದಿಜಾಂಬವರೆಂದು ಕರೆದುಕೊಳ್ಳುವ ಮಾದಿಗರದು ಮತ್ತು ತಮ್ಮಡಿಗಳು ಎನ್ನುವ ಒಕ್ಕಲಿಗರದು, ಕಾಯಿಜಜ್ಜುವ ಅಥವಾ ಹೊಡೆಯುವ ಕಾರ್ಯ ಮಾದಿಗರದಾದರೆ ಹಗ್ಗವಿಡಿದು ಕಾಯಿ ಬಿಡುವ ಕಾರ್ಯ ತಮ್ಮಡಿಯೊಬ್ಬನಿಂದ ನಡೆಯುತ್ತದೆ. ಇದು ಗ್ರಾಮೀಣ ಪರಿಸರದ ಸಾಮಾಜಿಕ ವ್ಯವಸ್ಥೆಯನ್ನು ಸೂಚಿಸುತ್ತದೆ. ಜಾತ್ರೆಗಿಂತ ಮೊದಲೆ ಸಿಪ್ಪೆ ಸಹಿತವಾದ ತೆಂಗಿನಕಾಯಿಗಳನ್ನು ಮರದಿಂದ ಕಿತ್ತುಕೊಂಡು ಬರುತ್ತಾರೆ. ಕಾರಾಚದನಾರು ಎಂಬುದನ್ನೂ ಸಹ ಕಿತ್ತುಕೊಂಡು ಮುತ್ತತ್ತಿ ದೇವಾಲಯಕ್ಕೆ ತಂದು ಇಡುತ್ತಾರೆ. ಸುಮಾರು ೧೦ ಅಡಿಗಳಷ್ಟು ಎತ್ತರವಿರುವ ದಪ್ಪನೆಯ ಬಿದಿರುದೊಣ್ಣೆಗಳನ್ನು ಆದಿಜಾಂಬವರು ಬಳಿಯ ಅರಣ್ಯಕ್ಕೆ ಮಡಿ ಮತ್ತು ಭಕ್ತಿಯಿಂದ ಹೋಗಿ ಕಡಿದು ಸುಮಾರು ೩೫ ಜನರಿಗೆ ಬೇಕಾದಷ್ಟು ತಂದು ತುದಿಗಳನ್ನು ಚೂಪಾಗಿ ಹದ ಮಾಡಿ ಸವರಿ ಮನೆ ಬಿಡುವ ಮೊದಲು ಕುಂಕುಮ ಅರಿಶಿನ ಲೇಪಿಸಿ ಅಗರಬತ್ತಿ, ಕರ್ಪೂರಗಳಿಂದ ಪೂಜಿಸಿ ಮೊದಲು ಪಾದ್ದಾರೆಗೆ ಬರುತ್ತಾರೆ. ಕಾಡು ಅತಿ ಸಮೀಪವಾಗಿರುವುದರಿಂದ ಅಲಸೂರಿನ ಮಾದಿಗರೆ ಈ ದೊಣ್ಣೆ ಕಡಿಯುವ ಕಾರ್ಯವನ್ನು ಕೈಗೊಳ್ಳುತ್ತಾರೆ. ಕಡೆ ಶ್ರಾವಣದ ಬುಧವಾರ ಪಾದ್ದಾರೆಯಲ್ಲಿ ಹಾಲರಬಿಸೇವೆ ಕಾಯಿಚಚ್ಚುವ ಸೇವೆಗಳಾದ ಮೇಲೆ ಗುರುವಾರ ಮುಂಜಾನೆಯಷ್ಟೊತ್ತಿಗೆ ಕೇವಲ ಮೂರು ಕಿ.ಮೀ.ದೂರವಿರುವ ಮುತ್ತತ್ತಿಗೆ ಬರುತ್ತಾರೆ. ಅಲ್ಲಿ ತರಿಸಲಾಗಿರುವ ಸಿಪ್ಪೆಸಹಿತವಾದ ೯ ಎಳನೀರು ಕಾಯಿಗಳನ್ನು ಮತ್ತು ಕಾರಾಚದ ನಾರನ್ನು ಪಡೆದುಕೊಂಡು ವಿಶಾಲವಾದ ಜಾಗದಲ್ಲಿ ಎಲ್ಲಾ ಮಾದಿಗ ಭಕ್ತರು ಕುಳಿತುಕೊಳ್ಳುತ್ತಾರೆ. ನಾರನ್ನು ಕಾಯಿಗಳಿಗೆ ಕಟ್ಟುತ್ತಾರೆ ಹಾಗೂ ಹಗ್ಗದ ರೂಪದಲ್ಲಿ ದಪ್ಪನಾಗಿ ಸುಮಾರು ೮ ಮೀಟರುಗಳಷ್ಟು ಸಿದ್ಧಪಡಿಸಿಕೊಂಡು ಎಲ್ಲರು ಮುತ್ತತ್ತಿರಾಯ ದೇವಾಲಯದೊಳಗೆ ಹೋಗಿ ಮಲ್ಲಿಗೆ, ಸೇವಂತಿಗೆ, ಹೂಮಾಲೆಗಳನ್ನು ಹಾಕಿ ಮುತ್ತತ್ತಿರಾಯನ ತಮ್ಮಡಿಯಿಂದ ಕಾಯಿಗಳಿಗೆ ನಾಮಗಳನ್ನು ಲೇಪಿಸಿಕೊಂಡು ತೀರ್ಥ ಚಿಮುಕಿಸಿ ಪೂಜಿಸಿದ ನಂತರ ಅತ್ಯಂತ ಸಂತೋಷದಿಂದ ಹೊರಬರುತ್ತಾರೆ. ಕೆಲವರು ನಿಕ್ಕರು, ಬನಿಯನ್ ಮಾತ್ರವೇ ಹಾಕಿಕೊಂಡಿದ್ದರೆ ಇನ್ನೂ ಕೆಲವರು ಪ್ಯಾಂಟು, ಶರ್ಟ್‌ಗಳಲ್ಲೇ ಇಲ್ಲಿ ಸಿದ್ಧರಿರುತ್ತಾರೆ. ಅಲಸೂರು, ನಾಯಕನಹಳ್ಳಿ, ಬಾಳೆಹೊನ್ನಿಗ, ದೊಡ್ಡಆಲಹಳ್ಳಿಯಿಂದ ೩೫ ಮಂದಿ ಮದಿಗ ಜನಾಂಗದ ಭಕ್ತರೆಲ್ಲಾ ಇಲ್ಲಿ ನೆರೆದಿರುತ್ತಾರೆ. ಹಣೆಯಲ್ಲಿ ವೈಷ್ಣವ ಪಂಥದ ನಾಮ ಕಿವಿಯ ಮೇಲೆ ಹೂವನ್ನು ಮುಡಿದಿರುತ್ತಾರೆ. ಕೆಲವರು ಈಗಾಗಲೇ ದೇವರಿಗೆ ತಲೆಮುಡಿಯನ್ನು ಸಹ ಕೊಟ್ಟಿರುತ್ತಾರೆ.

ತಮ್ಮಡಿಯು ಮಾದಿಗಜನಾಂಗದ ಮುಖಂಡರೊಬ್ಬರನ್ನು ಕರೆದು ಹೂಮಾಲೆ ಹಾಕಿ ಹಾಲರಬಿಸೇವೆ, ಕಾಯಿಬುಡುವ ಸೇವೆಗೆ ಸಿದ್ಧರಾಗಿ ಎಂದಾಗ ಎಲ್ಲರೂ ಹರುಷದಿಂದ ಕುಣಿದಾಡುತ್ತ ಹಾಲರಬಿ ಸೇವೆಗೆ ಹೊರಡುತ್ತಾರೆ. ನಂತರದ ಕಾರ್ಯವೇ 'ಕಾಯಿಬುಡುವ ಸೇವೆ' ದೇವಾಲಯವನ್ನು ಹೊಕ್ಕ ತಮ್ಮಡಿಯು ಸಿಂಗರಿಸಿದ ಮುತ್ತತ್ತಿರಾಯನ ಲೋಹದ ಪುಟ್ಟ ಉತ್ಸವಮೂರ್ತಿಯನ್ನು ತರುತ್ತಾನೆ. ಮೊದಲೇ ಸಿಂಗರಿಸಿರುವ ಹುಲಿವಾಹನದ ಆಸನದ ಮೇಲೆ ಇಡುತ್ತಾನೆ. ಪ್ರಭಾವಳಿಯುಕ್ತ ಹುಲಿವಾಹನವನ್ನು ಹಲವಾರು ಭಕ್ತರು ಹೆಗಲ ಮೇಲೆ ಮುತ್ತತ್ತಿರಾಯನಿಗೆ ಗೋವಿಂದವನ್ನು ಇಡುತ್ತ ಇಟ್ಟುಕೊಳ್ಳುತ್ತಾರೆ. ದೇವಾಲಯದ ಪ್ರಾಕಾರ ಬಿಟ್ಟೊಡನೆಯೇ ಕೇಸರಿ ಬಣ್ಣದ ಪಂಚೆಯುಟ್ಟು, ಮೇಲಿನ ಮೈಯ್ಯನ್ನು ಬರಿದಾಗೇ ಬಿಟ್ಟಿರುವ ತಮ್ಮಡಿಯು ಮಾದಿಗ ಭಕ್ತರಿಂದ ಕಾರಾಚನಾರಿನಿಂದ ಸಿದ್ಧಪಡಿಸಿರುವ ಹಗ್ಗವನ್ನು ತೆಗೆದುಕೊಂಡು ತೆಂಗಿನಕಾಯಿಗೆ ಕಟ್ಟಿಕೊಳ್ಳುತ್ತಾನೆ. ಹುಲಿವಾಹನದ ಮುಂದೆ ಮುಂದೆ ಈ ಕಾಯಿಬಿಡುವ ಸೇವಾಕ್ರೀಡಾ ಜರುಗುತ್ತಿರುತ್ತದೆ. ಬಹಳಷ್ಟು ದೂರವಿರುವ ಕಾವೇರಿ ನದಿಯವರೆಗೂ ಒಂದರನಂತರ ಒಂದರಂತೆ ಚಚ್ಚುತ್ತಿರುತ್ತಾರೆ. ಪ್ರತಿಯೊಂದು ಕಾಯಿ ಜಜ್ಜಿದ ನಂತರ ಮಹತ್ ಸಾಧನೆ ಮಾಡಿದವರ ಹಾಗೆ ಸಂತೋಷವನ್ನು ಪಟ್ಟುಕೊಳ್ಳುತ್ತಾರೆ. ನದಿಯ ತೀರಕ್ಕೆ ಬಂದಾಗ ಅಂತಿಮ ಕಾಯನ್ನು ನದಿಯೊಳಗೆ ಜಜ್ಜುತ್ತಾರೆ. ಈ ವೇಳೆಯಲ್ಲಿ ಮಣೇವುಸೇವೆ, ಪೂಜಾಕುಣಿತ, ಹುಲಿವೇಷ, ಆಂಜನೇಯವೇಷ ಅಲ್ಲದೆ ಮುಳ್ಳು ಆವುಗೆ ಮೆಟ್ಟಿಕೊಂಡು ಜೋಡುಕತ್ತಿಗಳಿಂದ ಎದೆಗೂ ಹೊಟ್ಟೆಗೂ ಬಡಿದುಕೊಂಡು ತನ್ನ ಉಗ್ರರೂಪದ ಆರಾಧನೆ ನಡೆಸುವ ಒಬ್ಬಿಬ್ಬ ಭಕ್ತರು ತಮ್ಮ ಪ್ರದರ್ಶನಗಳನ್ನು ನೀಡುತ್ತಿರುತ್ತಾರೆ.

ಮಾದಿಗ ಭಕ್ತರು ಕಾಯಿ 'ಚಚ್ಚುತ್ತಿರುವ ಸಂದರ್ಭದಲ್ಲಿ ರಸ್ತೆಯ ಇಕ್ಕೆಲಗಳಲ್ಲಿ ನೆರೆದಿರುವ ಭಕ್ತಸಮೂಹದ ಆಹಾಕಾರ ಮುಗಿಲು ಮುಟ್ಟುತ್ತದೆ. ಹಾಗೆಯೇ ಹಿಂಬಾಲಿಸುತ್ತಿರುವ ಭಕ್ತರನ್ನು ಪೋಲಿಸಿನವರು ನಿಯಂತ್ರಿಸುತ್ತಿರುತ್ತಾರೆ. ಮಹಿಳೆಯರಿಂದ ಜನಪದ ಗೀತೆಗಳ ಗಾಯನ ಜೊತೆ ಜೊತೆಯಲ್ಲಿಯೇ ನಡೆಯುತ್ತಿರುತ್ತದೆ. ಹೊಳೆಯ ತೀರದ ನೀರಿನ ಮರಳಿನಲ್ಲಿ ಕಾಯಿ ಜಜ್ಜುವ ಸಂಕೇತವೆಂದರೆ ದಾನವರು ನದಿಯ ತೀರಕ್ಕೋದರೂ ಸಹ ಬಿಡದೆ ಬೆನ್ನತ್ತಿ ಅವರ ಶಿರಗಳನ್ನು ಜಜ್ಜುತ್ತೇವೆ ಎಂಬುದೇ ಆಗಿದೆ. ಈ ಬಗೆಯ 'ಕಾಯಿಬಿಡುವ' ಸೇವೆ ಈ ಪರಿಸರದಲ್ಲೆಲ್ಲೂ ಕಾಣುವುದಿಲ್ಲ. ಕರ್ನಾಟಕ ಜಾನಪದ ಅಧ್ಯಯನ ಕ್ಷೇತ್ರದಲ್ಲಿ ಗಮನಾರ್ಹ ಸ್ಥಾನವನ್ನು ಇನ್ನೂ ಪಡೆದುಕೊಂಡಿಲ್ಲ. ಒಂದೆರೆಡು ಉಲ್ಲೇಖಗಳು ಅಲ್ಲಲ್ಲಿ ಬಂದರೂ ಸಾಲದಾಗಿದೆ. ಇದೇ ಸೇವೆಯನ್ನು

ದೊಡ್ಡಾಲಹಳ್ಳಿ ಬಳಿಯ ಮುತ್ತಪ್ಪನಗುಡಿ, ಹೊನ್ನಗಳ್ಳಿ ಬಳಿಯ ಕಡೆಗುಡ್ಡೆ ಮುತ್ತಪ್ಪ, ಸಂಬಾಪುರದ ಕಂಬದರಾಯ, ಹನುಮೇನಹಳ್ಳಿಗಳಲ್ಲಿಯೂ ಸಹ ನಡೆಸಲಾಗುತದೆ. ಮಾದಿಗ ಜನಾಂಗದವರೇ ಕಾಯಿ ಹೊಡೆಯುವ ಕಾರ್ಯದಲ್ಲಿ ಭಾಗಿಗಳಾದರೆ ತಮ್ಮಡಿಗಳು ಮಾತ್ರ ಆಯಾ ದೇವಾಲಯಕ್ಕೆ ಸಂಬಂಧಿಸಿದವರಾಗಿರುತ್ತಾರೆ. ಇಲ್ಲೆಲ್ಲಾ ಮಾದಿಗರಿಗೆ ಪರಂಪರೆಯಿಂದ ಬಂದ ಯಾವ ಹಕ್ಕುಗಳು ಇರುವುದಿಲ್ಲ. ಮುತ್ತತ್ತಿರಾಯನ ಮೇಲೆ ಇರುವು ಭಕ್ತಿಯೇ ಆಗಿದೆ.

## ೪.೩ ಹುಲಿವಾಹನಸೇವೆ

ದಕ್ಷಿಣ ಕರ್ನಾಟಕದ ಮಹದೇಶ್ವರ, ಮುತ್ತತ್ತಿರಾಯ ಇವರಿಗೆಲ್ಲಾ ಹುಲಿಯೇ ವಾಹನವಾಗಿದೆ. ಇವರು ಹುಲಿಯನ್ನು ಕಟ್ಟಿಹಾಕುತ್ತಾರೆ. ಅದರ ಮೇಲೆ ಸವಾರಿ ಮಾಡುತ್ತಾರೆ. ಹುಲಿಯ ಹಾಲನ್ನು ಕಡೆಯುವ ಸಾಮರ್ಥ್ಯವನ್ನು ಉಳ್ಳವರಾಗಿದ್ದಾರೆ ಎಂದು ಗ್ರಾಮೀಣಭಕ್ತರು ನಂಬಿದ್ದಾರೆ. ಆದುದರಿಂದಲೇ ಹುಲಿಯನ್ನು ಈ ದೈವಗಳ ಭಕ್ತರನ್ನಾಗಿ ಮಾಡಿದ್ದಾರೆ. ಈ ಕಾರಣದಿಂದ ದೇವಾಲಯಗಳಲ್ಲಿ ಒಂದೊಂದು ಹುಲಿಯನ್ನು ಮಾಡಿಸಿ ಇಟ್ಟಿರುತ್ತಾರೆ. ಮುತ್ತತ್ತಿ, ಪಾದ್ದಾರೆ, ಸೋಮನಕೆರೆ, ಕಂಬದರಾಯನಗುಡಿ, ತಿರುಗಣೆಮಡು ಇಲ್ಲೆಲ್ಲಾ ಹುಲಿವಾಹನಗಳನ್ನು ಕಾಣಬಹುದು. ಜನಪದ ಗೀತೆಗಳಲ್ಲಿ ಮುತ್ತತ್ತಿರಾಯನು ಹುಲಿಯನ್ನು ಕಟ್ಟಿಹಾಕುವ ಸಾಹಸಗಳನ್ನು ರೋಮಾಂಚನವಾಗಿ ವರ್ಣಿಸುತ್ತಾರೆ. ಈ ವಾಹನದ ಮೇಲೆಯೇ ಮುತ್ತತ್ತಿರಾಯನ ಉತ್ಸವಮೂರ್ತಿಯನ್ನು ಇರಿಸಿ ಸೇವೆಗಳನ್ನು ಮಾಡುತ್ತಾರೆ. ಇದಕ್ಕೆ 'ಹುಲಿವಾಹನ ಸೇವೆ' ಎಂದು ಭಕ್ತರು ಕರೆಯುತ್ತಾರೆ. ನಿಂತಿರುವ ಹುಲಿಯ ನಾಲ್ಕು ಕಾಲುಗಳನ್ನು ಅಡ್ಡವಾದ ಬೊಂಬುಗಳಿಗೆ ಬಿಗಿದು ಕಟ್ಟಿದ ಮಣೆಯ ಮೇಲೆ ನಿಲ್ಲಿಸಿರಲಾಗುತ್ತದೆ. ಹುಲಿಯ ಬೆನ್ನ ಮೇಲೆ ಹಿತ್ತಾಳೆ ಪ್ರಭಾವಳಿ ಇರುವ ಆಸನವೊಂದನ್ನು ನಿರ್ಮಿಸಿರುತ್ತಾರೆ. ಅದರಲ್ಲಿ ಉತ್ಸವಮೂರ್ತಿಯನ್ನು ಕುಳ್ಳಿರಿಸಿ ಹೂಗಳಿಂದ ಅಲಂಕಾರ ಮಾಡಿ ಪೂಜಿಸಿ ಮುಂದಿನ ಸೇವೆಗೆ ಸಿದ್ಧರಾಗುತ್ತಾರೆ.

ದೇವರಿಗೆ ಪ್ರಿಯವಾದ ಶನಿವಾರ, ಶ್ರಾವಣ ಶನಿವಾರ ಮತ್ತು ಜಾತ್ರೆಯಲ್ಲಿ ವಿಜೃಂಭಣೆಯಿಂದ ಇದು ನಡೆಯುತ್ತದೆ. ಈ ವಾಹನ ಸೇವೆ ಮಾಡಿಸುವ ಭಕ್ತರಿಗೆ ಎರಡು ಆಯ್ಕೆಗಳಿರುತ್ತವೆ. ಅವು

೧. ದೇವಾಲಯದ ಸುತ್ತ ಹುಲಿವಾಹನವೊತ್ತ ಉತ್ಸವಮೂರ್ತಿಯನ್ನು ಸುತ್ತಿಸುವುದು.

೨. ಹೊಳೆಯ ದಡದವರೆಗೂ ಹುಲಿವಾಹನದಲ್ಲಿ ದೇವರನ್ನು ಹೊತ್ತೊಯ್ದು ಹಿಂತಿರುಗುವುದು.

ಮೊದಲನೆಯ ಆಯ್ಕೆಗೆ ಹಣ ಕಡಿಮೆಯಾದರೆ, ಎರಡನೆಯದಕ್ಕೆ ಹೆಚ್ಚು ಏಕೆಂದರೆ ಅಂತರವು ಹೆಚ್ಚು. ಈ ಹುಲಿವಾಹನವನ್ನು ಹೊರಲು ಇಪ್ಪತ್ತಕ್ಕೂ ಹೆಚ್ಚು ಭಕ್ತರು ಬೇಕಾಗುತ್ತಾರೆ. ಏಕಾಏಕಿ ಅವರು ಅದನ್ನು ಹೊತ್ತುಕೊಂಡು ನಡೆಯಲು ಸಾಧ್ಯವಿಲ್ಲ. ಹಿಂದಕ್ಕೂ ಮುಂದಕ್ಕೂ ಜಗುತ್ತಿರುತ್ತಾರೆ, ಜನರು ಹುಲಿಯ ಭಾರಕ್ಕಾಗಿ. ಪವಿತ್ರ ದಿನಗಳಲ್ಲಿ ಸಂಜೆಯೇ ಅಲ್ಲದೇ ಮುಂಜಾನೆ ಮಧ್ಯಾಹ್ನ ಹೀಗೆ ತಮಗೆ ಅನುಕೂಲವಾದ ಸಮಯದಲ್ಲಿ ಸೇವೆಯನ್ನು ಕೈಗೊಳ್ಳುತ್ತಾರೆ.

ಎಲ್ಲರೂ ಒಂದೇ ಬಾರಿಗೆ ಹುಲಿವಾಹನವನ್ನು ಎತ್ತಿಕೊಂಡು ತಮ್ಮ ಒಂದೊಂದು ಹೆಗಲ ಮೇಲೆ ಇರಿಸಿಕೊಂಡ ಮೇಲೆ ಬಗೆ ಬಗೆಯಾಗಿ ಗೋವಿಂದಗಳನ್ನು ಇಕ್ಕುತ್ತಾರೆ. ಹಾಗೆಯೇ ಮುನ್ನಡೆಯುತ್ತಾರೆ. ಈ ವೇಳೆಯಲ್ಲಿ ಹುಲಿವಾಹನ ಹೊತ್ತವರ ಕಾಲಿನ ಕೆಳಗೆ ಹಲವಾರು ಭಕ್ತರು ಉರುಳಿರುತ್ತಾರೆ. ದೇವರು ನಮ್ಮ ಮೇಲೆ ನಡೆದು ಅಥವಾ ಹಾದು ಹೋದರೆ ಪಾಪಕರ್ಮಗಳೆಲ್ಲಾ ತೀರಿಹೋಗುತ್ತವೆ ಎಂದು, ಆಗ ಬಹುಕಷ್ಟದಿಂದ ಮತ್ತು ಜಾಗರೂಕತೆಯಿಂದ ವಾಹನ ಹೊತ್ತವರು ಭಕ್ತರನ್ನು ಮಕ್ಕಳನ್ನು ದಾಟಿಹೋಗುತ್ತಾರೆ. ಈ ವೇಳೆಯಲ್ಲಿ ಮುಂದೆ ಮಣೇವುಸೇವೆಯೂ ಜರುಗುತ್ತದೆ. ನೆರೆದಿರುವ ದೇವರ ಮೇಲೆ ಎಸೆಯುತ್ತಿರುತ್ತಾರೆ. ಜಾತ್ರೆಯಲ್ಲಾದರೆ ವಾಹನಸೇವೆಯ ಮುಂದೆಯೇ ಕಾಯಿ ಹೊಡೆಯುವ ಸೇವಾಕಾರ್ಯ ಜರಗುತ್ತಿರುತ್ತದೆ. ಪೂಜಾಕುಣಿತದ ಜನಪದ ಕಲೆಯವರು ತಮ್ಮ ಚಮತ್ಕಾರ ಸಹಿತ ಹೆಜ್ಜೆಗಳಿಂದ ಕುಣಿಯುತ್ತಿರುತ್ತಾರೆ.

ವಾಹನವನ್ನು ಎತ್ತಿಸುತ್ತೇವೆ ಎಂದು ಭಕ್ತರು ನಿರ್ದಿಷ್ಟ ಸಂದರ್ಭಗಳಲ್ಲಿ ದೇವರಿಗೆ ಹರಕೆ ಹೊತ್ತಿರುತ್ತಾರೆ. ಅಂತವರು ಈ ಹುಲಿವಾಹನ ಸೇವಾ ಕಾರ್ಯ ಮಾಡಿಸುತ್ತಾರೆ. ಅಲ್ಲದೆ ಇಚ್ಛೆಯುಳ್ಳ ಅನ್ಯಭಕ್ತರೂ ಸಹ ಈ ಸೇವಾಕಾರ್ಯಕ್ಕೆ ಚೀಟಿಪಡೆದು ನಡೆಸುತ್ತಾರೆ. ಈ ವೇಳೆಯಲ್ಲಿ ಮಹಿಳೆಯರಿಂದ ಜನಪದ ಗೀತೆಗಳ ಗಾಯನವೂ ನಡೆಯುತ್ತದೆ. ಈ ಸೇವೆಯ ಹಿನ್ನೆಲೆಯೆಂದರೆ ದೇವರು ಕ್ರೂರವಾದ ಹುಲಿಯ ಮೇಲೆ ಸವಾರಿ ಮಾಡುತ್ತಾನೆ ಎಂಬುದೇ ಆಗಿದೆ. ಮುತ್ತತ್ತಿಯಂತೆಯೇ ಪಾದ್ದಾರೆಯಲ್ಲಿಯೂ, ಗುಡಿ ಸುತ್ತ ಮತ್ತು ಕಮರಿಯವರೆಗೂ ನಡೆಯುತ್ತದೆ. ಕಂಬದರಾಯನ ಗುಡಿಯ ಬಳಿ ಇರುವ ವಿಜಯಮಾಲೆ ಕಂಬವೆಂಬ ಕಂಬದರವರೆಗೂ ಸಾಗುತ್ತದೆ.

ಮುತ್ತತ್ತಿ ಮತ್ತು ಈ ಪರಿಸರದ ದೇವಾಲಯಗಳಲ್ಲಿ ಈ ವಾಹನದ ಸೇವೆ ಎಂದು ಆರಂಭವಾಯಿತು ಎಂದು ಹೇಳುವುದು ಅಸಾಧ್ಯ. ಆದರೂ ದೇವರು ಮೂಡಿ ಪ್ರವರ್ಧಮಾನಕ್ಕೆ ಬಂದಂತೆಲ್ಲಾ ಈ ಸೇವೆ ರೂಪವನ್ನು ತಾಳಿದೆ. ಅಂದಿನ ಸರಳ ಸಮಾಜದಲ್ಲಿ ಇದು ಸಾಧ್ಯವು ಹೌದು. ಹಾಗೆಯೇ ದೇವತಾರಾಧನೆಯ ಸುಲಭ, ಸರಳ ವಿಧಾನವು ಹೌದು. ಈ ಹುಲಿವಾಹನ ಸೇವೆ ಕೇವಲ ವೈಷ್ಣವ ಸಂಪ್ರದಾಯವೇ ಅಲ್ಲದೇ ಈ ಭಾಗದಲ್ಲಿರುವ ಚಿಕ್ಕಲ್ಲೂರಿನಲ್ಲಿನ ಶೈವ ಸಂಪ್ರದಾಯದ ಸಿದ್ಧಾಪ್ಪಾಜಿ ದೇವಾಲಯದಲ್ಲೂ ನಡೆಸಲಾಗುತ್ತದೆ. ಜನವರಿ ತಿಂಗಳಿನಲ್ಲಿ ನಡೆಯುವ ಜಾತ್ರೆಯ ಎರಡನೇ ದಿನ ಹುಲಿವಾಹನಸೇವೆ ನಡೆಯುತ್ತದೆ. ಮಲೆಯ ಮಹದೇಶ್ವರನ

ಚಿತ್ರಣದಲ್ಲಿಯಂತೂ ಮಹದೇಶ್ವರನು ಹುಲಿಯನ್ನು ಪಳಗಿಸಿ ಅದರ ಮೇಲೆ ಸವಾರಿ ಮಾಡುವಂತೆ ಇರುವುದನ್ನು ಕಾಣಬಹುದು. ಅಂದರೆ ಹುಲಿವಾಹನಸೇವೆ ವೈಷ್ಣವ ಧರ್ಮವೇ ಅಲ್ಲದೆ ಶೈವಸಂಪ್ರದಾಯದಲ್ಲೂ ಕಾಣಬಹುದಾಗಿದೆ.

## ೪.೪ ಮಣೇವುಸೇವೆ

ವೈಷ್ಣವ ಸಂಪ್ರದಾಯದಲ್ಲಿರುವ ಒಂದು ಸೇವೆ. ಈ ಬಗೆಯ ಸೇವೆಯಿಂದ ದೇವರಿಗೆ ಸಂಪ್ರೀತಿಯನ್ನು ಮಾಡಲಾಗುತ್ತದೆ. "ಹಿಂದೂ ಧರ್ಮವೆಂಬ ಸನಾತನ ಧರ್ಮ, ವೈಷ್ಣವಧರ್ಮ. ಈ ವೈಷ್ಣವ ಧರ್ಮವನ್ನು ಕಾಲಮಾನದ ದೃಷ್ಟಿಯಿಂದ ಕ್ರಿಸ್ತಪೂರ್ವದ ಯುಗದಲ್ಲೇ ನೋಡಬಹುದು. ಕೇವಲ ಕೆಳಜಾತಿಯಲ್ಲಿ ಜನ್ಮ ತಾಳಿದವರೆಂಬ ಏಕ ಮಾತ್ರ ಕಾರಣದಿಂದ ಶಾಸ್ತ್ರಾಧ್ಯಯನದ ಅವಕಾಶ ಹಾಗೂ ಜ್ಞಾನಜ್ಯೋತಿಯಿಂದ ವಂಚಿತರಾಗಿ ಅಜ್ಞಾನದ ಅಂಧಕಾರದಲ್ಲಿ ಅವಸ್ಥೆ ಪಡುತ್ತಿದ್ದ ಅಸಂಖ್ಯ ಮುಗ್ಧ ಜನಸಾಮಾನ್ಯರ ಬಗ್ಗೆ ಇದ್ದ ಅಪಾರ ಅನುಕಂಪ ಹಾಗೂ ಅಕ್ಕರೆ ಮತ್ತು ಅವರನ್ನು ಉದ್ದರಿಸಬೇಕೆಂಬ ವಿಚಾರದ ಕಾಳಜಿಯಲ್ಲೇ ಈ ಧರ್ಮದ ಉಗಮಸ್ಥಾನ ಕಂಡುಬಂತು. ಪಾಮರದ ಪ್ರತಿ ಚಿಲುಮೆಯ ಚಿರಸ್ಥಾಯಿ ಚಿಲುಮೆಯಾಗಿರುವ ಧರ್ಮವೇ-ವೈಷ್ಣವಧರ್ಮ ಜನಸಾಮಾನ್ಯರಿಗೂ ಇಹ-ಪರ ಸಾಧನೆಗೆ, ಮೋಕ್ಷ ಪ್ರಾಪ್ತಿಗೆ ಅವಕಾಶಗಳನ್ನು ಘೋಷಿಸಿದ ಧರ್ಮವೇ ವೈಷ್ಣವಧರ್ಮ.[೨೩]" ಈ ದಿಸೆಯಲ್ಲಿ ವೈಷ್ಣವ ದೇವತೆಗಳ ದೇವಾಲಯಗಳು ದಕ್ಷಿಣಕರ್ನಾಟಕದಾದ್ಯಂತ ಅಸ್ತಿತ್ವಕ್ಕೆ ಬಂದವು. ಅದರಲ್ಲಿ ಮುತ್ತತ್ತಿಯ ಮುತ್ತತ್ತಿರಾಯನಾದ ಆಂಜನೇಯನ ದೇವಾಲಯವು ಈ ದೇವರ ಸ್ಥಾಪನೆಯನ್ನು ಮಾಡಿದವನು. ಕಕ್ಕೆಸೊಪ್ಪಿನ ಕಾಳದಾಸನೆಂಬ ಆದಿಜಾಂಬವ ಎಂದು ಕರೆಯುವ ಮಾದಿಗಭಕ್ತ. ಆದರೂ ಇತರ ಶೂದ್ರ ಜನಾಂಗದವರನ್ನೂ ತನ್ನೊಡನೆ ಸೆಳೆದುಕೊಂಡನು ಈ ಭಕ್ತನು.

"ಮನುಷ್ಯ ಬದುಕುವುದಕ್ಕೆ ಸಸ್ಯಾಹಾರವಾದರೂ ಸಾಕು ಎಂದು ಅನುಭವಕ್ಕೆ ಬಂದ ಮೇಲೆ ಮಾಂಸಾಹಾರಿ ದೇವತೆಗಳಲ್ಲಿ ಕೆಲವನ್ನು ಸಸ್ಯಾಹಾರಿ ದೇವತೆಗಳನ್ನಾಗಿ ಪರಿವರ್ತಿಸುವುದುಂಟು. ಇದಕ್ಕೆ ಬೌದ್ಧಧರ್ಮ ಹಾಗೂ ಜೈನಧರ್ಮಗಳ ಅಹಿಂಸಾತ್ಮಕ ತತ್ವಗಳ ಪರಿಣಾಮವು ಪ್ರಭಾವ ಬೀರಿರುವ ಸಾಧ್ಯತೆ ಇದೆ. ಆದ್ದರಿಂದ ಹೊಸದಾಗಿ ಸಸ್ಯಾಹಾರಿ ದೇವತೆಗಳು ಸೃಷ್ಟಿಯಾದವು. ಉಗ್ರಪೂಜೆಯು ಸಾತ್ವಿಕ ಪೂಜೆಯು ಪ್ರಾರಂಭವಾಯಿತು.[೨೪]"

ಮುತ್ತತ್ತಿಗೆ ಅತಿ ಸಮೀಪವಾದ ಹರಿಹರದಲ್ಲಿ ಜೈನಧರ್ಮ ಅಸ್ತಿತ್ವದಲ್ಲಿದ್ದ ಬಗ್ಗೆ ಅವಶೇಷಗಳು ಲಭ್ಯವಾಗಿರುವುದು ಗಮನಾರ್ಹ. "ಶ್ರವಣನ ಒಡ್ಡು ಎಂಬಲ್ಲಿ ಪ್ರಾಚೀನವಾದ ಜಿನಶಿಲ್ಪವೊಂದು ಪತ್ತೆಯಾಗಿದೆ. ಎರಡೂವರೆ ಅಡಿ ಎತ್ತರ, ಎರಡು ಅಡಿ ಅಗಲವಿರುವ ಈ ಶಿಲ್ಪವನ್ನು ಗ್ರಾನೈಟ್

ಕಲ್ಲಿನಿಂದ ಮೂಡಿಸಲಾಗಿದೆ. ಪದ್ಮಪೀಠದ ಮೇಲೆ ಧ್ಯಾನಾಸಕ್ತ ಮುದ್ರೆಯಲ್ಲಿರುವ ಈ ಶಿಲ್ಪವು ಜೈನರ ಪ್ರಥಮ ತೀರ್ಥಂಕರನಾದ ಆದಿನಾಥನದ್ದಾಗಿದೆ. ಹಲವು ಶತಮಾನಗಳಿಂದ ನೆಲೆದ ಮೇಲೆ ಉರುಳಿ ಹೋಗಿದ್ದುದರಿಂದ ಶಿಲ್ಪದ ಬಹುತೇಗ ಭಾಗವು ಮತ್ತು ಪೀಠದ ಮೇಲೆ ಇರುವ ಒಂದು ಸಾಲಿನ ಅಕ್ಷರಗಳು ಸವೆದುಹೋಗಿವೆ. ಮೂರ್ತಿಶಿಲ್ಪಶಾಸ್ತ್ರದ ಆಧಾರದ ಮೇಲೆ ಈ ಶಿಲ್ಪ ಕ್ರಿ.ಶ.ಸುಮಾರು ೧೦ನೇ ಶತಮಾನದಲ್ಲಿ ಆಳುತ್ತಿದ್ದ ಗಂಗ ಅರಸರ ಕಾಲದ್ದೆಂದು ಹೇಳಬಹುದು.[೨೫]"

ಈ ವೇಳೆಗಾಗಲಿ ಮುತ್ತತ್ತಿಯಿರುವ ಬಸವನಬೆಟ್ಟ ಅರಣ್ಯದ ಅಂಚಿನಲ್ಲಿರುವ ಹರಿಹರ ಗ್ರಾಮದಲ್ಲಿ ಜೈನಧರ್ಮವು ಸಾಕಷ್ಟು ಪ್ರಭಾವಬೀರಿದ್ದಿತು ಎಂಬುದಕ್ಕೆ ಈ ಜಿನಶಿಲ್ಪವು ಆಧಾರವಾಗಿದೆ. ವೀರೆಗೌಡನದೊಡ್ಡಿ ಬಳಿಯ "ಬೋಳರೆ ಎಂಬಲ್ಲಿ ಪ್ರಾಚೀನ ಜೈನ ಅವಶೇಷಗಳು ಪತ್ತೆಯಾಗಿವೆ. ಈ ಸ್ಥಳವನ್ನು ಶ್ರವಣನಅರೆ ಎಂತಲೂ ಕರೆಯಲಾಗುತ್ತಿದ್ದು, ವಿಸ್ತಾರವಾದ ಗುಡ್ಡ ಇದಾಗಿದೆ. ಇದರ ಮೇಲೆ ಎಪ್ಪತ್ತು ಅಡಿ ಅಗಲ, ಇಪ್ಪತ್ತು ಅಡಿ ಉದ್ದದ ವಿಸ್ತಾರವಾದ ವೇದಿಕೆಯ ಮೇಲೆ ಮೂವತ್ತೇರಡು ಕಲ್ಲುಕಂಬಗಳಿಂದ ರಚಿಸಲ್ಪಟ್ಟಿರುವ ಪ್ರಾಚೀನ ಕಲ್ಲುಮಂಟಪವಿದೆ. ಪ್ರಸ್ತುತ ಮಂಟಪವು ಕದಲಿಸಲ್ಪಟ್ಟಿರುವ ದುಸ್ಥಿತಿಯಲ್ಲಿದ್ದು, ಒಂಭತ್ತು ಕಂಬಗಳು ಆಸರೆಯಾಗುಳ್ಳ ಮಂಟಪದ ಭಾಗ ಮಾತ್ರ ಸುಸ್ಥಿತಿಯಲ್ಲಿದೆ. ಇನ್ನುಳಿದವು ಅಲ್ಲೇ ಬಿದ್ದಿವೆ. ಈ ಮಂಟಪದೊಳಗೆ ಮೂರು ವಿಭಾಗಗಳಿದ್ದಂತೆ ಕಂಡು ಬರುತ್ತಿದ್ದು, ಬಲಗಡೆಯ ಮೊದಲ ಭಾಗದಲ್ಲಿ ಮಾತ್ರ ರುಂಡರಹಿತ ಜೈನ ತೀರ್ಥಂಕರನ ವಿಗ್ರಹವಿದೆ. ರುಂಡವನ್ನು ಹತ್ತಿರದಲ್ಲೇ ಇರುವ ಲಿಂಗದಕೆರೆಯ ಬಳಿ ಇಟ್ಟು ಪೂಜಿಸಲಾಗುತ್ತಿದೆ. ಧ್ಯಾನಮುದ್ರೆಯಲ್ಲಿ ಕುಳಿತಿರುವ ಈ ತೀರ್ಥಂಕರ ಮೂರ್ತಿಯು ಕುಳಿತಿರುವ ಭಾಗವು ಸಹ ಮಣ್ಣಿನಲ್ಲಿ ಹುದುಗಿಹೋಗಿದೆ. ನೆಲದಿಂದ ಮೇಲೆ ಎರಡು ಅಡಿ ಎತ್ತರದಲ್ಲಿ ಮಾತ್ರ ಶರೀರದ ಭಾಗ ಕಾಣುತ್ತಿದೆ. ಲಾಂಛನವಿರುವ ಪೀಠದ ಭಾಗ ಮರೆಯಾಗಿರುವುದರಿಂದ ಇದು ಯಾವ ತೀರ್ಥಂಕರನದೆಂದು ನಿರ್ಧರಿಸುವುದು ಕಷ್ಟವಾಗಿದೆ. ಈ ಜೈನಶಿಲ್ಪವನ್ನು ಕ್ರಿ.ಶ.೧೦ನೇ ಶತಮಾನವೆಂದು ನಿರ್ಧರಿಸಬಹುದು.[೨೬]"

ಈ ಪರಿಸರದಲ್ಲಿ ಜೈನಧರ್ಮದ ಆಸ್ತಿತ್ವದ ಅವಶೇಷಗಳು ದೊರೆದಿದ್ದು, ಬೌದ್ಧಧರ್ಮದ ಕುರುಹು ದೊರೆತಿಲ್ಲವಾದರೂ ಗಂಗ ಮತ್ತು ಹೊಯ್ಸಳರ ಕಾಲದಲ್ಲಿ ಜೈನಧರ್ಮವು ಉತ್ತುಂಗದ ಉತ್ತೇಜನವನ್ನು ಪಡೆದಿದ್ದು, ಇದೇ ವೇಳೆಯಲ್ಲಿ ವೈಷ್ಣವಧರ್ಮವು ರಾಮಾನುಜಾರ್ಯರಿಂದ

ಪ್ರವರ್ಧಮಾನಕ್ಕೆ ಬಂದಾಗ ವೈಷ್ಣವಧರ್ಮದ ದೇವತೆಗಳ ಆಹಾರದಲ್ಲಿಯೂ ಸಾತ್ವಿಕ ಆಹಾರಕ್ಕೆ ಪ್ರಾಧಾನ್ಯತೆ ಬಂದಿರಬೇಕು. ದೇವರಿಗೆ ಮಣೇವುಸೇವೆ ಸಂದರ್ಭದಲ್ಲಿ ಅರ್ಪಿಸುವ ತಿನಿಸುಗಳಾದ ಕಜ್ಜಾಯ, ಹಲಸಿನಹಣ್ಣಿನತೊಳೆ, ಬಾಳೇಹಣ್ಣಿನ ರಸಾಯನ, ಕಡಲೆಪುರಿ ಇವೆಲ್ಲ ಸಸ್ಯಾಹಾರದ ಅರ್ಪಣೆಯೇ ಆಗಿದೆ. 'ಮಣೇವು' ಎಂದರೆ ಕುಳಿತುಕೊಳ್ಳುವ ಒಂದು ಭಂಗಿ ಎಂದು ಅರ್ಥೈಸಬಹುದು. ಈ ಭಂಗಿಯಲ್ಲಿ ಕುಳಿತು ದೇವರಿಗೆ ತಿನಿಸುಗಳನ್ನು ಅರ್ಪಿಸುವುದಕ್ಕೆ 'ಮಣೇವುಸೇವೆ' ಎಂದು ಕರೆಯಲಾಗುತ್ತದೆ.

ಈ ಸೇವೆಯನ್ನು ಗ್ರಾಮೀಣಭಕ್ತರು 'ಮುತ್ತತ್ತಿರಾಯನಿಗೆ ಮಣೇವುಸೇವೆಯನ್ನು ಮಾಡುವೆವು' ಎಂದು ಹರಕೆಹೊತ್ತು ಬಂದ ಮೇಲೆ ದೇವರ ಸನ್ನಿಧಿಯಲ್ಲಿ ಮಾಡುತ್ತಾರೆ. ಹೊಳೆಯ ದಡದಲ್ಲಿ ಮಿಂದು ಮಡಿಯುಟ್ಟು ಸ್ತ್ರೀಯರು ಗಂಗಾ ಪೂಜೆಯನ್ನು ಮಾಡಿದ ಮೇಲೆ ಪಾತ್ರೆಗಳಲ್ಲಿ ಮೊದಲೇ ಸಿದ್ಧಪಡಿಸಿಕೊಂಡಿದ್ದ ಬಾಳೇಹಣ್ಣು, ಹಲಸಿನಹಣ್ಣು, ಕಡಲೆಪುರಿ, ಕಜ್ಜಾಯಗಳ ಮಿಶ್ರಣವನ್ನು ನೆಲದ ಮೇಲೆ ಹಾಸಿದ ವಸ್ತ್ರವೊಂದರ ಮೇಲೆ ನಾಲ್ಕು ಮೂಲೆಗೂ ಮತ್ತು ಮಧ್ಯದಲ್ಲೊಂದು ಐದು ಗುಡ್ಡೆಗಳನ್ನು ಇಡುತ್ತಾರೆ. ಮಣೇ ಆಡುವವನು ಆ, ಓಹೋ, ಆ, ಓಹೋ ಎನ್ನುತ್ತಾ ಇದನ್ನು ಸುತ್ತುತ್ತ ತಿನ್ನಲು ಯತ್ನಿಸುತ್ತಿರುತ್ತಾನೆ. ಅಂತ್ಯದಲ್ಲಿ ತಿನ್ನುವಲ್ಲಿ ಸಫಲನು ಆಗುತ್ತಾನೆ. ಆಗ ಇವನಿಗೆ ದೇವರೇ ಮೈಮೇಲೆ ಆವಾಹನೆಯಾಗಿರುವ ಹಾಗೆ ಭಾವನೆ ಇರುತ್ತದೆ. ಅಲ್ಲಿಂದ ಮುಂದೆ ಮತ್ತೊಮ್ಮೆ ಇದೇ ಬಗೆ ನಡೆಯುತ್ತದೆ. ಹೀಗೆ ದೇವಾಲಯದ ಬಳಿಯವರೆಗೂ ಈ ಮಣೇವು ಸೇವೆ ಜರಗುತ್ತದೆ. ನಂತರ ದೇವಾಲಯದ ಸುತ್ತಲೂ ಒಂದು ಸುತ್ತು ನಡೆಯುತ್ತದೆ. ಅಲ್ಲಿಗೆ ಈ ಮಣೇವುಸೇವೆ ಮುಕ್ತಾಯವಾಗುತ್ತದೆ. ಮಣೇವು ಆಡುವವನು ಸ್ನಾನ ಮಾಡಿ ವೈಷ್ಣವ ಲಾಂಛನ ನಾಮ ಧರಿಸಿರುತ್ತಾನೆ. ಮೈಯಲ್ಲಿ ಮಡಿಯಾದ ಬಿಳಿಯ ಬನಿಯನ್ನು ಮತ್ತು ನಿಕ್ಕರೊಂದನ್ನು ಹಾಕಿರುತ್ತಾನೆ. ಈ ಭಕ್ತರು ಮಣೇವು ಆಡುವುದರ ಬದಲು ದಾಸಯ್ಯಗಳು ಆಡುವುದೂ ಉಂಟು. ಶ್ರಾವಣ ಶನಿವಾರಗಳಂದು ಹಲವು ಭಕ್ತರು ಸತತವಾಗಿ ಈ ಸೇವೆಯಲ್ಲಿ ಭಾಗವಹಿಸಿದರೆ ಜಾತ್ರೆಯ ವೇಳೆಯಲ್ಲಂತೂ ಜಾತ್ರೆಯ ಒಂದು ಅಂಗವೆಂಬಂತೆ ಇದನ್ನು ಮಾಡುತ್ತಾರೆ. ಬಾಯಿಕವಳದ ಹಿಂದೆ ಕಾಯಿ ಒಡೆಯುವ ಕ್ರೀಡೆ, ಅದರ ಹಿಂದೆ ವಾನನ ಮೆರವಣಿಗೆಯು ಬರುತ್ತಿರುತ್ತದೆ. ಕೆಲವೊಮ್ಮೆ ಮಣೇವು ಹಾಡುವ ಓರ್ವ ವ್ಯಕ್ತಿಯ ಬದಲು ಇಬ್ಬರು ಮತ್ತು ಅದಕ್ಕೂ ಹೆಚ್ಚು ಭಕ್ತರು ಭಾಗವಹಿಸುವುದು ಉಂಟು. ಇದಕ್ಕೆ ಬಾಯಿಕವಳ ಎಂಬ ಪರ್ಯಾಯ ಪದವು ಉಂಟು.

## ೪.೫ ಮುಡಿಕೊಡುವುದು

ಭಾರತೀಯ ಸಂಪ್ರದಾಯದಲ್ಲಿ ಮುಡಿಕೊಡುವ ಪದ್ಧತಿಗೆ ಒಂದು ಪ್ರಮುಖ ಸ್ಥಾನವಿದೆ. ಯಾತ್ರೆಯ ರೂಪದಲ್ಲಿ ಹೋಗಿರುವವರು ಬಹುತೇಕ ತಮ್ಮ ಕೇಶವನ್ನು ದೇವರಿಗೆ ಅರ್ಪಿಸಿ ಬರುತ್ತಾರೆ. ಹುಟ್ಟಿದ ಮಗುವಿನ ಮನೆದೇವರಿಗೆ ಮುಡಿಯನ್ನು ಕೊಡುವುದು ಸಹ ಒಂದು ವಾಡಿಕೆಯಾಗಿದೆ. ಕಷ್ಟ ಬಂದಾಗ ನಿವಾರಣೆಯಾದರೆ ದೇವರಿಗೆ ಹರಕೆಹೊತ್ತು ಕಷ್ಟನೀಗಿದ ಮೇಲೆ ದೇವರ ಸನ್ನಿಧಿಯಲ್ಲಿ ಮುಡಿಕೊಡುವುದು ಹರಕೆಯ ಒಂದು ಭಾಗವಾಗಿದೆ.

ಮುತ್ತತ್ತಿಯಲ್ಲಿರುವ ಮುತ್ತತ್ತಿರಾಯನಿಗೂ ಸಹ ಮುಡಿಯನ್ನು ಕೊಡುವ ಪದ್ಧತಿಯಿದೆ. ಬಲಿ ಎಂಬುದು ಮುತ್ತತ್ತಿರಾಯ ಭಂಟರಾದ ಕರಿಯಣ್ಣ-ಕೆಂಚಣ್ಣ ಮತ್ತು ದೊಡ್ಡದೇವರಿಗಾದರೆ ಈ ಮುಡಿ ಕೊಡುವುದು ಮಾತ್ರ ಮುತ್ತತ್ತಿರಾಯನಿಗೆ ಆಗಿದೆ. ಬಹುಹಿಂದಿನಿಂದ ನಡೆದುಕೊಂಡ ಪದ್ಧತಿ ಇಲ್ಲಿ ಎಂದಿನಿಂದ ಆರಂಭವಾಯಿತು ಹೇಳುವುದು ಕಷ್ಟವಾದರೂ ಈ ದೇವರಲ್ಲಿ ನಂಬಿಕೆ ಬಂದಂತೆ ಈ ದೇವರಿಗೆ ನಡೆದುಕೊಳ್ಳುವುದನ್ನು ಪ್ರಾರಂಭ ಮಾಡಿದುದಂದಿನಿಂದ ಇಲ್ಲಿ ಈ ಪದ್ಧತಿ ಜಾರಿಗೆ ಬಂದಿದೆ. ಆದಿಯಲ್ಲಿ ನರಬಲಿಯಿದ್ದು ಅದು ಕೇಶ ನೀಡುವ ರೂಪವನ್ನು ತಾಳಿದೆ ಎಂಬ ವಾದವು ಇದೆ. ಬೆರಳನ್ನು ಬಲಿ ನೀಡುವ ಹಲವಾರು ಉದಾಹರಣೆಗಳಿವೆ. ಮುತ್ತತ್ತಿರಾಯನ ಒಕ್ಕಲಿನವರು ತಪ್ಪದೇ ತಮ್ಮ ಮಕ್ಕಳಿಗೆ ಒಂದು ವರುಷ ತುಂಬಿದ ಮೇಲೆ ಇಲ್ಲಿಗೆ ಕರೆ ತಂದು (ಹೆಣ್ಣಾಗಲಿ, ಗಂಡಾಗಲಿ) ಮುಡಿಯನ್ನು ಅರ್ಪಿಸುತ್ತಾರೆ. ಯಾತ್ರಾರ್ಥಿಯಾಗಿ ಬರುವ ಭಕ್ತರು ಸಹ ಇಲ್ಲಿ ಮುಡಿಯನ್ನು ದೇವರಿಗೆ ಅರ್ಪಿಸುತ್ತಾರೆ. ಅಲ್ಲದೆ ಹಲವಾರು ಕಷ್ಟನಷ್ಟದ ಕಾರಣಗಳಿಂದ ಹರಕೆ ಮಾಡಿಕೊಂಡ ಭಕ್ತರು ಬಂದು ಮುಡಿ ಕೊಡುವ ಆ ಮೂಲಕ ತಮ್ಮ ಹರಕೆಯನ್ನು ತೀರಿಸುವ ಪದ್ಧತಿಯು ಇದೆ. ಮಕ್ಕಳು ಗಂಡಸರೇ ಅಲ್ಲದೆ ಹೆಂಗಸರು ಸಹ ಮುಡಿ ಕೊಡುತ್ತಾರೆ. ಇಲ್ಲವೇ ಪಂಚಮುಡಿಯೆಂಬ ಕೆಲವೇ ಕೆಲವು ಕೂದಲುಗಳನ್ನು ಅರ್ಪಿಸುತ್ತಾರೆ. ಹಿಂದೆ ಟೆಂಡರ್ ಪದ್ಧತಿಯೇನು ಇರಲಿಲ್ಲ. ಮುಜರಾಯಿ ಇಲಾಖೆಗೆ ದೇವಾಲಯ ಸೇರಿದಾಗಿನಿಂದ ಟೆಂಡರ್ ಕರೆಯುವ ಮೂಲಕ ಮುಡಿ ಕೊಡುವ ವ್ಯವಸ್ಥೆಯನ್ನು ಮಾಡಲಾಗುತ್ತಿದೆ. ಇದಕ್ಕಾಗಿ ಕಾವೇರಿ ನದಿ ತೀರದಲ್ಲಿ ಪ್ರತ್ಯೇಕ ಸ್ಥಳವಿದೆ. ಅಲ್ಲಿ ಮುಡಿ ಕೊಡುವ ಕಾರ್ಯವನ್ನು ನಡೆಸಲಾಗುತ್ತದೆ.

ಮುಡಿ ಕೊಡುವವರು ಕಾವೇರಿ ನದಿಯ ನೀರನ್ನು ಮೂರು ಬಾರಿ ಕೇಶದ ಮೇಲೆ ಹಾಕಿಕೊಳ್ಳುತ್ತಾರೆ. ವೀಳೆದೆಲೆ ಅಡಿಕೆ ಬಾಳೇಹಣ್ಣು ಮತ್ತು ಮುಡಿ ತೆಗೆಯುವವನಿಗೆ ಕಾಣಿಕೆ ಹಣವನ್ನು ನೀಡುತ್ತಾರೆ. ಮೊದಲೇ ಹಣ ನೀಡಿ ಪಡೆದಿರುವ ಮುಡಿಯ ಚೀಟಿಯನ್ನು ನೀಡಿದಾಗ ಹಜಾಮನಿಂದ ಮುಡಿ ತೆಗಯುವ ಕಾರ್ಯ ನಡೆಯುತ್ತದೆ. ನಂತರ ಮುಡಿ ನೀಡಿದವರನ್ನು ಕಾವೇರಿ ನದಿಗೆ ಕರೆದುಕೊಂಡು ಹೋಗಿ ಮೂರು ಬಾರಿ ಮುಳುಗಿಸಿ ಮುತ್ತತ್ತಿರಾಯನನ್ನು ನೆನೆಯುತ್ತಾ ಸ್ನಾನ ಮಾಡಿಸುತ್ತಾರೆ. ನಂತರ ತಂದಿರುವ ಹೊಸ ಬಟ್ಟೆಯನ್ನು ಅಥವಾ ಮುಡಿ ಬಟ್ಟೆಯನ್ನು ತೊಡಿಸಿ ದಾಸಯ್ಯನಿಂದ ವೈಷ್ಣವ ಸಂಪ್ರದಾಯದಂತೆ ಹಣೆಯ ಮೇಲೆ ಮೂರು ನಾಮ ಮತ್ತು ಅದರ ಕೆಳಗೆ ಒಂದು ಅಡ್ಡನಾಮವನ್ನು ಇರಿಸಲಾಗುತ್ತದೆ. ಮಧ್ಯದ ನಾಮ ಕೆಂಪು ಅಥವಾ ಕೇಸರಿ ಬಣ್ಣದಾಗಿದ್ದರೆ, ಎರಡು ಕಡೆಯ ನಾಮ ಮತ್ತು ಅರನಾಮವೆಂದು ಕರೆಯುವ ನಾಮಗಳು ಬಿಳಿಯದ್ದಾಗಿರುತ್ತದೆ. ಈ ಬಗೆಯ ಮೂರು ನಾಮಗಳು ವೈಷ್ಣವ ಸಂಪ್ರದಾಯದ ತಿರುಪತಿಯಲ್ಲಿ ಕ್ರಿ.ಶ.ಸುಮಾರು ೧೪೬೫ರಿಂದ ಮೊದಲಾಯಿತ್ತೆಂದು ಹೇಳುತ್ತಾರೆ[೨೭]" ಇದರಿಂದಾಗಿಯೇ ಈ ಪಂಥದಲ್ಲಿ ಬೆಳೆದು ಬಂದ ಮುತ್ತತ್ತಿರಾಯನಿಗೂ ಈ ಬಗೆಯ ನಾಮವಿಡುವುದೇ ಬೆಳೆದುಬಂದಿದೆ. ದಾಸಯ್ಯನಿಗೆ ಸೂಕ್ತ ಕಾಣಿಕೆ ನೀಡಿ ಕೈಮುಗಿದು ದೇವಾಲಯಕ್ಕೆ ಹೋಗಿ ಪೂಜೆಯನ್ನು ಮಾಡಿಸಿಕೊಂಡು ತೀರ್ಥವನ್ನು ತಲೆಯ ಮೇಲೆ ಹಾಕಿಸಿಕೊಳ್ಳುತ್ತಾರೆ. ಇಲ್ಲಿಗೆ ತಾವು ನಿರ್ವಹಿಸಬೇಕಾದ ಕರ್ತವ್ಯ ಮುಗಿಸಿದ ಧನ್ಯತಾಭಾವವನ್ನು ತಳೆಯುತ್ತಾರೆ. ಜಾತ್ರಾ ಸಮಯದಲ್ಲಿ ಬಿಡುವಿಲ್ಲದಷ್ಟು ಮುಡಿ ಕೊಡುವವರ ಸಂಖ್ಯೆ ಇರುತ್ತದೆ. ಮಗುವಿಗೆ ಮುಡಿಯನ್ನು ಕೊಡುವಾಗ ಸೇವೆಯ ರೂಪದಲ್ಲಿ ಕುರಿ, ಮೇಕೆ ಅಥವಾ ಕೋಳಿಯನ್ನು ದೇವರಿಗೆ ಅರ್ಪಿಸಿ ದೇವಾಲಯದಿಂದ ಕರಿಯಣ್ಣ, ಕೆಂಚಣ್ಣ ಮತ್ತು ದೊಡ್ಡದೇವರನ್ನು ತಾವು ಬಿಡಾರ ಹೂಡಿರುವ ವಲಯ ತಟದಲ್ಲಿನ ಮರದ ಕೆಳಗೊ ಅಥವಾ ಛತ್ರದಲ್ಲಿಯೋ ತರಿಸಿ ಪೂಜಿಸಿ ಎಡೆಯನ್ನು ಅರ್ಪಿಸುತ್ತಾರೆ. ಸ್ಥಳೀಯವಾಗಿ ಕರಿಯಣ್ಣ, ಕೆಂಚಣ್ಣರನ್ನು ತೆಗೆದುಕೊಂಡು ಹೋಗಿ ಪೂಜಿಸುವ ದಾಸಯ್ಯನೊಬ್ಬನಿರುತ್ತಾನೆ. ಅವನೆಂದರೆ ಗ್ರಾಮೀಣ ಜನರಿಗೆ ಅತೀವ ಭಕ್ತಿ ಮತ್ತು ನಂಬಿಕೆ. ಇವನು ದೇವರನ್ನು ಪೂಜಿಸಿ ದೇವರನ್ನು ನಮಗೆ ಒಲಿಸಿಕೊಡುವವನು ಎಂಬ ಭಾವದಿಂದ ಪೂಜಿಸುವ ಸಮಯದಲ್ಲಿ ಈತ ಮುತ್ತತ್ತಿರಾಯನ ಪಾದಕ್ಕೆ ಗೋವಿಂದಾ ಗೋವಿಂದಾ, ಪಾದ್ದಾರಪ್ಪನ ಪಾದಕ್ಕೆ ಗೋವಿಂದಾ ಗೋವಿಂದಾ, ಹೊಳೆಸಾಲಯ್ಯ ನಿನ್ನ ಪಾದಕ್ಕೆ ಗೋವಿಂದಾ, ಗೋವಿಂದಾ_. , ಗೋವಿಂದವಿಕ್ಕುವ ಜೊತೆಗೆ ಪೂಜಿಸುತ್ತಾನೆ. ಬಂದಿರುವ ಭಕ್ತರೆಲ್ಲರಿಗೂ ನಾಮವನ್ನು ಹಣೆಯ ಮೇಲೆ ಲೇಪಿಸುತ್ತಾನೆ. ಗಂಡಸನಾದರೆ ಮೂರು ನಾಮ, ಹೆಣ್ಣು

ಭಕ್ತರಾದರೆ ಕೆಂಪಿನ ಒಂದೇ ನಾಮವನ್ನು ಲೇಪಿಸುತ್ತಾನೆ. ಇವನಿಗೆ ಭಕ್ತಿಯಿರುವವರೆಲ್ಲ ಪಾದಕ್ಕೆ ನಮಸ್ಕರಿಸುತ್ತಾರೆ. ಈತ ದೇವರಿಗೆ ಇಟ್ಟಿರುವ ಎಡೆಯ ಆಹಾರವನ್ನೆಲ್ಲಾ ಎತ್ತಿಕೊಂಡು ಕಾಣಿಕೆಯನ್ನು ಪಡೆದು ಭಕ್ತರಿಗೆಲ್ಲ ಆಶೀರ್ವದಿಸಿ ಮುನ್ನಡೆಯುತ್ತಾನೆ. ಇದು ಮುತ್ತತ್ತಿಯಲ್ಲಿ ಮೊದಲಿನಿಂದಲೂ ಹೊಳೆಯ ದಂಡೆ, ಮರದ ನೆರಳಿನ ಪರಿಸರದಲ್ಲೇ ಬೆಳೆದುಕೊಂಡು ಬಂದಿದ್ದು, ಇತ್ತೀಚಿಗೆ ವಸತಿಗೃಹದಲ್ಲಿ ನಡೆಯುವ ಬದಲಾವಣೆಯನ್ನು ಕಂಡಿದೆ. ದಾಸಯ್ಯನಿಗೆ ಅಕ್ಕಿಪಡಿಯೆಂಬ ಅಕ್ಕಿ, ಬೆಲ್ಲ, ಬಾಳೇಹಣ್ಣು, ಕಾಯಿ ಕೊಡುವುದರ ಜೊತೆಗೆ ಮುತ್ತತ್ತಿ ದೇವಾಲಯದ ತಮಡಪ್ಪನಿಗೂ ಸಹ ಅಕ್ಕಿಪಡಿಯನ್ನು ಈ ಸಮಯದಲ್ಲೇ ಕೊಡುತ್ತಾರೆ. ದಾಸಯ್ಯನಿಂದ ಪೂಜೆಯಾದ ನಂತರ ದೇವಾಲಯದಲ್ಲಿ ಅಕ್ಕಪಡಿ ಹುಂಡಿಗೆ ಕಾಣಿಕೆ ಅರ್ಪಿಸಿ ಹಣ್ಣು, ಕಾಯಿ, ಹೂವು, ದವನ, ಅಗರಬತ್ತಿ, ಕರ್ಪೂರಗಳಿಂದ ಪೂಜೆ ಸಲ್ಲಿಸಿ ತೀರ್ಥವನ್ನು ಪಡೆಯುತ್ತಾರೆ. ಬಾಟಲಿಗಳಲ್ಲಿ ತೀರ್ಥವನ್ನು ಅರ್ಧ ತುಂಬಿಸಿಕೊಂಡು ಉಳಿದರ್ಧವನ್ನು ಕಾವೇರಿ ನದಿಯ ನೀರನ್ನು ತೀರ್ಥದಷ್ಟೇ ಪವಿತ್ರವೆಂದು ಭಾವಿಸಿ ತುಂಬಿಸಿಕೊಂಡು ಮನೆಗಳಿಗೆ ಒಯ್ದು ಮೂಲೆ ಮೂಲೆಗಳಿಗೂ ಎರಚಿ ಪುನೀತರಾದರೆಂಬ ಭಾವವನ್ನು ತಳೆಯುತ್ತಾರೆ.

ಮುಡಿಯೆಂದರೆ ಕೇಶ, ಕೂದಲು ಎಂದರ್ಥವಿದ್ದರೂ ಪುರುಷರ ತಲೆಗಷ್ಟೇ ಸೀಮಿತವಾಗದೆ ಗಡ್ಡ ಮತ್ತು ಮೀಸೆಗಳನ್ನೆಲ್ಲ ಅರ್ಪಿಸುತ್ತಾರೆ. ಇದಕ್ಕೆ ಮುಡಿ ತೆಗೆಸುವುದು, ಮುಡಿ ಕೊಡುವುದು ಎಂತಲೇ ಗ್ರಾಮೀಣ ಭಕ್ತರು ಕರೆಯುತ್ತಾರೆ. ಗ್ರಾಮೀಣ ಭಕ್ತರು ಅಷ್ಟೇ ಅಲ್ಲದೆ ಈ ದೇವರ ಒಕ್ಕಲುಗಳಾಗಿ ನಗರದಲ್ಲಿ ನೆಲೆಸಿ ವಿದ್ಯಾವಂತರಾಗಿ, ಉನ್ನತ ಹುದ್ದೆಯಲ್ಲಿರುವವರು ಸಹ ಮುಡಿ ತೆಗೆಸುವ ಕಾರ್ಯದಲ್ಲಿ ಭಾಗಿಗಳಾಗುತ್ತಾರೆ. ನಂಬಿಕೆಯೇ ಇಲ್ಲಿ ಅಡಗಿದೆ. ಶನಿವಾರ, ಶ್ರಾವಣ ಶನಿವಾರಗಳಲ್ಲಿ ಮುಡಿ ಕೊಡುವವರ ಸಂಖ್ಯೆ ಹೆಚ್ಚಾಗಿರುತ್ತದೆ. ಜಾತ್ರಾ ಸಮಯದಲ್ಲಿ ಮುಡಿ ತೆಗೆಯುವ ಒಬ್ಬಿಬ್ಬರ ಸ್ಥಾನದಲ್ಲಿ ಹತ್ತಾರು ಜನರು ಇರುತ್ತಾರೆ. ಇವರನ್ನು ಟೆಂಡರ್ ಪಡೆದವನು ತಾತ್ಕಾಲಿಕವಾಗಿ ನೇಮಿಸಿಕೊಂಡಿರುತ್ತಾನೆ. ಮಜ್ಜನಕಡುವಿನಲ್ಲಿ ಮುಡಿ ಒಪ್ಪಿಸುವ ಕಾರ್ಯ ನಡೆಯುತ್ತಿದ್ದು, ಈಗ ಮುಖ್ಯರಸ್ತೆಯ ಕೊನೆಯ ಭಾಗದಲ್ಲಿ ನಡೆಯುತ್ತದೆ.

## ೪.೬ ಬಲಿಕೊಡುವ ಸಂಪ್ರದಾಯ

"ಕರ್ನಾಟಕದಲ್ಲಿ ಸುಮಾರು ೨,೪೦,೦೦೦ ದೇವಾಲಯಗಳಿದ್ದು, ಅವುಗಳಲ್ಲಿ ಸುಮಾರು ೪೦,೦೦೦ ದೇವಾಲಯಗಳು ಮುಜರಾಯಿ ಇಲಾಖೆಯ ವ್ಯಾಪ್ತಿಗೆ ಬರುತ್ತದೆ. ಇನ್ನು ೧,೦೦,೦೦೦ ದೇವಾಲಯಗಳಲ್ಲಿ ಪ್ರಾಣಿಬಲಿ ನಿರಂತರವಾಗಿ ನಡೆಯುತ್ತಲೇ ಇದೆ[೨೮]" ಈ ಮೇಲೆ ತಿಳಿಸಿದ ಮುಜರಾಯಿ ಇಲಾಖೆ ವ್ಯಾಪ್ತಿಗೆ ಬರುವ ದೇವಾಲಯಗಳಲ್ಲಿ ಮುತ್ತತ್ತಿಯ ಮುತ್ತತ್ತಿರಾಯನ ದೇವಾಲಯವು ಒಂದು. ಪ್ರಾಣಿ ಬಲಿ ನಡೆಯುವ ೧,೦೦,೦೦೦ ದೇವಾಲಯಗಳಲ್ಲಿಯೂ ಇದು ಒಂದು. ಗ್ರಾಮೀಣ ಭಕ್ತರಲ್ಲಿ ಮುತ್ತತ್ತಿಗೆ ಕುರಿ, ಕೋಳಿಯೊಂದನ್ನಾದರೂ ಹಿಡಿದುಕೊಂಡು ಹೋಗಬೇಕು ಎಂಬ ಭಾವನೆಯಿದೆ.

"ಸಾಮಾಜಿಕ ನೆಮ್ಮದಿ ಮತ್ತು ವೈಯಕ್ತಿಕ ಬಯಕೆಗಳ ಈಡೇರಿಕೆಗಾಗಿ ಪ್ರಾಣಿ ಬಲಿ ಸಂಪ್ರದಾಯ ಬಹುಕಾಲದಿಂದ ಬೆಳೆದು ಬಂದಿದೆ. ಪ್ರಪಂಚದ ಬಹುತೇಕ ಜನಾಂಗಗಳು ಈ ಸಂಪ್ರದಾಯವನ್ನು ರೂಢಿಸಿಕೊಂಡಿವೆ. ದೇವರ ಹೆಸರಿನಲ್ಲಿಯೇ ಪ್ರಾಣಿ ಬಲಿ ನಡೆಯುತ್ತದೆ. ಧರ್ಮದ ಕಲ್ಪನೆಗೆ ಇದು ಹೊರತ್ತಾಗಿದ್ದರೂ ಧಾರ್ಮಿಕ ಮುಖಂಡರು ಇದನ್ನು ಖಂಡಿಸುತ್ತಾ ಬಂದಿದ್ದರೂ, ಜಾನಪದ ಜೀವನ ಇದರಿಂದ ದೂರ ಉಳಿಯಲಿಲ್ಲವೆಂಬುದು ಗಮನಾರ್ಹ ಸಂಗತಿ. ಜಗತ್ತಿನಾದ್ಯಾಂತ ಪ್ರಚಲಿತವಿರುವ ಬಲಿ ಸಂಪ್ರದಾಯ ಕರ್ನಾಟಕದ ಜಾನಪದ ಬದುಕನ್ನು ಆವರಿಸಿಕೊಂಡಿದೆ.[೨೯]"

ಮಾನವ ಮೂಲತಃ ಮಾಂಸಾಹಾರಿ. ಆದಿಮಾನವನಾಗಿದ್ದ ಕಾಲದಿಂದ ಸಸ್ಯ ಜಗತ್ತನ್ನು ಆಹಾರವಾಗಿ ಆರಿಸಿಕೊಳ್ಳುವುದಕ್ಕೆ ಮೊದಲೇ ಮಾಂಸ ಜಗತ್ತನ್ನು ಆವರಿಸಿಕೊಂಡವನು. ಕಣ್ಣಿಗೆ, ಕೈಗೆ ತನಗಿಷ್ಟವಾದ ಪ್ರಾಣಿಗಳು ದೊರಕದಿದ್ದಾಗ ಹುಡುಕಿಕೊಂಡು ಹೋಗಿ ಕೊಲ್ಲುವ 'ಬೇಟೆಪದ್ಧತಿ'ಗಳನ್ನು ರೂಢಿಸಿಕೊಂಡವನು. ಈ ಮೂಲಕ ಸಂಪ್ರದಾಯ, ಆಚರಣೆ, ಪದ್ಧತಿ, ಕಲೆಗಳಿಗೆ ನಾಂದಿ ಹಾಡಿದವನು. ಬೇಟೆಯ ನಂತರ ತನಗೆ ದೊರೆತ ಪ್ರಾಣಿಯಿಂದ ಸ್ವಲ್ಪಭಾಗದ ಅರ್ಪಣೆಯನ್ನು ದೈವಶಕ್ತಿ ಎಂದು ನಂಬಿರುವ ಶಕ್ತಿ ಅರ್ಪಣೆ ಮಾಡುವ ಸಂಪ್ರದಾಯ ರೂಢಿಗೆ ಬಂದಿತು.

ಅಂದೇ ದೇವರಿಗೆ ಬಲಿ ನೀಡುವ ಸಂಪ್ರದಾಯ ಪ್ರಾರಂಭವಾಯಿತು ಎಂದು ಮನಗಾಣಬಹುದು. ಆಫ್ರಿಕಾ, ಆಸ್ಟ್ರೇಲಿಯ ಮತ್ತು ಏಷ್ಯಖಂಡದ ಆದಿವಾಸಿಗಳಲ್ಲಿ ಈ ಮೂಲದ ಹಲವಾರು ಪ್ರಾಗೈತಿಹಾಸಿಕ ಕಾಲದ ಮಂಡಲ ಚಿತ್ರಕಲೆಗಳು ಬೆಳೆದು ಬಂದ ಬಗೆಯನ್ನು ನೋಡಬಹುದು. ಹೀಗೆ ನಮಗೆ ಬೇಟೆ ದೊರಕಿಸಿ ಕೊಡುವವನಿಗೆ ಒಂದು ದೇವತಾ ಸ್ವರೂಪ ನೀಡಿ ಅವನನ್ನು ಕನ್ನಡ ಜಾಯಮಾನದ ಗ್ರಾಮೀಣರು ಬ್ಯಾಟರಾಯ ಎಂದು ಕರೆದರು. ಹಲವರು ಮಾಂಸಾಹಾರಿಗಳಾಗಿ, ಉಳಿದವರು ಮಾಂಸಾಹಾರಕ್ಕೆ ಬದಲಾಗಿ ಸಸ್ಯಾಹಾರವು ಸಹ ಸಮರ್ಪಕವೆಂದರಿತ ಎಷ್ಟೋ ಭಕ್ತರು ತಮ್ಮ ದೈವಗಳನ್ನು ಸಸ್ಯಾಹಾರಿಗಳನ್ನಾಗಿ ಮಾಡಿದರು. ಈ ದೈವಗಳಿಗೆ ಹಾಲು ಹಣ್ಣಿನ ನೈವೇದ್ಯ ಮಾಡಲಾರಂಭಿಸಿದರು. ಮಾಂಸಾಹಾರಿಯಾಗಿ ಉಳಿದ ದೇವರುಗಳಿಗೆ ಪ್ರಾಣಿ ಬಲಿ ನೀಡುವುದನ್ನೇ ಮುಂದುವರೆಸಿದರು. ಈ ಮೂಲಕ ಅಮಾಯಕ ಜೀವಿಗಳಾದ ಕೋಣ, ಕುರಿ, ಮೇಕೆ, ಕೋಳಿಗಳಂತಹ ಜೀವಿಗಳ ಬಲಿ ಮುಂದುವರೆಯಿತು. "ಈ ಅಮಾಯಕ ಜೀವಿಗಳ ಬಲಿ ನೀಡುವುದು ಭಕ್ತನ ಸ್ವಾರ್ಥತೆಗೆ ಮಾತ್ರವೇ ಆಗಿದ್ದು, ಉಗ್ರಪ್ರಾಣಿಗಳಾದ ಹಾವು, ಹುಲಿ, ಆನೆ, ಕಿರುಬಗಳು ಏಕೆ ಪ್ರಿಯ ಆಗುವುದಿಲ್ಲ, ಬಲಿ ಕೊಡುವುದು ನಮಗಾಗಿಯೇ, ನಮ್ಮ ಬಾಯಿಚಪಲಕ್ಕೆ, ಹೊಟ್ಟೆಪಿಪಾಸಗೆ.[೩೦]"

ಈ ವಾದ ಏನೇ ಇರಲಿ, ಬಲಿ ಸಂಪ್ರದಾಯ ಪ್ರಾಚೀನ ಕಾಲದಿಂದ ಯಜ್ಞ ಯಾಗಾದಿಗಳಲ್ಲಿಯೂ ಬಳಕೆಯಾಗಿ ಮುಂದುವರೆದುಕೊಂಡು ಬರುತಿದೆ. ಈ ಬಲಿ ಗ್ರಾಮ ದೇವತೆಯಾದ ಹೆಣ್ಣು ದೇವತೆಗಳಿಗೆ ಮಾತ್ರವೇ. ಗಂಡು ದೇವತೆಗಳಿಗೂ ಸಹ ಕರ್ನಾಟಕದಲ್ಲಿ ಕಾಣುತ್ತೇವೆ. ಬಲಿ ನೀಡುವ 'ಮೂಲಕ ದೇವರನ್ನು ಒಲಿಸಿಕೊಂಡು ತಮ್ಮ ಬದುಕನ್ನು ಮುನ್ನಡೆಸಿಕೊಂಡು ಹೋಗುವ ಹಿನ್ನೆಲೆಯೇ ಈ ಬಲಿ ಸಂಪ್ರದಾಯದ ಹಿಂದೆ ಅಡಗಿರುವ ಆಶಯವಾಗಿದೆ.

ಆದರೂ ಈ ಮೂಕ ಪ್ರಾಣಿಗಳ ಹಿಂಸೆ ಬಲಿಯನ್ನು ಖಂಡಿಸುತ್ತಾ ಬಂದ ಕವಿಗಳು, ಧಾರ್ಮಿಕ ಮುಖಂಡರುಗಳನ್ನು ನಾವು ಕಾಣಬಹುದು. ಅಹಿಂಸೆಯನ್ನು ಎತ್ತಿಹಿಡಿದು, ಹಿಂಸೆಯನ್ನು ಖಂಡಿಸಿದ ಬೌದ್ಧ ಮತ್ತು ಜೈನ ಧರ್ಮಗಳ ಹಿನ್ನೆಲೆಯಲ್ಲಿ ನೋಡಬಹುದು. ಆದರೂ ಮಾನವನಿಗೆ ಪ್ರಿಯವಾದ ಮಾಂಸಾಹಾರ, ದೇವರಿಗೆ ರಕ್ತಾಹಾರವಾದ ಬಲಿಯಾಗಿ ಮುಂದುವರೆಯಿತು.

ದಕ್ಷಿಣ ಕರ್ನಾಟಕದ ಮುಖ್ಯದೈವವಾಗಿ ಬೆಳೆದು ಬಂದಿರುವ ಮುತ್ತತ್ತಿರಾಯನ ಬಳಿಯಲ್ಲಿಯೂ ಸಹ ಬಲಿ ನೀಡುವ ಸಂಪ್ರದಾಯ ಬೆಳೆದು ಬಂದಿದೆ. ಮೂಲತಃ ಕರ್ನಾಟಕದ ದೈವವೇ ಆಗಿರುವ ಈ ಆಂಜನೇಯನಿಗೆ 'ಮುತ್ತತ್ರಾಯನಿಗೆ, ಮುತ್ರಾಯನ ಸ್ವಾವೆಗೆ ಈ ಕುರಿ, ಮೇಕೆ ಅಥವಾ ಕೋಳಿ' ಎಂಬ ವಾಡಿಕೆಯೇ ಜನಪದರದ್ದಾಗಿದೆ. ಈ ಕುರಿಯನ್ನು, ಮೇಕೆಯನ್ನು ಅಥವಾ ಕೋಳಿಯನ್ನು ಮುತ್ತತ್ತಿರಾಯನಿಗೆ ಬಿಟ್ಟಿದ್ದೇವೆ ಎಂದು ದೇವರ ಹೆಸರಿನಲ್ಲಿ ಬಿಟ್ಟು ಚೆನ್ನಾಗಿ ಬಲಿತ ಮೇಲೆ ಅದನ್ನು ತೆಗೆದುಕೊಂಡು ಹೋಗಿ ದೇವರ ಬಳಿ ಬಲಿ ನೀಡುವ ಮೂಲಕ ಸೇವೆ ಮಾಡುವುದು ಮುತ್ತತ್ತಿರಾಯನ ಭಕ್ತರ ಸಂಪ್ರದಾಯವಾಗಿದೆ. ಅಲ್ಲದೇ ತತ್‌ಕ್ಷಣದಲ್ಲಿ ದೊರೆತ ಕುರಿ, ಮೇಕೆ, ಕೋಳಿಗಳನ್ನು ಕೊಂಡು ಹೋಗಿಯೂ ಬಲಿ ನೀಡುತ್ತಾರೆ. ಈ ಬಲಿ ನೀಡುವುದು ಮುತ್ತತ್ತಿರಾಯನಿಗೆ ಅಲ್ಲ, ಬದಲಾಗಿ ದೊಡ್ಡದೇವರಿಗೆ ಹಾಗೂ ಮುತ್ತತ್ತಿರಾಯನ ಭಂಟರಾದ ಕರಿಯಣ್ಣ-ಕೆಂಚಣ್ಣರಿಗೆ ಎಂಬ ನಂಬಿಕೆಯು ಇಲ್ಲಿದೆ. ಆದುದರಿಂದ ಬಲಿ ಕೊಡುವ ಮುನ್ನ ಈ ದೇವರುಗಳ ಹಲಗೆ ಅಥವಾ ಹರಿಗೆಗಳನ್ನಿಟ್ಟು ಪೂಜಿಸಿ ಬಲಿಯನ್ನು ನೀಡುತ್ತಾರೆ. ಇಲ್ಲಿ ಈ ಬಲಿ ನೀಡುವ ಹಿನ್ನೆಲೆಗೆ ಜನಪ್ರತೀತಿಗಳಿದ್ದು ದೊಡ್ಡದೇವರು, ಕರಿಯಣ್ಣ, ಕೆಂಚಣ್ಣ ಉಪಶೀರ್ಷಿಕೆಗಳಲ್ಲಿ ನೀಡಲಾಗಿದೆ.

ಬಲಿ ನೀಡುವುದು ಮುತ್ತತ್ತಿ ಪ್ರದೇಶದ ಜಲ ಅನುಕೂಲಕರವಾದ ಸ್ಥಳದಲ್ಲಿ ಹೆಚ್ಚಾಗಿ ಮರದ ಬುಡದಲ್ಲಿ. ಒಂದು ಕಡೆ ದೇವರಾದ ಕರಿಯಣ್ಣ-ಕೆಂಚಣ್ಣ ಲಭ್ಯವಿದ್ದರೆ ದೊಡ್ಡದೇವರನ್ನು ದೇವಾಲಯದಿಂದ ತಂದು ಇರಿಸುತ್ತಾರೆ. ಇದಕ್ಕೆಲ್ಲ ಪೂಜೆ ಸಲ್ಲಿಸಿ ಬಲಿಗೆ ಕಾದಿರುವ ಜೀವಿಯ ಮೇಲೆ ಪೂಜಿಸಿರುವ ತೆಂಗಿನಕಾಯಿಯ ತೀರ್ಥ, ಕುಂಕುಮಹಾಕಿ ಅಗರಬತ್ತಿಯಿಂದ ಪೂಜಿಸುತ್ತಾರೆ. ಅದು ಒದರುವ ಮೂಲಕ ಕಾಯುತ್ತಿರುತ್ತಾರೆ. ಈ ವೇಳೆಯಲ್ಲಿ ಮುತ್ತತ್ತಿರಾಯ ಒಪ್ಪಿಗೆ ಕೊಡು ತಪ್ಪು ಒಪ್ಪುಗಳು ಏನೇ ಇದ್ದರೂ ನಿನ್ನ ಹೊಟ್ಟೆಗೆ ಹಾಕಿಕೋ ಎಂದು ಬೇಡಿಕೊಳ್ಳುತ್ತಾರೆ. ಜೀವಿ ಒದರಿ ಒಪ್ಪಿಗೆ ಸೂಚಿಸಿದ ಮೇಲೆ ಅದರ ಶಿರವನ್ನು ಖಡ್ಗ ಇಲ್ಲವೇ ಮಚ್ಚಿನಿಂದ ಕತ್ತರಿಸಿ ಹಾಕಿ ಮಾಂಸದ ಅಡಿಗೆ ಮಾಡುತ್ತಾರೆ. ಊಟದ ಎಲೆಗಳ ಮೇಲೆ ಮಾಂಸದೂಟದ ಎಡೆಯನ್ನು ಇಡುತ್ತಾರೆ. ಇದರ ಜೊತೆಗೆ ಸ್ವಲ್ಪ ಮದ್ಯವನ್ನು ಎಡೆಗಾಗಿ ಇಡುತ್ತಾರೆ. ಪೂಜೆಯ ನಂತರ ಮುತ್ತತ್ತಿರಾಯ, ದೊಡ್ಡದೇವರು, ಕರಿಯಣ್ಣ-ಕೆಂಚಣ್ಣ, ಪಾದ್ದಾರಪ್ಪ, ಕಂಬದರಾಯ ಇವರ ಪಾದಗಳಿಗೆ ಗೋವಿಂದಾ ಇಟ್ಟು ಸಹಪಂಕ್ತಿ ಭೋಜನ ಮಾಡುತ್ತಾರೆ.

ಈ ಬಲಿಕೊಡುವ ಸಂಪ್ರದಾಯವು ಮುತ್ತತ್ತಿರಾಯನೇ ಆಗಿರುವ ಪಾದ್ದಾರೆಯಲ್ಲಿಯೂ ನಡೆಯುತ್ತದೆ. ಇಲ್ಲಿ ಕೆಲವು ತಂಗುತಾಣಗಳಿದ್ದು, ಅಲ್ಲಿ ಈ ಕಾರ್ಯ ನಡೆಯುತ್ತದೆ. ಈ ಬಲಿಯನ್ನು ದೇವರ ಬಳಿಯಾದ ಮುತ್ತತ್ತಿಯಲ್ಲಿಯೇ ಅಲ್ಲದೆ ತಾವು ವಾಸವಿರುವ ಗ್ರಾಮೀಣ ಇಲ್ಲವೇ ನಗರದ ಮನೆಗಳ ಮುಂದೆಯೂ ಸಹ ನಡೆಸುತ್ತಾರೆ. ಮೊದಲೇ ದೇವರಿಗಾಗಿ ಈ ಬಲಿಯೆಂದು ಪೂಜಿಸಿ, ಬಿಟ್ಟಿರುವ ಜೀವಿಯಾದ ಕುರಿ, ಮೇಕೆ, ಕೋಳಿಯನ್ನು ಕರೆತಂದು ಮನೆಯ ಮುಂದೆ ಮೊದಲೇ ಸ್ವಚ್ಛಮಾಡಿ ಸಾರಿಸಿ, ರಂಗೋಲೆ ಹಾಕಿರುವ ರಂಗೋಲೆ ಮೇಲೆ ನಿಲ್ಲಿಸಿ ಅಗರಬತ್ತಿಯಿಂದ ಪೂಜಿಸಿ ಬಲಿಯ ಜೀವಿಯ ಮೇಲೆ ಕುಂಕುಮ, ಅರಿಶಿನದ ಲೇಪನ ಮಾಡಿ ತೆಂಗಿನಕಾಯಿ ಹೊಡೆದು ಅದರ ತೀರ್ಥವನ್ನು ಎರಚುತ್ತಾರೆ. ಮುತ್ತತ್ತಿರಾಯನನ್ನು ನೆನೆದುಕೊಳ್ಳುತ್ತಾರೆ. ಈ ವೇಳೆಯಲ್ಲಿ ಈ ಮಗ್ಧ ಭಕ್ತಿಯನ್ನು ಗುರುತಿಸಬಹುದು. ಬಲಿಜೀವಿ ಒದರಿ ಒಪ್ಪಿಗೆ ನೀಡಿದ ಮೇಲೆ ಅದರ ಶಿರವನ್ನು ಕೊಯ್ಯುವುದರ ಮೂಲಕ ಬಲಿ ನೀಡುತ್ತಾರೆ. ನಂತರ ಅಡಿಗೆಮಾಡಿ ಸ್ವಲ್ಪ ಭಾಗವನ್ನು ತೆಗೆದು ದೇವರಿಗೆ ಎಡೆಯನ್ನಿಟ್ಟು ಪೂಜಿಸಿ ನಂತರ ಮನೆಯವರು ಮತ್ತು ಆಹ್ವಾನಿತರು ಊಟವನ್ನು ಮಾಡುತ್ತಾರೆ.

ಇಲ್ಲಿ ಊರಿನ ಕೆಲವರೆಲ್ಲ ಸೇರಿ ಬಲಿ ನೀಡಿ ಸೇವೆ ಮಾಡುತ್ತಾರೆ. ಆದರೂ ವೈಯಕ್ತಿಕವಾಗಿ ಮಾಡುವುದೇ ಹೆಚ್ಚು. ಗ್ರಾಮಗಳಿಂದ ಟ್ರಾಕ್ಟರ್, ಲಾರಿ, ಟೆಂಪೋ ಹಾಗೂ ಬಸ್ಸು, ಕಾರುಗಳಿಂದ ಭಕ್ತರು ಆಗಮಿಸಿ, ಬಲಿನೀಡಿ ಸೇವೆಯನ್ನು ಮಾಡುತ್ತಾರೆ. ವರ್ಷದ ಎಲ್ಲಾ ಸಮಯಗಳಲ್ಲೂ ಈ ಬಲಿ ಸಂಪ್ರದಾಯ ನಡೆಯುತ್ತದೆ. ಆದರೂ ಶ್ರಾವಣ ಶನಿವಾರ ಮತ್ತು ಜಾತ್ರೆಗಳಲ್ಲಿ ಹೆಚ್ಚು. ನಗರ ಪ್ರದೇಶಗಳಿಂದ ಕಾರು ಇಲ್ಲವೇ ಬಸ್ಸುಗಳ ಮೂಲಕ ಭಕ್ತರು ಬಂದು ಬಲಿನೀಡಿ ಪೂಜಿಸುತ್ತಾರೆ.

ಈ ಬಲಿ ನೀಡಿದ ಜೀವಿಗಳಿಂದ ವಿಧವಿಧವಾದ ಅಡುಗೆಗಳನ್ನು ಮಾಡುತ್ತಾರೆ. ಅದರ ಗೆಡ್ಡೆಕಟ್ಟಿದ ರಕ್ತದ ಜೊತೆಗೆ ಕಡಲೇಕಾಳುಗಳನ್ನು ನೆನೆಸಿ, ಬೇಯಿಸಿ ಚೌಕನ ಮಾಡಿದರೆ, ಹೊಟ್ಟೆಯ ಭಾಗಗಳಿಂದ 'ಗೊಜ್ಜು'ವನ್ನು ತಯಾರಿಸುತ್ತಾರೆ. ಉಳಿದ ಭಾಗಗಳಿಂದ ಸಾರು ಅಥವಾ ಬಸಿದ ಸಾರುನ್ನು ಮಾಡಿ ರಾಗಿಮುದ್ದೆ ಮತ್ತು ಅನ್ನದ ಜೊತೆ ಸೇವಿಸುತ್ತಾರೆ. ಈಗ ಮುತ್ತತ್ತಿರಾಯನ ದೇವಾಲಯದ ಬಳಿಯಲ್ಲಿಯೇ ವಸತಿಗಳ ಅನುಕೂಲಗಳಿರುವುದರಿಂದ ಅಲ್ಲಿಯೂ ಸಹ ಈ ಬಲಿ ಸಂಪ್ರದಾಯ ನಡೆಸುತ್ತಾರೆ.

ಯಾತ್ರೆ ಮುಗಿದ ನಂತರವಂತೂ ನದಿಯ ತೀರದ ಮರಗಳ ಸಾಲುಗಳಲ್ಲೆಲ್ಲ ಒಣ್ಣಿದ ಒಲೆಗಳು ರಕ್ತಸಿಕ್ತ ಸ್ಥಳಗಳು ಕಂಡು ಬರುತ್ತವೆ. ಬಲಿ ಮಾಡಿದ ಕುರಿ, ಮೇಕೆಗಳ ಚರ್ಮವನ್ನು ಮೊದಲು ಮಾದಿಗರಾದ ಮುತ್ತುರಾಯ ಭಕ್ತರಿಗೆ ನೀಡುತ್ತಿದ್ದರಾದರೂ, ದೇವಾಲಯದ ಮುಜರಾಯಿ ಇಲಾಖೆಗೆ ಸೇರಿದ ಮೇಲೆ ಟೆಂಡರ್ ಪಡೆದವರು ಬಂದು ತೆಗೆದುಕೊಂಡು ಹೋಗುತ್ತಾರೆ. ಇದಕ್ಕೆ ಅವರೇನೂ ಹಣ ಕೊಡುವುದಿಲ್ಲ. ಇದು ಮುತ್ತತ್ತಿರಾಯನಿಗೆ ಅರ್ಪಣಾ ಕಾಣಿಕೆ ಎಂದು ಗ್ರಾಮೀಣ ಭಕ್ತರು ಭಾವಿಸಿ ನೀಡುತ್ತಾರೆ.

ಭಾರತದ ಹಳ್ಳಿಗಳಲ್ಲಿ ಅಂತೆಯೇ ಕರ್ನಾಟಕದಲ್ಲಿ ಕೋಣವನ್ನು ಬಲಿಕೊಡುವರಾದರೂ ಮುತ್ತತ್ತಿಯಲ್ಲಿ ಕೋಣ ಅಥವಾ ಹಂದಿ ಬಲಿಕೊಡುವ ಪದ್ಧತಿ ಬೆಳೆದುಬಂದಿಲ್ಲ. ದೇವರಿಗೆ ಇದೆಲ್ಲ ವರ್ಜ್ಯ. ಭಕ್ತರಲ್ಲಿ ಹಲವರು ಕೋಣ, ಹಂದಿ ಮಾಂಸಗಳನ್ನು ಸೇವಿಸುವುದಾದರೂ ಇಲ್ಲಿ ಅದು ವರ್ಜ್ಯವಾಗಿರುತ್ತದೆ. ಮುತ್ತತ್ತಿಯ ಪರಿಸರದಲ್ಲಿ ಒಂದೂವರೆ ಕಿ.ಮೀ.ನಿಂದ ಎರಡು ಕಿ.ಮೀ.ಅನುಕೂಲಕರವಾದ ಸ್ಥಳದಲ್ಲಿ ಈ ಬಲಿ ಸಂಪ್ರದಾಯ ನಡೆಯುವುದೇ ಅಲ್ಲದೆ ನದಿಯ ಆಚೆಯ ದಡದಲ್ಲಿಯೂ ಸಹ ಬಿಡಾರ ಹೂಡಿರುವ ಭಕ್ತರಿಂದಲೂ ನಡೆಯುತ್ತದೆ. ಮುತ್ತತ್ತಿಯಲ್ಲಿ ದೇವರು ಮುತ್ತತ್ತಿರಾಯ ಗ್ರಾಮೀಣರಿಗೆ ಹತ್ತಿರವಾದಂತೆಲ್ಲ ಈ ಬಲಿ ಸಂಪ್ರದಾಯ ಇಲ್ಲಿನ ಪರಿಸರದಲ್ಲಿ ಹರಡಿದಂತೆ ಕಾಣುತ್ತದೆ. ಈ ಮೂಲಕ ಮುತ್ತತ್ತಿ ಸ್ಥಳವು ಜನತೆಗೆ ಪ್ರಿಯವಾಗಿ ಕಂಡಿದೆ. ಹೀಗೆ ಬಲಿ ನೀಡಿದರೆ ದೇವರು ಸಂತೃಪ್ತನಾಗಿ ತಮ್ಮನ್ನು, ತಮ್ಮ ಮನೆತನವನ್ನು ಕಾಪಾಡಿ ಮುನ್ನಡೆಸುತ್ತಾನೆ ಎಂಬ ನಂಬಿಕೆ ಇದ್ದು, ಭಕ್ತರು ವರ್ಷಕ್ಕೊಮ್ಮೆಯಾದರೂ ತಮ್ಮ ಮನೆತನದಿಂದ ಇಲ್ಲಿಗೆ ಬಂದು ಬಲಿ ನೀಡುತ್ತಾರೆ. ಗಾವುಸಿಗಿಯುವ ಕ್ರೂರ ಪದ್ಧತಿಯೇನೂ ಈ ದೇವರಿಗೆ ನಡೆಯುವುದಿಲ್ಲ.

ಈ ಪರಿಸರದ 'ಕದಂಬರಾಯನಗುಡಿ'ಎಂಬ ಮುತ್ತತ್ತಿರಾಯನ ದೇವಾಲಯದಲ್ಲಿ ಶನಿವಾರಗಳು ಹಾಗೂ ಜಾತ್ರೆ ವೇಳೆಯಲ್ಲಿ ಬಲಿ ನೀಡಲಾಗುತ್ತದೆ. ಅಂತೆಯೇ ಸ್ವಾಮನಕೆರೆಗುಡಿಯ ಬಳಿ ಮತ್ತು ತಿರುಗಣೆಮಡುವು ಸ್ಥಳಗಳಲ್ಲಿಯೂ ನಡೆಯುತ್ತದೆ. ಅಲ್ಲದೆ ಮುತ್ತತ್ತಿರಾಯನಿಗೆ ಸಂಬಂಧಿಸಿದ ಅನ್ಯಕ್ಷೇತ್ರಗಳಾದ ಕಡೆಗುಡ್ಡೆಮುತ್ತಪ್ಪ, ದೊಡ್ಡಲಹಳ್ಳಿ ಬಳಿಯ ಬ್ಯಾಟೆವ್ರಹಳ್ಳಿ, ಬೆಂಗಳೂರು ಜ್ಞಾನಭಾರತಿ

ಬಳಿ ಇನ್ನು ಅನ್ಯಕ್ಷೇತ್ರಗಳಲ್ಲಿ ಬಲಿ ಮತ್ತು ಮಾಂಸಾಹಾರದ ಅಡುಗೆಗೆ ಬೇಕಾದ ಪರಿಕರಗಳನ್ನು ಸಜ್ಜುಮಾಡಿ ಅನುಕೂಲ ಮಾಡಿಕೊಟ್ಟಿರುತ್ತಾರೆ.

ಸಿದ್ಧಾಪ್ಪಾಜಿಯ ಕ್ಷೇತ್ರವಾದ ಕೊಳ್ಳೆಗಾಲದ ತಾಲ್ಲೂಕಿನ ಚಿಕ್ಕಲ್ಲೂರು ಜಾತ್ರೆಯ ಕಡೆಯ ದಿನ ನಡೆಯುವ ರಕ್ತಾಹಾರ, ಪಂಕ್ತಿಸೇವೆ ಎಂಬ ಬಲಿಯು ಸಹ ಮುತ್ತತ್ತಿರಾಯನಿಗಾಗಿಯೇ ಎಂದು ಹೇಳುತ್ತಾರೆ. ಆದರೆ ವೈಷ್ಣವ ಪಂಥದ ಭಕ್ತರು ಈ ಅರ್ಪಣೆ ಮುತ್ತತ್ತಿರಾಯನ ಸೇವಕರಾದ ಕರಿಯಣ್ಣ-ಕೆಂಚಣ್ಣರಿಗೆ ಮಾತ್ರ ಎಂದು, ಮುತ್ತತ್ತಿರಾಯ ಸಸ್ಯಾಹಾರಿ ಎಂಬ ಮಡಿವಂತಿಕೆಯನ್ನು ಕಾಪಾಡಿಕೊಳ್ಳುತ್ತಾರೆ. ಈ ದೆಸೆಯಲ್ಲಿಯೇ ಮುತ್ತತ್ತಿರಾಯನಿಗೆ ಭಂಗಿಸೇವನೆಯು ಸಲ್ಲದ್ದು. ಸಿದ್ಧಾಪ್ಪಾಜಿ ಭಂಗಿ ಸೊಪ್ಪನ್ನು ಉಜ್ಜಿ ಸೇವಿಸಲು ನೀಡಿದಾಗ ಮುತ್ತತ್ತಿರಾಯನು ಕಣ್ಣುಗುಡ್ಡೆಗಳನ್ನು ಮೇಲೆ ಮಾಡಿ ಕೆಮ್ಮಿ ಸಂಕಟ ಪಡುವುದನ್ನು 'ಧರೆಗೆ ದೊಡ್ಡವರು'ಕೃತಿಗಳಲ್ಲಿ ಉಲ್ಲೇಖಿಸಿದ್ದಾರೆ.

ಹೀಗೆ ಬಲಿ ನೀಡುವ ಪದ್ಧತಿ ಏಕಾಏಕಿ ಮುತ್ತತ್ತಿರಾಯನಿಗೆ ಹೊಸದಾಗಿ ಸೃಷ್ಟಿಗೊಂಡ ಸಂಪ್ರದಾಯವೇನೂ ಅಲ್ಲ. ಭಕ್ತರಲ್ಲಿ ಈ ಮೊದಲೇ ಇದ್ದ ಸಂಪ್ರದಾಯವನ್ನು ಮುತ್ತತ್ತಿರಾಯನಿಗೆ ಸಮೀಕರಿಸಿಕೊಂಡು ನಡೆಸಿಕೊಂಡು ಬರುತ್ತಿದ್ದಾರೆ.

'ಮುತ್ತತ್ತಿಕ್ಷೇತ್ರ' ಹಾಗೂ 'ಮುತ್ತತ್ತಿರಾಯ' ದೇವಾಲಯ ಸಾಂಸ್ಕೃತಿಕವಾಗಿ ಮುನ್ನಡೆಯಲು ನಾಗರೀಕತೆಯ ಕಡೆ ಮುಖಾಮುಖಿಯಾಗಲು ಬಲಿ ಒಂದು ಉತ್ತಮ ಸಂಪ್ರದಾಯವಾಗಿ ನಡೆದು ಬಂದಿದೆ.

# ಅಡಿಟಿಪ್ಪಣಿಗಳು

೧. ಶ್ರೀ.ಎಚ್.ವಿ.ನಾಗೇಶ್ ; ಜಾತ್ರೆಗಳು ಮತ್ತು ಸಮಾಜ, ಕರ್ನಾಟಕ ಜಾತ್ರೆಗಳು (ವಿಚಾರ ಸಂಕಿರಣದ ಪ್ರಬಂಧಗಳು) ಕನ್ನಡ ವಿಭಾಗ, ಸ್ನಾತಕೋತ್ತರ ಕೇಂದ್ರ ಬಿ.ಆರ್. ಪ್ರಾಜೆಕ್ಟ್, ಮೈಸೂರು ವಿಶ್ವವಿದ್ಯಾಲಯ, ಪುಟ-೬೮, ೧೯೮೮

೨. ದೇ.ಜವರೇಗೌಡ ; ಜಾನಪದ ವಾಹಿನಿ, ಡಿ.ವಿ.ಕೆ.ಮೂರ್ತಿ, ಮೈಸೂರು-೪, ಪುಟ-೧೪೪, ೧೯೮೬

೩. ಕೆ.ಅನಂತರಾಮು ; ಸಕ್ಕರೆಸೀಮೆ, ಅನಂತಪ್ರಕಾಶನ, ಮೈಸೂರು, ಪುಟ-೨೨೦, ೨೩೧

೪. ಶ್ರೀ.ಜಿ.ವಿ.ದಾಸೇಗೌಡ ; ಮಂಡ್ಯಜಿಲ್ಲೆಯ ಜಾತ್ರೆಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು. ೨೦೦೦

೫. ಮುತ್ತುರಾಜು ; ಮುತ್ತತ್ತಿ ಜಾತ್ರೆ ಒಂದು ಅಧ್ಯಯನ, ಸತ್ಯಶುದ್ಧಕಾಯಕ, ಸಂಪುಟ-೫, ಸಂಚಿಕೆ ೩,೪, ಶ್ರೀಜಗದ್ಗುರು ಮುರುಘಾ ರಾಜೇಂದ್ರ ವಿದ್ಯಾಪೀಠ, ಬೃಹನ್ಮಠ, ಚಿತ್ರದುರ್ಗ,ಪುಟ-೫೭, ೬೩, ೧೯೯೫

೬. ಹಂ.ಪ.ನಾಗರಾಜಯ್ಯ ; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೫

೭. ಕರ್ನಾಟಕ ಜಾತ್ರೆಗಳು ; ವಿಚಾರ ಸಂಕಿರಣದ ಪ್ರಬಂಧಗಳು, ಕನ್ನಡ ವಿಭಾಗ, ಸ್ನಾತಕೋತ್ತರ ಕೇಂದ್ರ, ಬಿ.ಆರ್, ಪ್ರಾಜೆಕ್ಟ, ಮೈಸೂರು ವಿಶ್ವವಿದ್ಯಾಲಯ, ೧೯೮೮

೮. ದೇ.ಜವರೇಗೌಡ ; ಜಾನಪದವಾಹಿನಿ, ಡಿ.ವಿ.ಕೆ.ಮೂರ್ತಿ, ಮೈಸೂರು-೪, ೧೯೮೬

೯. ಜಾನಪದ ದರ್ಶನ ; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ-೧೩೮, ೧೯೯೪

೧೦. ಡಾ.ಹೆಬ್ಬಾಲೆ.ಕೆ.ನಾಗೇಶ್ ; ಜನಪದರು ಮತ್ತು ಜಾತ್ರೆಗಳು, ಜಾನಪದ ಕರ್ನಾಟಕ, ಸಂಪುಟ-೫,ಸಂಚಿಕೆ-೨, ಪುಟ-೧, ೨೦೦೬

೧೧. ಪ್ರೊ.ಸಾ.ಕೃ.ರಾಮಚಂದ್ರರಾವ್ ; ಮೂರ್ತಿಶಿಲ್ಪ ನೆಲೆ ಮತ್ತು ಹಿನ್ನೆಲೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ಪುಟ-೩೨೪, ೧೯೭೫

೧೨.೧೩.೧೪.೧೫.೧೬.೧೭. ಕೆ.ಅನಂತರಾಮು ;ಪೂರ್ವೋಕ್ತ ಪುಟ-೨೨೨, ೨೨೪, ೨೨೫.೨೨೧, ೧೯೮೨

೧೮. ಪಂಡಿತ.ಮ.ಮಲ್ಲಪ್ಪ ; ಮೋಹಕ ಮುತ್ತತ್ತಿ, ಜಿಮ್ ಕಾರ್ಬೆಟ್, ಪ್ರಕಾಶನ, ಮಂಡ್ಯ, ಪುಟ-೧೩, ೧೯೯೨

೧೯. ಕೆ.ಅನಂತರಾಮು ; ಪೂರ್ವೋಕ್ತ ಪುಟ-೨೨೯, ೨೩೦, ೧೯೮೨

೨೦. ಪಂಡಿತ.ಮ.ಮಲ್ಲಪ್ಪ ; ಪೂರ್ವೋಕ್ತ, ಪುಟ-೧೭

೨೧. ಕೆ.ಅನಂತರಾಮು ;ಪೂರ್ವೋಕ್ತ, ಪುಟ-೨೨೭, ೧೯೮೨

೨೨. ಪಂಡಿತ.ಮ.ಮಲ್ಲಪ್ಪ ; ಪೂರ್ವೋಕ್ತ, ಪುಟ-೧೭,೧೮ ೧೯೯೨

೨೩.೨೪. ಡಾ.ಡಿ.ಶಿವಸ್ವಾಮಿ ; ಕಾವೇರಿ ಸೀಮೆಗಳ ಗ್ರಾಮದೇವತೆಗಳ ಅಧ್ಯಯನ, ಮಾನಸಪ್ರಕಾಶನ, ಬೆಂಗಳೂರು, ಪುಟ-೭೫, ೨೦೦೭

೨೫. ಮುತ್ತುರಾಜು ; ಕನಕಪುರದ ತಾಲ್ಲೂಕಿನಲ್ಲಿ ಪ್ರಾಚೀನ ಜನಶಿಲ್ಪ ಪತ್ತೆ, ಕನ್ನಡಪ್ರಭ, ೩ನೇ ಆಗಸ್ಟ್ ೧೯೯೭

೨೬. ಮುತ್ತುರಾಜು ; ವೀರೆಗೌಡನದೊಡ್ಡಿ ಬಳಿ ಪ್ರಾಚೀನ ಜೈನ ಅವಶೇಷ ಪತ್ತೆ, ಕನ್ನಡಪ್ರಭ, ಪುಟ-೨, ೧೪ನೇ ಅಕ್ಟೋಬರ್, ೨೦೦೦

೨೭. ಪ್ರೊ.ಎಸ್.ಕೆ.ರಾಮಚಂದ್ರರಾವ್ ; ತಿರುಪತಿ ತಿಮ್ಮಪ್ಪ, ಐ.ಬಿ.ಹೆಚ್, ಪ್ರಕಾಶನ, ಬೆಂಗಳೂರು. ಪುಟ-೨೫೫, ೧೯೮೦

೨೮. ಪ್ರಜಾವಾಣಿ, ಸಾಪ್ತಾಹಿಕ ಪುರವಣಿ, ಪುಟ-೧, ೧೭ನೇ ಮೆ ೨೦೦೯

೨೯. ಶ್ರೀರಾಮಇಟ್ಟಣವರ ; ಜಾನಪದ ಬಲಿ ಸಂಪ್ರದಾಯ, ಅಮೃತವರ್ಷ, ದೇ.ಜ.ಗೌ. ೭೫ ಅಭಿನಂದನಾ ಸಮಿತಿ, ಬೆಂಗಳೂರು, ಪುಟ-೫೮೦, ೧೯೯೫

೩೦. ಡಾ.ಟಿ.ಗೋವಿಂದರಾಜು ; ಭಕ್ತಿಯಲ್ಲಿ ಹಿಂಸೆ ಕ್ರೌರ್ಯ, ಪ್ರಜಾವಾಣಿ, ಸಾಪ್ತಾಹಿಕ ಪುರವಣಿ, ಪುಟ-೧, ೧೭ನೇ ಮೆ ೨೦೦೯

## ಅಧ್ಯಾಯ-೫

## ಮುತ್ತತ್ತಿ ಸರಹದ್ದಿನ ಮುಖ್ಯ ಕ್ಷೇತ್ರಗಳೊಡನೆ ಸಾಂಸ್ಕೃತಿಕ ಸಂಬಂಧ

ಮುತ್ತತ್ತಿ ಮುತ್ತತ್ತಿರಾಯನ ಪ್ರಧಾನ ಕ್ಷೇತ್ರವಾದರು ಭಕ್ತರು ಮಳವಳ್ಳಿಯ ಹಲಗೂರು ಮಾರ್ಗ ಕನಕಪುರದ ಸಾತನೂರು ಮಾರ್ಗ ಕೊಳ್ಳೆಗಾಲದ ತೆಳ್ಳೂರು ಮಾರ್ಗಗಳಿಂದ ಇಲ್ಲಿಗೆ ಬರುತ್ತಾರೆ. ಹೀಗೆ ಹಿಂದೆ ಸಾರಿಗೆ ವ್ಯವಸ್ಥೆ ಸಮರ್ಪಕವಾಗಿ ಇಲ್ಲದ ವೇಳೆಯಲ್ಲಿ ನಡೆದೆ ಬರಬೇಕಾಗಿತ್ತು. ಹಾಗೆ ಬರುವ ಹಾದಿಯಲ್ಲಿ ಪ್ರಮುಖ ಧಾರ್ಮಿಕ ಸ್ಥಳಗಳ ಜೊತೆ ಸಾಂಸ್ಕೃತಿಕ ನಂಟನ್ನು ಇರಿಸಿಕೊಳ್ಳಬೇಕಾಗಿತ್ತು. ಇದು ಇಂದು ಬೃಹತ್ತಾಗಿ ಬೆಳೆದುಕೊಂಡು ಮುತ್ತತ್ತಿ-ಮುತ್ತತ್ತಿರಾಯನ ಜೊತೆಗೆ ಅವಿನಾಭಾವ ಸಂಬಂಧವನ್ನು ಬೆಳೆಸಿಕೊಂಡಿದೆ. ಮುತ್ತತ್ತಿಯ ನಂಟು ಮುಳಬಾಗಿಲಿನವರೆಗೂ ಇದೆ ಎಂದು ಇಲ್ಲಿನ ಸ್ಥಳೀಯರ ಪ್ರತೀತಿಯಾದರೂ ಮುಳಬಾಗಿಲಿನ ಆಂಜನೇಯ ಸನ್ನಿಧಿಯಲ್ಲಿ ಈ ಬಗೆಯ ಯಾವುದೇ ಹೇಳಿಕೆಗಳು ಇಲ್ಲ. ಮುಳಬಾಗಿಲೂ ಸಹ ಆಂಜನೇಯನ ಕ್ಷೇತ್ರವಾಗಿರುವುದರಿಂದ ಮುತ್ತಿ್ತರಾಯನ ಹೆಜ್ಜೆ ಮುಳಬಾಗಿಲಿನಲ್ಲಿಯೂ ಇದೆ ಎಂಬ ಪ್ರತೀತಿ ಹರಡಿದೆ. ಬದಲಿಗೆ ಶೈವಧರ್ಮದ ಸಿದ್ಧಾಪ್ಪಾಜಿಯ ಜೊತೆಗೆ ಭಾವಮೈದುನರ ಸಂಬಂಧ ಮಾತ್ರ ಇದ್ದು ಚಿಕ್ಕಲ್ಲೂರು ಜಾತ್ರೆಯ ಕೊನೆಯದಿನ ಮುತ್ರಾಯನ ಸೇವೆ ಎಂಬ ಸೇವೆಯು ಮುತ್ತತ್ತಿರಾಯನಿಗೆ ಸಲ್ಲುತ್ತದೆ.

ಪ್ರಸ್ತುತ ಬಸ್ಸಿನ ವ್ಯವಸ್ಥೆ ಇರುವುದರಿಂದ ಈ ವಲಯದಲ್ಲಿ ಬರುವ ಎಲ್ಲಾ ಕ್ಷೇತ್ರಗಳಿಗೂ ಜನರ ಭೇಟಿ ಅತ್ಯಂತ ವಿರಳವಾಗಿದೆ. ಇದು ಧಾರ್ಮಿಕ ಸಂಬಂಧದ ಅಡ್ಡಿಯಾಗಿದೆ ಎಂದರೆ ತಪ್ಪಲ್ಲ. ಆದರೂ ಸೋಮನೆಕೆರೆಗುಡಿ, ಪಾದ್ದಾರೆ, ತಿರುಗಣೆಮಡುವುಗಳ ಬಳಿ ಬಸ್ಸನ್ನು ನಿಲ್ಲಿಸಿ ಪೂಜಿಸಿ ಮುನ್ನಡೆಯುತ್ತಾರೆ ಭಕ್ತರುಗಳು.

## ೫.೧ ತಾಳವಾಡಿ ಆಂಜನೇಯ

ಹಲಗೂರಿನಿಂದ ಮುತ್ತತ್ತಿಗೆ ಹೋಗುವ ಮಾರ್ಗ ಮಧ್ಯದಲ್ಲಿ ೧೦.ಕಿ.ಮೀ.ದೂರದಲ್ಲಿರುವ ತಾಳವಾಡಿ ವಸತಿ ಸೂಚಕ ಪ್ರದೇಶದಲ್ಲಿ ಇರುವುದೇ ತಾಳವಾಡಿ ಆಂಜನೇಯ ದೇವಾಲಯ. ಈಗ ಪ್ರಮುಖವಾಗಿ ತಾಳವಾಡಿಯು ಆಂಜನೇಯ ದೇವಾಲಯಕ್ಕೆ ಪ್ರಸಿದ್ಧವಾಗಿದ್ದು, ಮುಖ್ಯರಸ್ತೆಯಿಂದ ಎಡಬಿದಯ ಬಯಲು ಮತ್ತು ಬಂಡೆಯ ಮೇಲೆ ಇಲ್ಲಿನ ದೇವಾಲಯ ಹರಡಿಕೊಂಡಿದೆ. ದೇವಾಲಯದ ಒಳಗಡೆ ೪ ಅಡಿಗಳಿಗೂ ಎತ್ತರವಾದ ಆಂಜನೇಯನ ಶಿಲಾವಿಗ್ರಹಕ್ಕೆ ಪ್ರತಿದಿನವೂ ವಿಶೇಷವಾಗಿ ಶನಿವಾತ ಮತ್ತು ಶ್ರಾವಣಮಾಸದ ಮುತ್ತತ್ತಿಯ ಜಾತ್ರಾ ಸಂದರ್ಭದಲ್ಲಿ ಪೂಜೆ ಸಲ್ಲುತ್ತದೆ. ಹಿಂದೆ ಕಳ್ಳರು ಶಿಲೆಯನ್ನು ಒಡೆದು ವಿಗ್ರಹವನ್ನು ಬಿರುಕುಗೊಳಿಸಿದ್ದರು. ಪ್ರಸ್ತುತ ಅದನ್ನು ಭಕ್ತಾದಿಗಳು ಜೀರ್ಣೋದ್ಧಾರ ಮಾಡಿ ಪೂಜೆ ಸಲ್ಲುವಂತೆ ಮಾಡಿದ್ದಾರೆ. ಈ ಆಂಜನೇಯನನ್ನೂ ಗ್ರಾಮೀಣ ಜನತೆಯು ಮುತ್ತತ್ತಿಯ ಮುತ್ತತ್ತಿರಾಯನಷ್ಟೆ ಶ್ರದ್ಧೆ, ಭಕ್ತಿಗಳಿಂದ ಪೂಜಿಸುತ್ತಾರೆ. ಹಲಗೂರಿನಿಂದ ನಡೆದು ಸಾಗುವ ಭಕ್ತರು ಇಲ್ಲಿ ಹೂ, ಹಣ್ಣು, ಕಾಯಿ, ಕರ್ಪೂರಗಳಿಂದ ಅರ್ಚಿಸಿಯೇ ಮುಂದೆ ತೆರಳುತ್ತಾರೆ. ಇಲ್ಲಿ ಆಂಜನೇಯ ದೇವಾಲಯವೇ ಅಲ್ಲದೇ ಇನ್ನೂ ಪ್ರಾಚೀನವಾದ ದೇವಾಲಯಗಳು ಇದ್ದು ಜೀರ್ಣಾವಸ್ಥೆಯಲ್ಲಿಯೇ ಉಳಿದಿವೆ. ಅವುಗಳಲ್ಲಿ

**ಗಣಪತಿ ದೇವಾಲಯ** : ಆಂಜನೇಯನ ಗುಡಿಯ ಪಕ್ಕದಲ್ಲೇ ಹುಟ್ಟು ಬಂಡೆಯ ಮೇಲೆ ಗಣಪತಿಯನ್ನು ಕೆತ್ತಿದ್ದು, ಬಂಡೆಗೆ ಹೊಂದಿಕೊಂಡತೆ ಮುಂಭಾಗದಲ್ಲಿ ಕಂಬಗಳನ್ನು ನಿಲ್ಲಿಸಿದ್ದಾರೆ. ಇಲ್ಲಿ ಓರ್ವ ಶೈವಯತಿಯ ಚಿತ್ರವನ್ನು ಒಂದು ಕಂಬದ ಮೇಲೂ, ಅಲ್ಲದೆ ಶೈವಧರ್ಮಕ್ಕೆ ಸಂಬಂಧಿಸಿದ ಮತ್ತೊಂದು ಚಿತ್ರವನ್ನು ಇನ್ನೊಂದು ಕಂಬದ ಮೇಲೂ ಕೆತ್ತಿದ್ದಾರೆ. ಇದೇ ಕಂಬದ ಇನ್ನೊಂದು ಪಾರ್ಶ್ವದಲ್ಲಿ ಆಂಜನೇಯನ ಚಿತ್ರವನ್ನು ಬಿಡಿಸಿದ್ದಾರೆ.

**ಕಲ್ಯಾಣಿ** : ಆಂಜನೇಯ ದೇವಾಲಯ ಮತ್ತು ಗಣಪತಿ ದೇವಾಲಯದ ಪಕ್ಕದಲ್ಲಿ ವಿಸ್ತಾರವಾದ ಕಲ್ಯಾಣಿ ಒಂದಿದೆ. ಕಲ್ಯಾಣಿಯ ಮುಂಭಾಗದಲ್ಲಿ ಎರಡು ಆನೆಗಳ ಶಿಲ್ಪಗಳು ಇದ್ದು ಅಲ್ಲಿನ ಕಲ್ಯಾಣಿ ಪ್ರಾರಂಭವಾಗುತ್ತದೆ. ಕಲ್ಯಾಣಿ ಪ್ರವೇಶದ ಬಲಗಡೆ ಸುಮಾರು ಎರಡು ಅಡಿ ಉದ್ದ, ಎರಡು ಅಡಿ ಅಗಲದ ಕಲ್ಲಿನ ಮೇಲೆ ಮಹಿಷಮರ್ದಿನಿಯ ಶಿಲ್ಪವು ಕೆತ್ತಲ್ಪಟ್ಟಿವೆ. ಚತುರ್ಭುಜವನ್ನುಳ್ಳ

ಮಹಿಷಿಮರ್ದಿನಿಯು ತ್ರಿಶೂಲದಿಂದ ಮಹಿಷವನ್ನು ಕೊಲ್ಲುತ್ತಿರುವ ಚಿತ್ರಣವು ಆಕರ್ಷಕವಾಗಿದ್ದು ಗ್ರಾಮೀಣ ಜನತೆಯ ಮಾತೃದೇವತೆಯ ಆರಾಧನೆಯ ಪ್ರತೀಕವಾಗಿದೆ. ಕಲ್ಯಾಣಿಯ ಬಲಪಾರ್ಶ್ವದಲ್ಲಿರುವ ಮತ್ತೊಂದು ಕಲ್ಲಿನ ಮೇಲೆ ಕೃಷ್ಣನು ಕೊಳಲನು ನುಡಿಸುತ್ತಿದ್ದು, ಬಳಿಯೇ ಭಕ್ತನೊಬ್ಬನ ಚಿತ್ರವಿದೆ. ಜೊತೆಗೆ ಮಿಥುನಶಿಲ್ಪಗಳು, ಹಾವು, ಪುಷ್ಪಪತ್ರಗಳ ಚಿತ್ರಣಗಳು ಇಲ್ಲಿವೆ. ಈ ಕಲ್ಯಾಣಿಯ ನೀರು ಇಲ್ಲಿನ ದೇವಾಲಯಗಳ ಬಳಕೆಗೆ ಆಸರೆಯಾಗಿದ್ದಿತು.

**ಸುತ್ತಾಲೆಗುಡಿ:-**

ಇದು ವಿಸ್ತಾರವಾದ ಇಟ್ಟಿಗೆಯ ಪ್ರಾಕಾರವನ್ನು ಹೊಂದಿರುವ, ಕಲ್ಲಿನಿಂದ ನಿರ್ಮಿತವಾದ ಗರ್ಭಗುಡಿಯನ್ನುಳ್ಳ ಒಂದು ಶೈವದೇವಾಲಯವಾಗಿದೆ. ಗರ್ಭಗುಡಿಯು ಏಳು ಅಡಿ ಉದ್ದ ಮತ್ತು ಅಷ್ಟೇ ಅಗಲವನ್ನು ಹೊಂದಿದೆ. ಗರ್ಭಗುಡಿಯಲ್ಲಿ ಪ್ರಸ್ತುತ ಯಾವುದೇ ವಿಗ್ರಹವಾಗಲಿ, ಅದರ ಕುರುಹುಗಳಾಗಲೀ ಇಲ್ಲ. ಗರ್ಭಗುಡಿ ಮತ್ತು ಸುಕನಾಸಿಯ ಮೇಲೆ ಸಣ್ಣ ಶಿಖರವಿದ್ದು, ಶಿಖರದ ಕೋಷ್ಠಕದಲ್ಲಿ ಉಮಾಮಹೇಶ್ವರರ ಭಗ್ನವಾದ ಶಿಲ್ಪವಿದೆ. ಶಿಖರವನ್ನು ಕಲಾತ್ಮಕವಾಗಿ ಗಾರೆಯಿಂದ ಮೂಡಿಸಿದ್ದಾರೆ. ಆದುದರಿಂದ ಇದೊಂದು ಶಿವ ದೇವಾಲಯವಾಗಿದ್ದು ಪ್ರಸಿದ್ಧಿ ಪಡೆದಿತ್ತು ಎಂದು ನಿರ್ಧರಿಸಬಹುದು. ದೇವಾಲಯದ ಎದುರಿಗೆ, ಪ್ರಾಕಾರದ ಒಳಗಡೆ ಒಂದು ದೊಡ್ಡದಾದ ದೀಪಸ್ತಂಭವು ಬಿದ್ದಿದೆ. ಸುಂದರವಾದ ತೆನೆಗಳ ಅಲಂಕಾರ ಹೊಂದಿರುವ ಪ್ರಾಕಾರವು ಬಹುಶಃ ವಿಜಯನಗರದ ಅರಸರ ಅಂತಿಮ ಅವಧಿಗೆ ಸೇರುವಂತಿದೆ. ಇದಕ್ಕೆ ಪೂರಕವಾಗಿ ಬಳಸಿರುವ ಇಟ್ಟಿಗೆಯ ೨೦ಸೆಂ.ಮಿ.ಉದ್ದ, ೨೫ಸೆಂ.ಮೀ.ಅಗಲವನ್ನು ಹೊಂದಿದ್ದು ಈ ಪ್ರಾಕಾರದ ಗೋಡೆಯು ಏಳು ಅಡಿ ಎತ್ತರವಾಗಿಯೂ ಇದೆ: ಇಲ್ಲಿನ ದೇವಾಲಯವು ಹೊಯ್ಸಳರ ಕಾಲವಾದ ಕ್ರಿ.ಶ.ಸುಮಾರು ೧೨ನೆಯ ಶತಮಾನದಲ್ಲಿ ನಿರ್ಮಾಣವಾಗಿ ನಂತರ ಕ್ರಿ.ಶ.೧೫ನೆಯ ಶತಮಾನದಲ್ಲಿ ಪ್ರಾಕಾರವನ್ನು ಪಡೆದುಕೊಂಡಿದೆ.

**ಲಿಂಗದಗುಡಿ** : ಸುತ್ತಾಲೆಗುಡಿಗೆ ಸ್ವಲ್ಪ ದೂರಲದಲ್ಲೇ ಇರುವ ಈ ಲಿಂಗದ ಗುಡಿಯನ್ನು "ಲಿಂಗದಗುಡಿಒಡ್ಡು"ಎಂದು ಕರೆಯುತ್ತಾರೆ. ಬಂಡೆಯೊಂದಕ್ಕೆ ಹೊಂದಿಕೊಂಡಂತೆ ಕಲ್ಲು ಕಂಬಗಳನ್ನು ಅಳವಡಿಸಿ ಮೇಲೆ ಶಿಖರವನ್ನು ನಿರ್ಮಿಸಿದ್ದಾರೆ. ಮೊದಲು ಇಲ್ಲಿ ಶಿವಲಿಂಗವನ್ನಿಟ್ಟು ಪೂಜಿಸುತ್ತಿದುದ್ದರಿಂದ ಲಿಂಗದಗುಡಿ ಎಂದೇ ಬಳಕೆಯಲ್ಲಿ ಬಂದಿದ್ದು, ಇಲ್ಲಿಯ ಶಿಖರವೂ ಇಟ್ಟಿಗೆ

ಗಾರೆಗಳಿಂದ ರಚಿತವಾಗಿ ಕಲಾತ್ಮಕತೆಯಿಂದ ಕೂಡಿದೆ. ಇಲ್ಲಿ ಶೈವ ಮತ್ತು ವೈಷ್ಣವ ಧರ್ಮಗಳ ದೇವಾಲಯಗಳೆರಡೂ ಇದ್ದು, ಗ್ರಾಮೀಣ ಭಕ್ತರ ಧರ್ಮ ಸಾಮರಸ್ಯದ ಆಧಾರಗಳಾಗಿವೆ. ಇಲ್ಲಿನ ಆಂಜನೇಯನಿಗೆ ಜಾತ್ರಾ ಸಂದರ್ಭದಲ್ಲಿ ಎರಡನೆಯ ಪೂಜೆಯಾದ ನಂತರವೇ ಮುತ್ತತ್ತಿಯ ಮುತ್ತತ್ತಿರಾಯನಿಗೆ ಪೂಜೆ ಸಲ್ಲುತ್ತದೆ.

## ೫.೨ ಭೀಮೇಶ್ವರಿ

ಭೀಮೇಶ್ವರಿಯು ಹಲಗೂರು ಮಾರ್ಗದಿಂದ ಮುತ್ತತ್ತಿಗೆ ಹೋಗುವಾಗ ೧೬ಕಿ.ಮಿ.ಅಂತರದಲ್ಲಿ ಕಾವೇರಿನದಿ ದಂಡೆಯ ವಿಶಾಲವಾದ ಸ್ಥಳ. ಇಲ್ಲಿ ಸುತ್ತಮುತ್ತ ಹಲವಾರು ದನದದೊಡ್ಡಿಗಳಿವೆ. ಇಲ್ಲಿ ಭೀಮೇಶ್ವರ ಎಂಬ ಪಂಚಲಿಂಗ ದೇವಾಲಯವೊಂದಿದೆ. ಕರ್ನಾಟಕದ ಅಲ್ಲಲ್ಲಿ ಭೀಮೇಶ್ವರ ಲಿಂಗಗಳು ದೊರಕುತ್ತವೆ. ಅದರಲ್ಲಿ ಇದೂ ಒಂದು "ದೊಡ್ಡ ದೀವಳಿಗೆ, ಅಮಾವಾಸ್ಯೆಯ ರಾತ್ರಿಯಲ್ಲಿ ಇಲ್ಲಿ ನರಮನುಷ್ಯರ ಇರಬಾರದು, ದನಗಳನ್ನು ದೊಡ್ಡಿಯಲ್ಲಿ ಕೂಡಿ ಎಲ್ಲರೂ ಈ ಜಾಗ ಬಿಟ್ಟು ಹೊರಟು ಹೋಗುತ್ತಾರೆ. ದೇವತೆಗಳು, ಮುನಿಮಹರ್ಷಿಗಳು ಆ ರಾತ್ರಿ ಭೀಮ ಲಿಂಗನ ಮಡುವಿನಲ್ಲಿ ಸೇರಿ ಪೂಜೆ ನಡೆಸುತ್ತಾರಂತೆ[೧]" ಎಂಬ ನಂಬಿಕೆಯೂ ಇದೆ. ಇಲ್ಲಿನ ತಮ್ಮಡಿಯು ಕುರುಬ ಜನಾಂಗಕ್ಕೆ ಸೇರಿದವರಾಗಿದ್ದು ದೊಡ್ಡಾಲಹಳ್ಳಿ ಬಳಿಯ ತಾವರೆಘಟ್ಟದವರು ಕ್ರಿ.ಶ.೧೯೬೫ರಿಂದಲೂ ಇಲ್ಲಿ ಪೂಜೆ ನಡೆಸಿಕೊಂಡು ಬರುತ್ತಿದ್ದಾರೆ. ಇಲ್ಲಿನ ತಮ್ಮಡಿಗಳು ಮದುವೆಯಾಗಬಾರದು ಎಂಬ ಪದ್ಧತಿಯೂ ಇದೆ. ಇವರ ಮೂರು ತಲೆಮಾರುಗಳ ಕಿರಿಯರಾರು ಮದುವೆಯಾಗಿಲ್ಲ. ಕೆಂಪಯ್ಯ ಎಂಬುದು ಇವರ ಹೆಸರಾಗಿದೆ. ಇಲ್ಲಿ ಹಳೆಯ ಕಟ್ಟಡ ಮತ್ತು ತಂಗುದಾಣವು ಮೊದಲಿಗೆ ಇದ್ದು ಅದು ಹಾಳಾಗುವ ಸ್ಥಿತಿ ಬಂದಾಗ ಹೊಸ ದೇವಾಲಯ ನಿರ್ಮಾಣ ಮಾಡಲಾಗಿದೆ. ಗರ್ಭಗುಡಿಯಲ್ಲಿ ಮೂಲದ ಯಥಾಸ್ಥಿತಿಯನ್ನು ಹಾಗೆಯೇ ಉಳಿಸಿಕೊಳ್ಳಲಾಗಿದೆ. ಅಂದರೆ ಪಂಚಲಿಂಗಗಳೆಂಬ ಗುಂಡುಕಲ್ಲುಗಳು.

ಇಲ್ಲಿ ಮೂರು ವರ್ಷಕ್ಕೊಮ್ಮೆ ಶಿವರಾತ್ರಿ ಮುಗಿದ ೧೫ ದಿನಗಳ ಜಾತ್ರೆಯನ್ನು ಏರ್ಪಡಿಸಲಾಗುತ್ತದೆ. ಆಗ ೯ ದಿನಗಳ ೯ ಪೂಜೆ ನಡೆಯುತ್ತದೆ. ಸುತ್ತಮುತ್ತಲಿರುವ ಹೂಕುಂದ, ಗೆಜ್ಜಗಲ್, ಮಣಂಬಾಲ್ ಮುಕೊಡಲ್, ದೂಂತೂರು, ಉಜ್ಜನಹಳ್ಳಿಯ ಭೀಮೇಶ್ವರ ದೇವರುಗಳನ್ನು ಬರಮಾಡಿಕೊಳ್ಳವುದಲ್ಲದೆ ತಮಿಳುನಾಡಿನ ಡೆಂಕಿಣಿಕೋಟೆಯಿಂದ ಚಿಕ್ಕಮ್ಮ ದೊಡ್ಡಮ್ಮತಾಯಿಯನ್ನು ಬರಮಾಡಿಕೊಂಡು ಪೂಜಿಸಲಾಗುತ್ತದೆ. ಮೂರು ದಿನಗಳ ವೈಭವಯುತ ಜಾತ್ರೆ ನಡೆಸಲಾಗುತ್ತದೆ. ೯ ದಿನಗಳ ನಂತರ ಎಲ್ಲಾ ದೇವರುಗಳು ತಮ್ಮ ಊರುಗಳಿಗೆ ಹಿಂದಿರುಗುತ್ತದೆ. ಈ ಸಮಯದಲ್ಲಿ ೬೦ ಅಡಿಗಳಿಗೂ ಹೆಚ್ಚಾದ ಕೊಂಡವನ್ನು ತೆಗೆಯುತ್ತಾರೆ.

ತಮ್ಮಡಿಯಾದಂತಹ ಕೆಂಪಯ್ಯನವರು ಕಾವೇರಿ ನದಿಯಲ್ಲಿ ಮಿಂದು ಮಡಿಯುಟ್ಟು ಆಹ್ವಾನಿತ ದೇವರುಗಳ ಜೊತೆ ಮೆರವಣಿಗೆ ಬಂದು ಕೊಂಡವನ್ನು ಮೂರು ಸುತ್ತು ಸುತ್ತಿ ಕೊಂಡ ಹಾಯುತ್ತಾರೆ, ನಂತರ ಇತರ ಭಕ್ತರು ಸಹ ಕೊಂಡ ಹಾಯುವುದನ್ನು ಅನುಸರಿಸುತ್ತಾರೆ.

ಇಲ್ಲಿಯೇ 'ಕಾವೇರಿ ಫಿಷಿಂಗ್ ಕ್ಯಾಂಪ್' ಎಂಬ ವಿಹಾರ ತಾಣವು ಇದ್ದು ಇಲ್ಲಿಗೆ ದೇಶೀಯರೆ ಅಲ್ಲದೆ ವಿದೇಶಿಯರು ಬಂದು ಮೀನು ಹಿಡಿಯುವ ಮೋಜಿನಾಟದಲ್ಲಿ ಪಾಲ್ಗೊಳ್ಳುತ್ತಾರೆ. ನದಿಯ ದಡದಲ್ಲೊಂದು ದ್ವೀಪದ ಹಾಗೆ ಎತ್ತರದ ಸ್ಥಳವಿದೆ. ಒಂದು ಪಾರ್ಶ್ವದ ಕಡೆಯಿಂದ ಮಾತ್ರ ಇದನ್ನು ಏರಲು ಸಾಧ್ಯವಾಗುತ್ತದೆ. ಕ್ರಿ.ಶ.೧೨ನೇ ಶತಮಾನದಷ್ಟು ಐತಿಹಾಸಿಕ ಪ್ರಾಚೀನತೆಯನ್ನು ಈ ಸ್ಥಳವು ಒಂದಿದೆ. ಇದನ್ನು ಎಣ್ಣೆತಿಟ್ಟು ಎಂದು ಕರೆಯುತ್ತಾರೆ. ಈ ವಿಶಾಲವಾದ "ಗುಡ್ಡದ ಮೇಲೆ ಪಂಚಲಿಂಗಗಳ ಮೈಸೂರು ಅರಸರ ಕಾಲದ ಸರಳವಾದ ಪ್ರತ್ಯೇಕ ದೇವಾಲಯಗಳಿವೆ. ಇವುಗಳಲ್ಲಿ ಮೂರು ದೇವಾಲಯಗಳು ಅತ್ಯಂತ ಶೋಚನೀಯ ಸ್ಥಿತಿಯಲ್ಲಿದ್ದು ಒಂದು ಗುಡಿಯಲ್ಲಿ ಶಿವಲಿಂಗ ಸುಸ್ಥಿತಿಯಲ್ಲಿದೆ. ಈ ದೇವಾಲಯಗಳೂ ಸಹ ನವೀಕೃತಗೊಂಡಿದ್ದು ಇದಕ್ಕೂ ಮೊದಲು ನಿರ್ಮಿಸಿದ್ದ ದೊಡ್ಡ ದೊಡ್ಡ ಇಟ್ಟಿಗೆಯ ಅವಶೇಷಗಳು ಇಲ್ಲಿ ದೊರೆಯುತ್ತದೆ. ಕ್ರಿ.ಶ.೧೦ನೇ ಶತಮಾನದಲ್ಲಿ ಬಳಸುತ್ತಿದ್ದ ಇಟ್ಟಿಗೆಗಳು ಇವಾಗಿದ್ದು ಗ್ರಂಥಾಕ್ಷರವುಳ್ಳ ಎರಡು ಶಿಲಾಶಾಸನಗಳು ಇಲ್ಲಿ ನಿಂತಿವೆ[5]"

ಕ್ರಿ.ಶ.ಸುಮಾರು ೧೨ನೇ ಶತಮಾನಕ್ಕೆ ಈ ದೇವಾಲಯಗಳಿಗೆ ದಾನ ನೀಡಿರುವ ವಿವರದ ಶಾಸನಗಳು ಇವಾಗಿವೆ. ಅಂದರೆ ಅದಕ್ಕೂ ಮೊದಲೇ ಕ್ರಿ.ಶ.ಸುಮಾರು ೧೦ನೇ ಶತಮಾನದಿಂದಲೇ ಇಲ್ಲಿ ದೇವಾಲಯಗಳು ಇದ್ದು ಪೂಜೆಗೊಳ್ಳುತ್ತಿದ್ದವು ಎಂದು ತಿಳಿಯಬಹುದು. ಈ ದೇವಾಲಯಗಳು ಭಿನ್ನವಾಗಿರುವುದರಿಂದ ಭೀಮೇಶ್ವರ ದೇವಾಲಯ ಹಾಲುಮತಸ್ಥ ತಮ್ಮಡಿಗಳು ಇಲ್ಲಿ ಪೂಜೆಯನ್ನೇನು ಮಾಡುವುದಿಲ್ಲ.

ಮುತ್ತತ್ತಿಗೆ ಬರುವ ಭಕ್ತಾದಿಗಳು ಯಾತ್ರೆಯ ಒಂದು ಅಂಗವೆಂಬಂತೆ ಭೀಮೇಶ್ವರಿಗೆ ಬರುತ್ತಾರೆ ಪೂಜಿಸಿ ತಂಗಿದ್ದು ಮುನ್ನಡೆಯುತ್ತಾರೆ. ಡಾ.ರಾಜಕುಮಾರ್‌ರವರು ಇಲ್ಲಿಗೆ ಆಗಮಿಸಿ ೧೦,೦೦೦ ರೂಪಾಯಿಗಳನ್ನು ಸಲ್ಲಿಸಿದ್ದಾರೆ.

ಈಗ ನವೀಕೃತವಾಗಿರುವ ಭೀಮೇಶ್ವರಿಯ ಭೀಮೇಶ್ವರ ದೇವಾಲಯವು ೮೦ ಅಡಿ ಉದ್ದ, ೪೦ ಅಡಿ ಅಗಲ ಅಳತೆಯುಳ್ಳ ಆಧುನಿಕ ಕಲ್ಲು ಕಟ್ಟಡವಾಗಿದೆ. ಪ್ರವೇಶದ್ವಾರ, ಹಜಾರ, ಅಂಗಳ, ಸುಖನಾಸಿ, ಗರ್ಭಗುಡಿಗಳಿವೆ. ಗರ್ಭಗುಡಿಯಲ್ಲಿ ೩ ಅಡಿ ಎತ್ತರದ ಶಿವಲಿಂಗವಿದೆ. ದೇವಾಲಯದ ಎದುರಿಗೆ ೩೦ ಅಡಿ ಎತ್ತರದ ಕಲ್ಲಿನ ದೀಪಸ್ತಂಭವಿದೆ. ಇದರ ಕೆಳಭಾಗದಲ್ಲಿ ವಿಷ್ಣು, ಕೃಷ್ಣ, ಯತಿ, ಗಣೇಶನ ಚಿತ್ರಗಳಿವೆ. ಬಳಿಯಲ್ಲಿ ಒಂದು ಲಿಂಗಮುದ್ರೆಕಲ್ಲು ಸಹ ಇದೆ. ಈ ದೇವಾಲಯಕ್ಕೆ ಗರ್ಭಗುಡಿಯನ್ನು ದಿನಾಂಕ ; ೩-೩-೧೯೯೬ರಲ್ಲಿ ಕನಕಪುರ ತಾಲ್ಲೂಕಿನ ತಾವರಗಟ್ಟೆಯ ಪುಟ್ಟಸ್ವಾಮಿಗೌಡರ ಮತ್ತು ಸಹೋದರರು ಮಾಡಿಸಿಕೊಟ್ಟಿದ್ದಾರೆ.

## ೫.೩ ತಿರುಗಣೆ ಮಡುವು

ಕಾವೇರಿ ನದಿ ಮುತ್ತತ್ತಿ ಪರಿಸರಕ್ಕೆ ಬರುವಾಗ ರಭಸವಾಗಿ ಹರಿದು ಬರುತ್ತದೆ. ಹೀಗೆ ಹರಿದು ಬರುವಾಗ ಭೀಮೇಶ್ವರಿಯ ನಂತರ ತಿರುಗಣೆ ಮಡುವು ಎಂಬ ಸುಳಿ ಇರುವ ಆಳವಾದ ನದಿಯ ಪಾತ್ರ ದೊರೆಯುತ್ತದೆ. ಬಹು ಅಪಾಯಕಾರಿ ನದಿಯ ಸ್ಥಳ ಇದಾಗಿದ್ದು, ನದಿಯಿಂದ ಹರಿದು ಬರುವ ನೀರೆಲ್ಲಾ ಮಡುವಿನಲ್ಲಿ ಸುಳಿ ಸುತ್ತಿ ಮುಂದೆ ನಡೆಯುತ್ತದೆ. ವಿಸ್ಮಯಕಾರಿ ಮಾನವನಿಗೆ ಇದೊಂದು ಬೆರಗಿನಿಂದ ಕಂಡಿದೆ. ಮುತ್ತತ್ತಿ ರಾಮನೆಂಬ ಹೆಸರನ್ನು ಆಂಜನೇಯನು ಪಡೆಯಲು ಈ ಸ್ಥಳವನ್ನು ಸಮೀಕರಿಸಿದ್ದಾರೆ. ಇಂತಹ ಜನಪದ ಐತಿಹ್ಯಗಳು ಭಾರತದಾದ್ಯಂತ ವಿಫುಲ ಸಂಖ್ಯೆಯಲ್ಲಿ ಕಂಡು ಬರುವುವಾದರೂ ಈ ಮಡುವಿಗೆ ಒಂದು ಪ್ರಾಮುಖ್ಯತೆ ಬಂದಿದೆ. ನದಿಯ ದಂಡೆಯಲ್ಲಿ ಎಂದೋ ಹರಡಿರುವ ಮರಳಿನ ರಾಶಿ ಇದೆ. ಭಕ್ತರು ಇಲ್ಲಿಗೆ ಬಂದು ಗಂಗಾಪೂಜೆ ಮಾಡಿ ವಿಳ್ಯೆದಲೆಯ ಮೇಲೆ ಕರ್ಪೂರ ಹಚ್ಚಿ ಬಿಡುತ್ತಾರೆ. ಅದು ನದಿಯಲ್ಲಿ ಚಕ್ರಾಕಾರವಾಗಿ ಮೂರು ಸುತ್ತು ಸುತ್ತಿ ಮುಂದೆ ನಡೆಯುತ್ತದೆ. ಈ ಚಕ್ರಾಕಾರ ಉಂಟಾಗಿರುವುದು ಆಂಜನೇಯನ ಬಾಲದಿಂದ ಎಂದು ಜನ ನಂಬಿದ್ದಾರೆ. ಈ ತಿರುಗಣೆಮಡುವಿನ ಉಲ್ಲೇಖವನ್ನು ಕೆ.ಅನಂತರಾಮುರವರು ಹೀಗಿ ನೀಡಿದ್ದಾರೆ "೧.೧/೨ಮೈಲಿ ಸವೆಸಿ ತಿರುಗಣೆ ಮಡುವನ್ನು ಕಂಡೆವು. ಅಲ್ಲಿ ಸಾಕಷ್ಟು ಯಾತ್ರಿಕರಿದ್ದರು. ನಮ್ಮ ಭಯ ದೂರವಾಯಿತು. ತಿರುಗಣೆ ಮಡುವೆಂಬುದು ಸೀತಾದೇವಿಯು ಸ್ನಾನ ಮಾಡಿ ಮೂಗುತಿಯನ್ನು ಕಳೆದುಕೊಂಡ ಜಾಗ; ಹನುಮಂತನು ತನ್ನ ಬಾಲದಿಂದ ಕಡೆದು ಅದನ್ನು ಮೇಲೆತ್ತಿ ಕೊಟ್ಟ ಜಾಗ. ಹಾಗೆ ಕಡೆದ ಜಾಗವಾದ್ದರಿಂದಲೇ ಅದು ವಿಸ್ತಾರವಾದ, ಆಳವಾದ ಮಡುವಾಗಿದೆಯೆಂದು ಭಾವಿಸಲಾಗಿದೆ ಕಾವೇರಿಯು ಅಲ್ಲಿ ವಿಸ್ತಾರವಾದ ಪಾತ್ರವನ್ನು ನಿರ್ಮಿಸಿಕೊಂಡು ಗಂಭೀರ ಗತಿಯಲ್ಲಿ ಹರಿಯುತ್ತಿರುತ್ತಾಳೆ. ಗಿರಿವನದ ನಡುವಿರುವ ಆ ತಾಣವನ್ನು ಕಷ್ಟಬಿದ್ದು ನೋಡಿದ್ದು ಸಾರ್ಥಕವೆನಿಸಿತು. ಮಡುವಿನಲ್ಲಿ ನೀರು ಸುರುಳಿಯಾಗಿ ಸುತ್ತುತ್ತಿತ್ತು. ಯಾತ್ರಿಕರು ಕರಟದಲ್ಲಿ ಕರ್ಪೂರವನ್ನು ಹತ್ತಿಸಿ ಅಲ್ಲಿ ತೇಲಿಬಿಟ್ಟರು. ಅದು ಉರಿಯುತ್ತಲೇ ಮಡುವಿನಲ್ಲಿ ಚಕ್ರಾಕಾರವಾಗಿ ಸುತ್ತ ತೊಡಗಿತು. ಮರಳುದಿಣ್ಣೆಯ ಮೇಲೆ ನಿಂತು ನಾನು ಅದು ಸುತ್ತುವುದನ್ನೇ ನೋಡುತ್ತಿದ್ದೆ. ಹೆಚ್ಚು ಹೊತ್ತು ಅಲ್ಲಿ ತಂಗಿದರೆ ದಾರಿದಟ್ಟಾಗುತ್ತದೆಂದು ಪಂಡಿತರು ಅವಸರಿಸಿದರು. ಹೊಸದಾಗಿ ನಿರ್ಮಾಣವಾಗಿರುವ ಅಲ್ಲಿನ ರಾಮದೇವರ ಗುಡಿಯನ್ನು ನೋಡಿಕೊಂಡು ಬೀರಪ್ಪ ತಮ್ಮಡಿಯನ್ನು ಮಾತನಾಡಿಸಿಕೊಂಡು ನಾವು ಮುನ್ನಡೆದೆವು.[೩]"

ಕೆ.ಅನಂತರಾಮುರವರ ವೀಕ್ಷಣೆಯ ಕಾಲದಲ್ಲಿ ಇಲ್ಲಿ ಹೊಸದಾಗಿ ರಾಮದೇವರಗುಡಿ ನಿರ್ಮಾಣವಾಗುತ್ತಿತ್ತು. ಅದಕ್ಕೂ ಮೊದಲು ಹೆಂಚು ಹೊದಿಕೆಯ ಇಟ್ಟಿಗೆ ಕಟ್ಟಡ ಇದಕ್ಕೆ ಇದ್ದಿತು. ಭೀಮೇಶ್ವರಿಯ ಮಾರ್ಗವಾಗಿ ಸಾಗಿ ಬರುತ್ತಿದ್ದ ಭಕ್ತರು ಇಲ್ಲಿ ಪೂಜೆಯನ್ನು ಸಲ್ಲಿಸಿ ತಮ್ಮಡಿಗೆ ಅಕ್ಕಿಪಡಿ ಮತ್ತು ಕಾಣಿಕೆ ನೀಡಿ ಸಂಜೆಯಾಗಿದ್ದರೆ ಇಲ್ಲೆ ಮಲಗಿದ್ದು ಮುಂಜಾನೆಗೆ ಮುತ್ತತ್ತಿಗೆ ಪ್ರಯಾಣ ಬೆಳೆಸುತ್ತಿದ್ದರು. ಈಗ ಸಾಧಾರಣವಾದ ಕಟ್ಟಡ ಉತ್ತಮವಾದ ಶ್ರೀರಾಮಸೀತೆ, ಲಕ್ಷ್ಮಣ ಹಾಗೂ ಆಂಜನೇಯರಿರುವ ವಿಗ್ರಹವನ್ನು ಹೊಂದಿದೆ. ಹುಲಿವಾಹನವು ಇಲ್ಲಿದ್ದು ಲೋಹದ ಆಂಜನೇಯನ ಉತ್ಸವಮೂರ್ತಿಯೂ ಇಲ್ಲಿದೆ. ಶನಿವಾರ, ಶ್ರಾವಣಶನಿವಾರ ಮತ್ತು ಜಾತ್ರೆಯ ವೇಳೆಯಲ್ಲಿ ಉತ್ಸವವನ್ನು ಜರಗಿಸುತ್ತಾರೆ. ಹಲಗೂರು ಮಾರ್ಗವಾಗಿ ಬರುವ ಬಸ್ಸುಗಳು ಇಲ್ಲಿ ನಿಲ್ಲಿಸಿ ತಮ್ಮಡಿಯಿಂದ ಪೂಜೆ ಸ್ವೀಕರಿಸಿ ಮುತ್ತತ್ತಿಗೆ ಪ್ರಯಾಣ ಬೆಳಸುತ್ತಾರೆ. ಭಕ್ತರು ತಮ್ಮ ಶಕ್ತ್ಯಾನುಸಾರ ಕಾಣಿಕೆಯನ್ನು ಅರ್ಪಿಸುತ್ತಾರೆ. ಸಾತನೂರಿನ ಮಾರ್ಗವಾಗಿ ವಾಹಗಳಲ್ಲಿ ಬಂದ ಭಕ್ತರು ಇಲ್ಲಿಗೆ ಅವಶ್ಯವಾಗಿ ಭೇಟಿ ನೀಡುತ್ತಾ ಪೂಜೆ ಸಲ್ಲಿಸುತ್ತಾರೆ.

ಈ ತಿರುಗಣೆ ಮಡುವಿನ ಉಲ್ಲೇಖವು ಓರೆಗಲ್ಲು ಸೂರೆ ಪುಸ್ತಕದಲ್ಲಿ ಹೀಗೆ ಉಲ್ಲೇಖವಾಗಿದೆ.

**"ತಿರುಗಣೆ ಮಡೀನಲ್ಲಿ ಚಿನ್ನಾದ ಗಿಂಡಿಯಲ್ಲಿ**
**ಗಂಡಾ ಹೆಂಡೀರು ಗಂಗೆಯ ತರ್‍ತಾರೆ॥**
**ಗಂಡಾ ಹೆಂಡೀರು ಪಾದ ಪೂಜೆ ಮಾಡ್ತಾರೆ**
**ಬ್ರಹ್ಮಯ್ಯಾನಾ ಸೇವೆಯಿಂದ ಸಂತೋಷ ಪಡ್ತಾರೆ।"**

ಶೈವಧರ್ಮದ ಗುಂಡಬ್ರಹ್ಮಯ್ಯನ ಪಾದಪೂಜೆ ಮಾಡುವ ಸಮಯದಲ್ಲಿ ಇಲ್ಲಿನ ಜಲ ಪವಿತ್ರವೆಂದು ಭಾವಿಸಿ ಈ ಜಲದಿಂದ ದಂಪತಿಗಳು ಗುಂಡಬ್ರಹ್ಮಯ್ಯರ ಪಾದ ಪೂಜೆ ಮಾಡುತ್ತಾರೆ. ಸುಮಾರು ೧೩ನೇ ಶತಮಾನದ ನಂತರದ ಕಾವ್ಯರಚನೆ ಇದಾಗಿರುವುದರಿಂದ ತಿರುಗಣೆ ಮಡುವಿನ ಉಲ್ಲೇಖದ ಪ್ರಾಚೀನತೆಯನ್ನು ಕ್ರಿ.ಶ.೧೩ನೇ ಶತಮಾನಕ್ಕೆ ಕೊಂಡೊಯ್ಯಬಹುದಾಗಿದೆ. ಸ್ವಾಭಾವಿಕವಾದ ಈ ಹೆಸರು ಜಲಸಂಬಂಧಿ ಶಬ್ದವಾಗಿದೆ.

ಶ್ರೀಮಂಟೇಸ್ವಾಮಿ ಕಾವ್ಯದಲ್ಲಿ
ಅವರು ಹೊನ್ನರಳಿ ಧಾಮದಲ್ಲಿ
ಘಲಘಲನೆ ಕಡೆದರಂತೆ
ಮುತ್ತತ್ತಿಗೋದರ
ಮುತ್ತತ್ತಿರಾಯನ ಜಾಗಕೆ ಹೋದರಂತೆ
ಆ ತಿರಗಣೆ ಮಡಿನತ್ತ ಹೋದರು ನಮ್ಮ ಸ್ವಾಮಿ
ಅಲ್ಲಿ ಆ ಮೂರಾಳುದ್ದ ಗಂಗೆ ಒಳಗೆ
ತಾನ ಮಡಿಯ ಮಾಡುತಾರೆ
ಬಸವಣ್ಣನವರ ಹೆಸರ ಹೇಳಿ
ಭಸ್ಮಾಂಗ ಧರಿಸುತಾರೆ
ರಾಚರಾಯರ ಹೆಸರ ಹೇಳಿ
ಮಟ್ಟಿಕಪ್ಪ ಧರಿಸುತಾರೆ
ತಂದ ಫಲಾರವ ಚಿತ್ರಿಸಿ ಪೂಜೆಯ ಮಾಡಿ
ಮೂರು ಮೂರ್ತಿಗಳಿಗೆ ಸರಿಯಾಗಿ
ಮೂರು ಎಡಯ ಮಡಗುತಾರೆ
ಬೇಟೆರಾಯನ ಹೆಸರ ಹೇಳಿ
ಒಂದು ಎಡೆಯ ಮಡಗುತಾರೆ
ಒಂದು ಕಂಡುಗ ಸಾಂಬ್ರಾಣೆ
ಬೆಳಗಿದರು ಸಿದ್ಧಯ್ಯನವರು

ಇದು ಸಿದ್ಧಾಪ್ಪಾಜಿಯವರು ಕಬ್ಬಿಣಧ ಭಿಕ್ಷೆ ಸಂದರ್ಭದಲ್ಲಿ ಮುತ್ತತ್ತಿರಾಯನನ್ನು ಕಾಣುವ ಮೊದಲು ನಡೆಸಿದ ಪೂಜಾ ಕ್ರಿಯೆಗಳು. ಈ ಕಾವ್ಯದಲ್ಲಿ ತಿರುಗಣೆ ಮಡುವನ್ನು ಮೂರಾಳುದ್ದದ ಗಂಗೆ ಎಂದು ಸಂಭೋದಿಸಲಾಗಿದೆ. ಅಂದರೆ ಇದರ ಆಳವನ್ನು ಉಲ್ಲೇಖಿಸಲಾಗಿದ್ದು, ಸಿದ್ಧಾಪ್ಪಾಜಿಯವರು ಇಲ್ಲಿ ಸ್ನಾನವನ್ನು ಮಾಡಿದ ಜಾಗವೆಂದು ವರ್ಣಿಸಲಾಗಿದೆ. ಬೇಟೆರಾಯನಿಗೂ ಒಂದು ಎಡೆಯನ್ನು ಇಡುತ್ತಾರೆ. ಬಸವಣ್ಣ ರಾಚರಾಯ ಹಾಗೂ ಬೇಟೆರಾಯರು ಸಿದ್ಧಾಪ್ಪಾಜಿಯವರಿಗೆ ಪೂಜ್ಯರು. ಆದುದರಿಂದಲೇ ಮಜ್ಜನದ ನಂತರ ಈ ಮೂವರಿಗೂ ಫಲಾರದ ಎಡೆಯನ್ನು ಇಡುತ್ತಾರೆ. ಕ್ರಿ.ಶ.ಸುಮಾರು ೧೫ನೆಯ ಶತಮಾನದಲ್ಲಿ ನಿರ್ಮಾಣವಾಗಿರುವ ಈ ಕಾವ್ಯದಲ್ಲಿ ತಿರುಗಣೆ ಮಡುವಿನ

ಉಲ್ಲೇಖ ಮಾಡಲಾಗಿದ್ದು, ಈ ಸ್ಥಳದ ಮಹತ್ವವನ್ನು ತಿಳಿಸಿರುವುದೇ ಆಗಿದೆ. ಇಲ್ಲಿ ಬೇಟೆರಾಯನಿಗೂ ಒಂದು ಗುಡಿ ಇದ್ದುದಾಗಿ ಈ ಕಾವ್ಯದಿಂದಲೇ ತಿಳಿದು ಬರುತ್ತದೆ.

**ಬ್ಯಾಟೆರಾಯನ**
**ಗುಡಿಯ ಹತ್ತಿರ ಬಂದರು ಸಿದ್ಧಾಪ್ಪಾಜಿ**
**ಬ್ಯಾಟೆರಾಯನ ಎಡೆಯ**
**ಬ್ಯಾಟೆರಾಯನಿಗೆ ಕೊಟ್ಟು**
**ಅಲ್ಲಿ ಭಂಗಿ ಫಲಾರ**
**ಆರು ಕಂಡುಗ ಭಂಗಿ ಸೊಪ್ಪು**
**ಮೂರು ದಮ್ಮು**
**ಮೂರು ಗಳ್ಗಿಗ್ಗಂಟ ತಮ್ಮ ಹೃದಯದಲ್ಲಿ ಸೇವಿಸಿ**
**ಹಲಗೂರು ಪಾಂಚಾಲಗೇರಿಗೆ**
**ಉರುಚೆ ಬಿಟ್ಟರಂತೆ**

ಅಂದರೆ ಇಲ್ಲಿ ಸಿದ್ಧಾಪ್ಪಾಜಿಯವರು ಭಂಗಿ ಫಲಹಾರ ಸೇವಿಸಿ ತುಸು ವಿಶ್ರಾಂತಿ ಪಡೆದಿದ್ದಾರೆ. ಭಕ್ತರು ಇಲ್ಲಿ ಬಂದು ಗಂಗೆಪೂಜೆ ಮಾಡಿ ದೇವರಿಗೆ ಪೂಜೆ ಮಾಡಿ ಅಗತ್ಯವಿದ್ದಲ್ಲಿ ಅಡುಗೆಯನ್ನು ಮಾಡಿ ವಿಶ್ರಾಂತಿ ಪಡೆದು ಮುನ್ನಡೆಯುತ್ತಾರೆ. ನಡಿಯ ನೈಸರ್ಗಿಕ ಕಾರಣದಿಂದ ಉಂಟಾಗಿರುವ ಸುಳಿಯ ಸುತ್ತ ಮಾನವರು ಬೆಳಸಿಕೊಂಡಿರುವ ನಂಬಿಕೆಯೇ ತಿರುಗಣೆ ಮಡುವಿನದಾಗಿದೆ.

## ೫.೪ ವಡೆಕಟ್ಟೆ ಮುದ್ದಮ್ಮ

ಗ್ರಾಮೀಣ ಜನತೆಯ ಅಗಾಧವಾದ ಸಾಹಸಕ್ಕೆ ಸಾಟಿಯಿಲ್ಲ. ಆದರೂ ವಿಜ್ಞಾನದ ವಿಷಯಗಳನ್ನು ಭೇದಿಸಿಕೊಂಡು ಅವುಗಳಿಗೆ ತಮ್ಮದೇ ಆದ ವ್ಯಾಖ್ಯಾನವನ್ನು ನೀಡುತ್ತಾರೆ. ಪಾದ್ದಾರೆಯಿಂದ ಮುತ್ತತ್ತಿಗೆ ಹೋಗುವ ಮಾರ್ಗದಲ್ಲಿನ ಕಣಿವೆ ಅಂಚಿನ ಬೆಟ್ಟದ ಮಧ್ಯ ನೀರು ಹರಿಯುವ ಸ್ಥಳವೇ 'ವಡೆಕಟ್ಟೆಮುದ್ದಮ್ಮ' ಸಂಚರಿಸುವ ಸ್ಥಳವಾಗಿದೆ. ಮುತ್ತತ್ತಿಗೆ ಹೋಗುವ ಭಕ್ತರು ಕಣಿವೆ ಮೇಲಿನ ಕೇಂದ್ರಸ್ಥಳದಲ್ಲಿ ನಿಂತುಕೊಂಡು ತಮ್ಮ ಶಕ್ತ್ಯಾನುಸಾರ ಗಟ್ಟಿಯಾಗಿ ವಡೆಕಟ್ಟೆ ಮುದ್ದಮ್ಮಾ ಎಂದು ಕೂಗುತ್ತಾರೆ. ಕಣಿವೆ ಮುಂದಿನ ಬೆಟ್ಟದಿಂದ ಓ ಎಂಬ ಪ್ರತಿಧ್ವನಿ ಕೇಳಿಬಂದರೆ ಆಗ ಅಲ್ಲಿ ವಡೆಕಟ್ಟೆಮುದ್ದಮ್ಮ ಇದ್ದಾಳೆ. ಇಲ್ಲದಿದ್ದರೆ ಬೇರೆ ಕಡೆಗೆ ಸಾಗಿಹೋಗಿದ್ದಾಳೆ ಎಂಬ ನಂಬಿಕೆ ಇದೆ.

ಇದನ್ನು ಕುರಿತು ಒಂದು ಐತಿಹ್ಯವನ್ನು ಕಟ್ಟಿದ್ದಾರೆ. ಅದು ವಡೆಕಟ್ಟೆಮುದ್ದಮ್ಮ ಒರ್ವ ಹಾಲು, ಮೊಸರು, ಬೆಣ್ಣೆ, ತುಪ್ಪ ಮಾರುವ ಗೊಲತ್ತಿಯಾಗಿದ್ದು, ಒಮ್ಮೆ ಮಳೆ ಸುರಿಯುತ್ತಿರುವ ಸಮಯದಲ್ಲಿ ಹಾಲಿನ ಕೊಡ ಎತ್ತಿಕೊಂಡು ಈ ಬೆಟ್ಟದಮೇಲೆ ಬರುತ್ತಿದ್ದಾಗ ಹಾಲಿಗೆ ಆಸೆ ಪಟ್ಟ ಕೃಷ್ಣನು ಹಾಲನ್ನು ಕೇಳಿದಾಗ ಮುದ್ದಮ್ಮ ಕೊಡಲಿಲ್ಲವಂತೆ, ಆಗ ಕೃಷ್ಣನು ಬಲವಂತವಾಗಿ ಕಸಿದುಕೊಂಡಾಗ ಬೆಟ್ಟದಿಂದ ಉರುಳಿಹೋಯಿತಂತೆ. ಆಗ ಚೆಲ್ಲಿದ ಹಾಲಿನ ಕಲೆಯೇ ಈ ಸ್ಥಳ ಎಂಬುದಾಗಿ ಜನತೆ ಬೆಟ್ಟದ ನೀರು ಹರಿಯುವ ಸ್ಥಳವನ್ನು ನಿರ್ದೇಶಿಸುತ್ತಾರೆ. ಕೃಷ್ಣನ ಬಲಪ್ರಯೋಗಕ್ಕೆ ತುತ್ತಾಗಿ ಮುದ್ದಮ್ಮಳೂ ಸಹ ಕಣಿವೆಗೆ ಬಿದ್ದು ಪ್ರಾಣತೆತ್ತುದರಿಂದ ಅವಳ ಆತ್ಮ ಇಲ್ಲಿ ನೆಲೆಸಿದೆ ಎಂಬ ಭಾವನೆಯಿದೆ.

ಆದರೆ ಮುತ್ತತ್ತಿಯು ವೈಷ್ಣವ ಧರ್ಮಕ್ಷೇತ್ರಕ್ಕೆ ಸಂಬಂಧಿತವಾಗಿದ್ದು, ಈ ಐತಿಹ್ಯವು ಸಹ ವೈಷ್ಣವ ಧರ್ಮಕ್ಕೆ ಸಂಬಂಧಿಸಿದ ಶ್ರೀಕೃಷ್ಣನ ಜೊತೆ ಬೆಸೆದುಕೊಂಡಿರುವುದು ಮುಖ್ಯ ಅಂಶವಾಗಿದೆ. ಭಕ್ತರ ಸಂಖ್ಯೆ ನಡೆದು ಸಾಗುವಾಗ ಇದೊಂದು ಗಮನಾರ್ಹ. ಆಯಾಸ ಪರಿಹಾರದ ಸ್ಥಳವಾಗಿದ್ದುದೇ ಅಲ್ಲದೆ ಮನೋರಂಜನೆಯ ಸ್ಥಳವು ಆಗಿದ್ದಿತು. ಭಕ್ತರಿಗೆ ಒಂದು ಬಗೆಯ ಸಂತೋಷ, ಬದಲಾವಣೆಗೆ ಸಹಕಾರಿಯಾಗಿದ್ದಿತು. ಈಗ ವಿರಳವಾಗಿ ಜನರು ಇತ್ತ ಗಮನಹರಿಸುತ್ತಾರೆ. ಆದರೂ ಜಾತ್ರೆಯ ವೇಳೆಯಲ್ಲಿ ಹತ್ತಾರು ಜನರು ಇತ್ತ ಕಡೆ ಗಮನವನ್ನು ಕೇಂದ್ರೀಕರಿಸುತ್ತಾರೆ.

## ೫.೫ ಹನುಮನಗುಂಡು

ಪಾದ್ದಾರೆಯಿಂದ ಮುತ್ತತ್ತಿಗೆ ಹೋಗುವ ಮಾರ್ಗ ಮಧ್ಯದಲ್ಲಿರುವುದೇ 'ಹನುಮನಗುಂಡು' ಎಂಬ ಬೃಹತ್ತಾದ ಗ್ರಾನೈಟ್ ಶಿಲೆಯ ಗುಂಡು. ಮುತ್ತತ್ತಿರಾಯನ ಭಕ್ತರು ಇಲ್ಲಿ ಕರ್ಪೂರ ಮತ್ತು ಅಗರಬತ್ತಿಗಳನ್ನು ಹಚ್ಚಿ ಭಕ್ತಿಯನ್ನು ತೋರಿಸಿ ವಿಶ್ರಮಿಸಿಕೊಂಡು ಮುಂದೆ ಸಾಗುತ್ತಾರೆ. ಕಾರಣ ಈ ಶಿಲಾಗುಂಡಿನ ಮೇಲೆ ಹನುಮಂತನ ಹೆಜ್ಜೆಯ ಗುರುತ ಇದೆ ಎಂಬ ಐತಿಹ್ಯದ ನಂಬಿಕೆಯೇ ಆಗಿದೆ. ತ್ರೇತಾಯುಗದಲ್ಲಿ ಸೀತಾರಾಮನ ಆಜ್ಞೆಯಂತೆ ಇಲ್ಲಿ ನೆಲೆಸಲು ಆದೇಶ ಪಡೆದ ಹನುಮಂತನು ನೆಲೆಸಲು ಯೋಗ್ಯಸ್ಥಳವೊಂದರ ಹುಡುಕಾಟಕ್ಕಾಗಿ ಈ ಬೃಹತ್ತ್ ಶಿಲಾಗುಂಡಿನ ಮೇಲೆ ಜಿಗಿದು ಸುತ್ತಲೂ ವೀಕ್ಷಿಸಿದನಂತೆ. ಅವನ ಪವಿತ್ರ ಪಾದ ಇಲ್ಲಿ ಇಟ್ಟಿರುವುದರಿಂದ ಗ್ರಾಮೀಣ ಜನತೆಗೆ ಭಕ್ತಿ. ಆದುದರಿಂದಲೇ ಇದನ್ನು ಹನುಮನಗುಂಡು ಎಂದು ಹೆಸರಿಸಿರುವುದು ವಾಸ್ತವವಾಗಿ ಒಂದು ಮಗ್ಗುಲಲ್ಲಿ ಸ್ವಾಭಾವಿಕವಾಗಿ ತಳಭಾಗದಲ್ಲಿ ಇಳಿಜಾರಿನ ಜಾಗ ಮಾಡಿಕೊಂಡಿರುವ ಶಿಲಾಗುಂಡಿನ ಭಾಗವೇ ಹನುಮನಿರುವ ಪೂಜೆಯ ಸ್ಥಳವಾಗಿತ್ತು. ರಸ್ತೆ ಅಗಲ ಮಾಡುವ ಸಂದರ್ಭದಲ್ಲಿ ಈ ಹನುಮನಗುಂಡನ್ನು ನಾಶಪಡಿಸಲಾಗಿದೆ. ಆದರೂ ಅವಶೇಷಗಳು ಮಾತ್ರ ಉಳಿದು ಸಾಕ್ಷಿಯಾಗಿವೆ.

ವೈಷ್ಣವ, ಶೈವ, ಮೇಲು-ಕೀಳು ಎಂಬ ಬೇಧಭಾವಗಳಿಲ್ಲದೆ ಎಲ್ಲಾ ವರ್ಗದ ಜನರು ಪೂಜಿಸುತ್ತಿದ್ದದ್ದು, ಸಮಾಜದ ಸಾಮರಸ್ಯದ ಪ್ರತೀಕವೇ ಆಗಿದ್ದಿದ್ದು ಗಮನಾರ್ಹ. ಅಲ್ಲದೇ ಸುಮಾರು ೩ ಮೈಲಿಗಳನ್ನು ನಡೆದುಕೊಂಡೇ ಮುತ್ತತ್ತಿಗೆ ಹೋಗುವ ಮಾರ್ಗಮಧ್ಯದ ವಿಶ್ರಾಂತಿಯ ತಂಗುದಾಣ ಈ ಹನುಮನಗುಂಡು ಆಗಿದ್ದಿತ್ತು ಎಂಬುದು ಮತ್ತೊಂದು ಪ್ರಮುಖವಾದ ಅಂಶವಾಗಿದೆ. ಈಗ ನಡೆದು ಸಾಗುವ ಭಕ್ತರು ಅತೀ ವಿರಳವಾಗಿದ್ದು ಮುತ್ತತ್ತಿಯ ಜಾತ್ರಾ ಸಂದರ್ಭದಲ್ಲಿ ಕೆಲವೇ ಕೆಲವು ಭಕ್ತರು ನಡೆದುಕೊಂಡು ಗತಕಾಲದ ಹನುಮನಗುಂಡಿನ ಕುರುಹುಗಳನ್ನು ನೆನೆದು ಮುಂದೆ ಸಾಗುತ್ತಾರೆ.

## ೫.೬ ಪಾದ್ದಾರೆ

ಇದು ಪ್ರಸ್ತುತ ರಾಮನಗರ ಜಿಲ್ಲೆಯ ಕಾವೇರಿ ನದಿತೀರದ ಮುತ್ತತ್ತಿ ಪರಿಸರದ ಸ್ಥಳ. ತಮ್ಮಡಿಗಳ ಮನೆಯನ್ನು ಹೊರತು ಪಡಿಸಿದರೆ ಇನ್ನಾವುದೇ ಮನೆಗಳಿಲ್ಲ. ಆದರೆ ಸಾತನೂರು ಮಾರ್ಗವಾಗಿ ಮುತ್ತತ್ತಿಗೆ ಹೋಗುವಾಗಿನ ಉತ್ತಮ ರಸ್ತೆ ಇಲ್ಲಿಗೆ ಇದೆ. ಎಡದಲ್ಲಿ ಆಳವಾದ ಕಮರಿ ಬಲದಲ್ಲಿ ಎತ್ತರದ ಬೆಟ್ಟ ನಡುವೆ ಹಾದುಹೋಗುವ ಕಿರುದಾರಿಯಲ್ಲಿ ಇಲ್ಲಿನ ಪಾದ್ದಾರೆಯಪ್ಪ ಎಂಬ ಮುತ್ತತ್ತಿರಾಯನಾದ ಆಂಜನೇಯನ ನೂತನ ದೇವಾಲಯವಿದೆ. ಸಾತನೂರಿನಿಂದ ೧೨ಕಿ.ಮೀ.ದೂರ ಇಲ್ಲಿಗಾಗುತ್ತದೆ. ಬಂಡೆಯೊಂದರ ಪಾರ್ಶ್ವಕ್ಕೆ ದೇವರಗರ್ಭಗೃಹವನ್ನು ನಿರ್ಮಿಸಲಾಗಿತ್ತು. ೧೯೮೬ರ ತನಕವು ಸೀಮೆಹೆಂಚು ಮತ್ತು ಮರದ ಕಟ್ಟಡವನ್ನು ಹೊಂದಿತ್ತು. ಎತ್ತರವಾದ ಜಗುಲಿಗಳು ಎರಡರ ನಡುವೆ ಸುಖನಾಸಿ ನಂತರ ಗರ್ಭಗುಡಿಯಿದ್ದು ಎದುರಿಗೆ ದೀಪಸ್ತಂಭವೊಂದು ಇದ್ದಿತು. ದೇವಾಲಯದ ಎದುರಿಗೆ ಕೊಂಡವೊಂದು ಸದಾ ಉರಿಯುವ ವ್ಯವಸ್ಥೆ ಮಾಡಲಾಗಿತ್ತು. ಗರ್ಭಗುಡಿಯ ಬಾಗಿಲನ್ನು ಕಾಡಿನಲ್ಲಿ ದೊರೆಯುವ ಮರಗಳಿಂದ ಮಾಡಲಾಗಿತ್ತು. ಅದರ ಮೇಲೆ ಚಿತ್ರಗಳಾದ ಎಲೆಗಳು ಬಳ್ಳಿಗಳನ್ನು ಹಾಗೂ ಹೂವುಗಳನ್ನು ಕೆತ್ತಲಾಗಿತ್ತು. ಗರ್ಭಗುಡಿಯ ದೇವರನ್ನು ಮುತ್ತತ್ತಿಯ ಮುತ್ತತ್ತಿರಾಯನಂತೆ ಕಕ್ಕೆಯ ಮರದಲ್ಲಿಯೇ ಬಿಡಿಸಲಾಗಿತ್ತು. ಸಾತನೂರು ಹೋಬಳಿಯ ಮೂಲೆ ತಿಮ್ಮನದೊಡ್ಡಿಯ ಕುಂಚಿಟಿಗ ಒಕ್ಕಲಿಗರು ಈ ಪಾದ್ದಾರೆಯಪ್ಪ ಎಂಬುವ ಆಂಜನೇಯನನ್ನು ಮನೆಯ ಒಕ್ಕಲು ಎಂದು ಕರೆದುಕೊಳ್ಳುವರು. ಆದರೆ ತಮ್ಮಡಿಗಳು ಭೂಹಳ್ಳಿಯಲ್ಲಿರುವ ಲಿಂಗಾಯಿತ ಜಾತಿಯ ಹುಚ್ಚುವೀರಯ್ಯ ಎಂಬುವವರ ಮನೆತನದವರೇ ಆಗಿದ್ದಾರೆ.

'ಪಾದ್ದಾರೆ' ಎಂಬುದನ್ನು 'ಪಾದ್ದಾರಿ' ಎಂತಲೂ ಕರೆಯುತ್ತಾರೆ. ಬಿಡಿಸಿದರೆ ಪಾದದ+ಅಜ಼ೆ > ಪಾದ್ದಾರೆ ಎಂದಾಗುತ್ತದೆ. ಇದಕ್ಕೆ ಪುಷ್ಟಿಯಾಗಿ ಜನರ ಐತಿಹ್ಯ ಈಗಿದೆ. ತಿರುಗಣೆ ಮಡುವಿನಲ್ಲಿ ಸೀತಾಮಾತೆಗೆ ತನ್ನ ಬಾಲದಿಂದ ಮೂಗುತಿ ಎತ್ತಿಕೊಟ್ಟ ಆಂಜನೇಯನು ಮುಕ್ತಿ ಎತ್ತಿದ ಮುತ್ತತ್ತರಾಯ ಎಂಬ ನಾಮಕರಣ ಪಡೆದು ಶ್ರೀರಾಮ, ಲಕ್ಷ್ಮಣ, ಸೀತೆಯರಿಂದ ಈ ಅರಣ್ಯದಲ್ಲೇ ನೆಲೆಸುವಂತೆ ಆದೇಶವನ್ನು ಪಡೆಯುತ್ತಾನೆ. ತಾನು ನೆಲೆಸಲು ಯೋಗ್ಯಸ್ಥಳದ ಹುಡುಕಾಟಕ್ಕಾಗಿ ಇಲ್ಲಿನ ಬಂಡೆಯ ಮೇಲೆ ಪಾದವನ್ನಿಟ್ಟು ವೀಕ್ಷಿಸಿದಕ್ಕಾಗಿ ಈ ಸ್ಥಳಕ್ಕೆ ಪಾದದ ಅಜ಼ೆ > ಪಾದ್ದಾರೆ ಎಂಬ ಹೆಸರು ಬಂದಿತು. ಇದು ಐತಿಹ್ಯವಾದರೆ ಪಾದ್ದಾರಿ ಎಂಬ ಮತ್ತೊಂದು ಶಬ್ಧವನ್ನು ವಿವೇಚಿಸಿದಾಗ

ಪಾದದ+ದಾರಿ> ಪಾದ್ದಾರಿ ಎಂಬುದಾಗುತ್ತದೆ. ಪಾದದಷ್ಟು ಅಂದರೆ ಕಿರಿದಾದ ಜಾಗ ಮತ್ತು ಅಜೆ ಎಂದರೆ ಬಂಡೆ. ಈ ಎರಡು ಕಾರಣಗಳಿಂದ ಪಾದ್ದಾರೆ, ಪಾದ್ದಾರಿ ಎಂಬುದು ಪ್ರಚಲಿತವಾಗಿದೆ. ಹಿಂದೆ ಗುಡಿಯ ಜಗುಲಿಯ ಮೇಲೆ ಬೃಹತ್ ನಗಾರಿಗಳಿದ್ದು, ವನ್ಯಮೃಗಗಳು ಕಾಣಿಸಿಕೊಂಡಾಗ ಬಡಿದು ಶಬ್ದಸೃಷ್ಟಿಸಿ ಓಡಿಸುತ್ತಿದ್ದರು. ದೇವಾಲಯದ ಮುಂದೆ ಭಕ್ತರು ಕಮರಿಯ ಅಂಚಿಗೆ ಪುಟ್ಟ ಪುಟ್ಟ ಗುಡಿಗಳಾದ ಬೀರಪ್ಪ, ಬ್ಯಾಟೆರಾಯ ಎಂದು ಕಟ್ಟಿಕೊಂಡು ಪಾದ್ದಾರೆಯ ದೇವರ ಜೊತೆ ಪೂಜಿಸುತ್ತಿದ್ದರು. ಆಯಾ ಸ್ಥಳದಲ್ಲಿ ನೆಲೆಸಿರುವ ದೇವರನ್ನು ಆಯಾ ಹೆಸರಿನಿಂದಲೇ ಕರೆಯುವಂತೆ ಪಾದ್ದಾರೆಯಲ್ಲಿಯೂ ಪಾದ್ದಾರಪ್ಪನೆಂದು ಆಂಜನೇಯನನ್ನು ಕರೆಯುತ್ತಾರೆ. ಹೀಗೆ ಪಾದ ಊರಿರುವ ಸ್ಥಳವನ್ನು ಈಗಲೂ ರಕ್ಷಿಸಿ ಗರ್ಭಗುಡಿಯಲ್ಲಿ ಪೂಜಿಸುತ್ತಾರೆ.

ಮುತ್ತತ್ತಿರಾಯ ಮತ್ತು ಪಾದ್ದಾರೆಯಪ್ಪ ಇಬ್ಬರು ಜನಪದ ಜನತೆಗೆ ಒಂದೇ. ಆದುದರಿಂದ ಮುತ್ತತ್ತಿಯ ಜನಪದ ಗೀತೆಗಳನ್ನು ಹಾಡುವ ಮಾದಿಗ ಜನಾಂಗದ ಮಹಿಳೆಯರು ತಮ್ಮ ಗೀತೆಗಳಲ್ಲಿ ಪಾದ್ದಾರೆಯ್ಯ ಉಲ್ಲೇಖವನ್ನು ಹೀಗೆ ಮಾಡುತ್ತಾರೆ.

**"ಮತ್ತಿ ಮರದ ಮೇಲೆ**
**ಅತ್ತು ನೋಡು ಮುತ್ತಯ್ಯ**
**ಪಾದ್ದಾರೆ ಮೇಲೆ ಪರಸಯ್ಯ"**
**"ಪಾದ್ದಾರೆ ಮೇಲೆ ಪರಿಸೇಗ್ಬಂದಿರೋರು**
**ಅವರಿರೊ ಸ್ಯಾವೆಗ್ ಬರುತ್ತಾರೆ"**

ಎಂದು ಜಾತ್ರೆಯ ವರ್ಣನೆ ಮಾಡುವಾಗ ವರ್ಣಿಸಲಾಗಿದೆ.

ಅಲಸೂರು ಸಮೀಪದ ಹಳ್ಳಿ. ಆದುದರಿಂದ ಅಲಸೂರು ಮತ್ತು ನಾಯಕನಹಳ್ಳಿಯಲ್ಲಿ ನೆಲೆಸಿರುವ ಮಾದಿಗ ಜನಾಂಗದವರು ಈ ದೇವರ ಮೇಲೆ ಸಾಂಸ್ಕೃತಿಕ ಸ್ವಾಮ್ಯವನ್ನು ಪಡೆದುಕೊಂಡಿದ್ದಾರೆ. ಗೋಕುಲಾಷ್ಟಮಿ ಸಂದರ್ಭದಲ್ಲಿ ನಡೆಯುವ ಜಾತ್ರೆಯಲ್ಲಿ ಈ ಜನಾಂಗದ ಪುರುಷರು ಪ್ರಮುಖ ಪಾತ್ರವಹಿಸುತ್ತಾರೆ. ಜಾತ್ರೆಗೂ ಮೊದಲೂ ಇವರ ಮನೆಯಿಂದಲೇ ದೀಪಸ್ತಂಭಕ್ಕೆ ಹರಳೆಣ್ಣೆ ಬರಬೇಕು. ಇವರು ಭಕ್ತಿಯಿಂದ ಮೈಲಿಗೆಯಾಗದ ಹಾಗೆ ಮಡಿಯಿಂದ ಹರಳೆಣ್ಣೆಯನ್ನು ದೀಪಕ್ಕೆ ಬಿಟ್ಟಮೇಲೆಯೇ ಜಾತ್ರೆ ಪ್ರಾರಂಭವಾಗುತ್ತದೆ.

ಸಾರಿಗೆಸಂಪರ್ಕ ವಿರಳವಾಗಿದ್ದ ಕಾಲದಲ್ಲಿ ಜನ ಸಾತನೂರಿನ ಮಾರ್ಗವಾಗಿ ಮುತ್ತತ್ತಿಗೆ ನಡೆದು ಹೋಗುತ್ತಿದ್ದರು. ಹಣವುಳ್ಳವರು ಕತ್ತೆಯ ಮೇಲೆ ಸಾಮಾನು ಸರಂಜಾಮು ಹಾಕಿ ನಡೆಯುತ್ತಿದ್ದರು. ನಂತರ ಇಲ್ಲಿ ಕುರಿ, ಕೋಳಿ ಬಲಿಕೊಟ್ಟು ಸೇವೆ ಮಾಡಿ ಒಂದು ದಿನ ತಂಗಿದ್ದು, ನಂತರ ಮುಂದೆ ನಡೆಯುತ್ತಿದ್ದರು. ಈ ವೇಳೆಯಲ್ಲಿ ಇಲ್ಲಿನ ತಮ್ಮಡಿಗೆ ಅಕ್ಕಿಪಡಿ ಎಂಬ ಅಕ್ಕಿ, ಬೆಲ್ಲ, ಕಾಯಿ, ಹಣ್ಣು, ಕರ್ಪೂರ, ಬಾಳೇಹಣ್ಣು ಹಾಗೂ ಹಣವನ್ನು ಕೊಟ್ಟು ದೇವರನ್ನು ಪೂಜಿಸುತ್ತಿದ್ದರು. ಈಗಲೂ ಸಹ ಅಕ್ಕಿಪಡಿ ಕೊಡುವ ಪದ್ಧತಿ ಹಾಗೆ ಉಳಿದುಕೊಂಡು ಬಂದಿದೆ. ಜೊತೆಗೆ ಮಾದಿಗ ಜನಾಂಗದವರು ದೇವರ ಪಾದರಕ್ಷೆ ಎಂದು ಸುಮಾರು ಎರಡೂವರೆ ಅಡಿ ಎತ್ತರದ ಒಂದೂವರೆ ಅಡಿ ಅಗಲದ ಪಾದರಕ್ಷೆಗಳನ್ನು ಮಾಡಿಕೊಡುತ್ತಿದ್ದರು. ಭಕ್ತರು ಇದರಿಂದ ಶಿರದ ಮೇಲೆ ಆಶೀರ್ವಾದ ಪಡೆದು ಪಾದರಕ್ಷೆಯ ಕೊಯ್ದು ಪುಟ್ಟ ತುಂಡುವೊಂದನ್ನು ಕಾಣಿಕೆಯಿತ್ತು ಪಡೆದು ಭೂತಪ್ರೇತಗಳ, ರೋಗರುಜಿನಗಳ ಕಾಟದಿಂದ ಮುಕ್ತಿ ಪಡೆಯಲೆಂದು ಕೊರಳಿಗೊ, ಉಡಿದಾರಕ್ಕೊ ಅಥವಾ ತೋಳಿಗೊ ಕಟ್ಟಿಕೊಳ್ಳುತ್ತಿದ್ದರು. ಈಗ ಈ ಪದ್ಧತಿ ಇಲ್ಲವಾಗಿದೆ. ಹೀಗೆ ಪಾದರಕ್ಷೆ ಕೊಯ್ದು ಖಾಲಿಯಾದ ಮೇಲೆ ಹೊಸ ಪಾದರಕ್ಷೆಗಳನ್ನು ಮಾದಿಗ ಜನಾಂಗದವರು ಮಾಡಿ ದೇವರಿಗೆ ಕಾಣಿಕೆಯಾಗಿ ಅರ್ಪಿಸುತ್ತಿದ್ದರು.

ಕೆ.ಅನಂತರಾಮುರವರು ತಾವು ಕಂಡ ಜಾತ್ರ ಸನ್ನಿವೇಶವನ್ನು ಹೀಗೆ ಉಲ್ಲೇಖಿಸಿದ್ದಾರೆ. "ಬೆಳಗಿನ ಜಾವ ಐದು ಗಂಟೆಗೆ ಗಣಪತಿ ಗುಡಿಯ ಬಳಿ ಇಳಿದುಕೊಂಡಿದ್ದ ಭಕ್ತರು 'ಮುತ್ತತ್ತಿರಾಯನ ಪಾದಕ್ಕೆ ಗೋವಿಂದೋ ಗೋವಿಂದ' ಎಂದು ಉಗ್ಘಪಡಿಸುತ್ತಾ ಮುತ್ತತ್ತಿಯ ಕಡೆಗೆ ಪರಿಸೆ ಹೊರಟರು. ನಾನು ಪಂಡಿತರಾಗಲೇ ಎದ್ದು ಅಡಿಗೆಯ ಪಾತ್ರೆಗಳು, ಮಸಾಲೆಗಳು, ತರಕಾರಿಗಳು, ಬಟ್ಟೆಬರೆಗಳನ್ನು ಸವಣಿಸಿಕೊಂಡು ಕಾಫಿ ಮಾತ್ರವೇ ಕುಡಿದು ಯಾತ್ರೆಯನ್ನು ಪ್ರಾರಂಭಿಸಿದೆವು. ಬಸ್ಸಿನಲ್ಲಿ ಸಾತನೂರಿಗೆ ಹೋದೆವು. ಅಲ್ಲಿಂದ ಖಾಸಗಿ ಬಸ್ಸಿನಲ್ಲಿ ಕೋಳ್ಕೋಟೆಯ ದನಗಳ ದೊಡ್ಡಿಯನ್ನು ಸೇರಿದೆವು. ಮುತ್ತತ್ತಿಯವರೆಗೂ ರಸ್ತೆಯುಂಟು. ಆದರೆ ಬಸ್ಸಿನ ಸಂಚಾರಕ್ಕೆ ಅದು ಅಷ್ಟು ಯೋಗ್ಯವಾಗಿಲ್ಲವಾದ್ದರಿಂದ ಕೋಳ್ಕೋಟೆಯಿಂದ ಮುಂದಕ್ಕೆ ಯಾತ್ರಿಕರ ಜೊತೆಯಲ್ಲಿ ನಾವು ಹೊರೆಗಳನ್ನು ಹೊತ್ತು ನಡೆದೆವು. ಕೋಳ್ಕೋಟೆಯಿಂದ ೨.೧/೨ ಮೈಲಿಯಷ್ಟು ನಡೆದು ಪಾದ್ದಾರೆ ಎಂಬ ರಮ್ಯವಾದ ಗುಡ್ಡಗಾಡು ಪ್ರದೇಶಕ್ಕೆ ಹೋದೆವು. ಕೆಲವಾರು ಅಂಗಡಿಗಳು ಹೆಂಡ ಸಾರಾಯಿ ಗಡಂಗುಗಳ ಚಿಕ್ಕ ಜಾತ್ರೆಯೇ ನೆರೆದಿತ್ತು. ಅಲ್ಲಿ ಗುಡ್ಡದ ಮೇಲೊಂದು ಹನುಮಂತನ

ಗುಡಿಯಿದೆ. ಆ ದೇವಾಲಯ ಹೊರತು ಅಲ್ಲಿ ಊರುಗೀರು ಏನೂ ಇಲ್ಲ. ಅಲ್ಲಿಯೂ ವರ್ಷಕೊಮ್ಮೆ ಬ್ರಾಹ್ಮಣರ ಪೂಜೆ. ಮುತ್ತತ್ತಿ ಜಾತ್ರೆಯ ಹಿಂದಿನ ದಿನ ಅಲ್ಲಿ ಜಾತ್ರೆ ಪರ ನಡೆಯುತ್ತದೆ. ಅಲ್ಲಿ ಕೂಡಿದ ಭಕ್ತರು ಮರುದಿನಕ್ಕೆ ಮುತ್ತತ್ತಿಗೆ ಹೋಗುತ್ತಾರೆ. ಪಾದ್ದಾರೆಯ ಹನುಮಂತನ ಪೂಜೆಯನ್ನು ನೆರವೇರಿಸಿ ನಾವು ಮುಂದಕ್ಕೆ ಹೋಗಬೇಕಾಗಿತ್ತು. ನಾನು ಪಂಡಿತರ ಕೈಕೂಟಕ್ಕೆ ನಿಂತೇ. ಪೂಜೆಯ ಸಾಮಾನುಗಳನ್ನು ಹೊಂದಿಸಿಡಲು ತಮ್ಮಡಪ್ಪನಿಗೆ ಹೇಳಿ ಅಗ್ರೋದಕವನ್ನು ತರಲು ನಾವು ದೋಣಿಯತ್ತ ಹೋದೆವು.[೫]”

“ನಾಗಯ್ಯನು ನಮಗೆ ದಾರಿತೋರುತ್ತಾ ೩೦೦ ಅಡಿಗಳ ಅಳವಾದ ಕಣಿವೆಯೊಳಕ್ಕೆ ಉಪಾಯವಾಗಿ ಇಳಿಸಿಕೊಮಡು ಹೋದನು. ದೋಣಿಯಲ್ಲಿ ಮಿಂದು ಒದ್ದೆಯುಟ್ಟೆವು. ಪಂಡಿತರು ಜಲಕುಂಭವನ್ನು ಹೊತ್ತರು. ನಾಗಯ್ಯ ಜಾಗಟೆ ಬಾರಿಸುತ್ತ ಅಡ್ಡ ಬಂದವರನ್ನು ಅದ್ದರಿಸುತ್ತ ಬಿಜಮಾಡಿಸಿ ಕೊಂಡುಹೋದ. ಹೋಮ, ಅಭಿಷೇಕ, ಮಹಾಮಂಗಳಾರತಿಗಳನ್ನು ನೆರವೇರಿಸಿ, ತಮ್ಮಡಪ್ಪ ಕೊಟ್ಟ ಉಲುಪೆಯನ್ನು ಗಂಟುಕಟ್ಟಿಕೊಂಡು, ಮನೆಯಿಂದ ತಂದಿದ್ದ ಹುಳಿಯನ್ನ, ಮೊಸರನ್ನ ಭಕ್ಷಿಸಿ ಮುತ್ತತ್ತಿಯ ಕಡೆಗೆ ಹೆಜ್ಜೆಹಾಕುವ ವೇಳೆಗೆ ಗಂಟೆ ೧೨ ಆಯಿತು. ಪಾದ್ದಾರೆಯಲ್ಲಿ ಅಂದು ಪಾಳ್ಯವೆಂಬ ಊರಿನವರ ಪರ ಅಡುಗೆ ಮನೆಯಲ್ಲಾಗಲೆ ಸಾವಿರಾರು ರಾಗಿಮುದ್ದೆಗಳನ್ನು ಕಟ್ಟಿ ಉರುಳಿಸಿದರು. ಜಗಲಿಯ ಮೇಲೆ ರಾಗಿಹಿಟ್ಟಿನ ರಾಶಿಬಿದ್ದಿತು. ಇನ್ನೊಂದು ಕಡೆ ಅನ್ನ ಬೇಯುತ್ತಿತ್ತು, ಅವರೇಕಾಳಿನ ಸಾರು ಕುದಿಯುತ್ತಿತ್ತು. ಯಾರು ಎಷ್ಟು ಬೇಕಾದರೂ ತಿಂದು ತೇಗಬಹುದು. ಆದರೆ ಜನರು ನ್ಯಾಯವಾಗಿ ವಿತರಣೆ ಮಾಡಲು ಬಿಡುವುದಿಲ್ಲ. ಹಾಳು ಹೆಂಡ ಸರಾಯಿಗಳ ಹಾವಳಿ ಅದರ ಅಮಲಿನಲ್ಲಿ ಜನರ ನನಗೆ ತನಗೆ ಎಂದು ಕಿತ್ತಾಡಿ ‘ಸಿಕ್ಕಿದವರಿಗೆ ಸೀರುಂಡೆ’ ಅನ್ನಿಸಿಬಿಡುತ್ತಾರೆ.[೬]”

ಇದು ಕೆ.ಅನಂತರಾಮುರವರು ಕಂಡ ಚಿತ್ರಣದ ಜಾತ್ರಾ ವೇಳೆಯ ಒಂದು ತುಣುಕು ಮಾತ್ರ ಆಗ ಜಾತ್ರೆಗೆ ಮುನ್ನಾದಿನಗಳಲ್ಲೇ ಗ್ರಾಮಸ್ಥರು ಇಲ್ಲಿಗೆ ಬಂದು ಕಾಡಿನಿಂದ ಮರ, ಸೊಪ್ಪುಗಳನ್ನು ಕಡಿದು ತಮ್ಮ ಅಂಗಡಿಗಳನ್ನು ನಿರ್ಮಿಸಿಕೊಳ್ಳುತ್ತಿದ್ದರು. ಕಮರಿಯ ಅಂಚಿಗೆ ಸಾಲಾಗಿ ಈ ಅಂಗಡಿಗಳಿರುತ್ತವು. ಈಗಲೂ ಸಹ ಇದೇ ವಾಡಿಕೆ ಮುಂದುವರೆದಿದೆ. ಇದರಲ್ಲಿ ಹೆಂಡ ಸಾರಾಯಿ, ಚಹಾ ಬೋಂಡದ ಅಂಗಡಿಗಳದ್ದೇ ಪ್ರಾಬಲ್ಯ ಹೆಚ್ಚಾಗಿರುತ್ತಿತ್ತು. ಹೀಗೆ ಅಂಗಡಿ ನಿರ್ಮಿಸಲು ಬರುತ್ತಿದ್ದ ಎಷ್ಟೋ ಮಂದಿಗಳು ಕಾಡಾನೆಯ ತುಳಿತಕ್ಕೆ ಸತ್ತದ್ದು ಉಂಟು. ಭಕ್ತಾದಿಗಳಾದ ಯಾತ್ರಿಕರು

ಮನೆಯಿಂದ ಹುಳಿಯನ್ನದ ಮುದ್ದೆ, ರಾಗಿರೊಟ್ಟಿ, ಹುರುಳಿಜುನಕಗಳಂತಹ ತಿನಿಸುಗಳನ್ನು ತರುತ್ತಿದ್ದರಾದರೂ ಸೇವೆ ಮಾಡಿದವರ ಅನ್ನದಾನದಲ್ಲೂ ಕುಳಿತು ಊಟವನ್ನು ಸವಿಯುತ್ತಿದ್ದರು. ಅನ್ನದಾನದಲ್ಲಿ ಸಸ್ಯಹಾರಿ ಅಲ್ಲದೇ ಮಾಂಸಾಹಾರಿಯು ಇರುತ್ತಿದ್ದವು. ಈಗಲೂ ಇದೇ ಪದ್ಧತಿ ಮುಂದುವರೆದುಕೊಂಡು ಬಂದಿದೆ.

ಕ್ರಿ.ಶ.೧೯೮೬ರಲ್ಲಿ ಕೆಡವಿದ ಹಳೆಯ ದೇಗುಲಕ್ಕೆ ಬದಲಾಗಿ ೧೯೯೧ರಲ್ಲಿ ನವ ದೇವಾಲಯವೊಂದು ನಿರ್ಮಿತವಾಗಿದೆ. ಕಲ್ಲುಕಟ್ಟಡ ಇದಾಗಿದ್ದು, ಗೋಪುರವನ್ನು ಹೊಂದಿದೆ. ಗರ್ಭಗೃಹದಲ್ಲಿ ಮೂರು ಅಡಿಯ ಪಾರ್ಶ್ವನೋಟದ ಹನುಮಂತನ ಇಲ್ಲವೇ ಪಾದ್ದಾರಪ್ಪನ ಮೂರ್ತಿ ಇದೆ. ಇಲ್ಲಿ ಹಾಕಿರುವ ಸ್ಮಾರಕಶಿಲೆಯಲ್ಲಿ ಈ ವಿವರಗಳಿವೆ.

ಶ್ರೀ ಆಂಜನೇಯಸ್ವಾಮಿ ದೇವಸ್ಥಾನ ಅಭಿವೃದ್ಧಿ ಸಮಿತಿ, ಪಾದ್ದಾರೆ

ಗರ್ಭಾಂಗಣ ಉದ್ಘಾಟನೆ ಮತ್ತು ನೂತನ ವಿಗ್ರಹ ಪ್ರತಿಷ್ಠಾಪನಾ ಸಮಾರಂಭ

ದಿನಾಂಕ ೨೬-೧-೧೯೯೧

ಆಶೀರ್ವಚನ ಶ್ರೀ ಶ್ರೀ ಶ್ರೀ ಅನ್ನದಾನೇಶ್ವರನಾಥ ಸ್ವಾಮಿಜಿಯವರು

ಶ್ರೀ.ಶ್ರೀ.ಶಿವಾಲ್ದಮೂರ್ತಿ ಅನ್ನದಾನ ಮಠ

ಉದ್ಘಾಟನೆ ಶ್ರೀ.ಸಿ.ನಾರಾಯಣಸ್ವಾಮಿಯವರು, ಅಧ್ಯಕ್ಷರು, ಬೆಂಗಳೂರು, ಗ್ರಾಮಾಂತರ ಜಿಲ್ಲಾ ಪರಿಷತ್

ಅಧ್ಯಕ್ಷತೆ ; ಶ್ರೀ.ಕೆ.ಎಲ್.ಶಿವಲಿಂಗೇಗೌಡರವರು ಮಾಜಿ ಶಾಸಕರು

ಅಧ್ಯಕ್ಷರು ದೇವಸ್ಥಾನ ಅಭಿವೃದ್ಧಿ ಸಮಿತಿ

ಅತಿಥಿಗಳು : ಶ್ರೀ.ಡಿ.ಕೆ.ಶವಿಕುಮಾರರವರು, ಶಾಸಕರು

ಶ್ರೀ.ಬಿ.ಎಲ್.ಲಕ್ಕೇಗೌಡರವರು, ಮಾಜಿ ಜಿಲ್ಲಾಧಿಕಾರಿಗಳು

ಶ್ರೀ.ಬಿ.ಎಲ್.ಸುಬ್ರಮಣ್ಯರವರು ಸುಪರಿಂಟೆಂಟೆಂಟ್, ಇಂಜಿನಿಯರ್ ಕೆ.ಇ.ಬಿ

ಹಾಲೇಗೌಡರ ಮಗ ವೆಂಕಟಪ್ಪ ವಿಗ್ರಹದಾನಿಗಳು ಪಾಳ್ಯ

ಬಿ.ರಂಗಸ್ವಾಮಿ

ಕಾರ್ಯದರ್ಶಿ

ದೇವಸ್ಥಾನ ಅಭಿವೃದ್ಧಿ ಸಮಿತಿ

ಅಭಿವೃದ್ಧಿ ಸಮಿತಿಯ ನೆರವಿನಿಂದ ನಿರ್ಮಾಣವಾಗಿರುವ ಹೊಸ ಕಟ್ಟಡಕ್ಕೆ ೬೦ಮತ್ತು ೩೦ ಅಡಿ ಉದ್ದ ಮತ್ತು ಅಗಲದಲ್ಲಿ ಕಲ್ಲು ಮತ್ತು ತಾರಸಿಯಿಂದ ನಿರ್ಮಾಣವನ್ನು ಮಾಡಲಾಗಿದೆ. ಸುಸಜ್ಜಿತ ಕಟ್ಟಡದ ಮೇಲೆ ಗೋಪುರವೂ ಇದ್ದು, ಗೋಪುರದ ೪ ದಿಕ್ಕುಗಳಲ್ಲಿಯೂ ಆಂಜನೇಯನು ಕೈಮುಗಿದು ಕುಳಿತು ಮತ್ತು ನಿಂತಿರುವ ಮೂರ್ತಿಗಳಿವೆ. ರಾಮಲಕ್ಷ್ಮಣರೊಡಗೂಡಿ ಕುಳಿತ ವಿಗ್ರಹವೂ ಇದೆ. ದೇವಾಲಯದ ಮುಂದೆ ೩೦ ಅಡಿ ಎತ್ತರದ ದೀಪಸ್ಥಂಭ ಮೂಲದ್ದನ್ನು ಹಾಗೆಯೇ ಉಳಿಸಿಕೊಳ್ಳಲಾಗಿದೆ. ಪಾದ್ರಿ ಮತ್ತು ಗಣಗೆಲೆ ಮರೆ ಸೇರಿರುವ ಜಗತಿ ದೇವಾಲಯದ ಮುಂದೆ ಇದೆ. ಕಡೆ ಶ್ರಾವಣದ ಗುರುವಾರ ಮುತ್ತತ್ತಿಯಲ್ಲಿ ಜಾತ್ರೆಯಾದರೆ ಅದರ ಹಿಂದಿನ ದಿನ ಅಂದರೆ ಬುಧವಾರ ಪಾದ್ದಾರೆಯಲ್ಲಿ ಜಾತ್ರೆ ಏರ್ಪಡಿಸಿರುತ್ತಾರೆ. ಅಂದು ಬೆಳಗ್ಗೆ ಕಾಡಹಳ್ಳಿಯ ಹೊಂಬೇಗೌಡರ ಕುಟುಂಬದವರಾದ ಕೆ.ಎಸ್.ಶಿವರಾಜು ಇಲ್ಲಿಗೆ ಬಂದು ಬೆಳಗ್ಗೆ ೮.೩೦ರಿಂದ ೧೧ಘಂಟೆ ಒಳಗೆ ಹೋಮ ಸುಡಿಸಿ ದೇವರ ಅಲಂಕಾರ ಹಾಗೂ ಪ್ರಸಾದ ವಿನಿಯೋಗವನ್ನು ತಮ್ಮಡಿಗಳಿಂದ ಮಾಡಿಸಿದ ಮೇಲೆ ಸಾತನೂರಿನ ಬ್ರಾಹ್ಮಣ ಅರ್ಚಕರು ಬಂದು ಶಾಸ್ತ್ರೋಕ್ತವಾಗಿ ಪೂಜೆ ಮಾಡುತ್ತಾರೆ.

ಉತ್ತಮ ಸೋಪಾನಗಳನ್ನುಳ್ಳ ತಳಿಗೆ ಮನೆಯಿಂದ ಸಿಹಿಅನ್ನ ಪ್ರಸಾದವನ್ನು ಹಿಡಿದು ತಮ್ಮಡಪ್ಪ ಛತ್ರ, ಚಾಮರ ಹಿಡಿದ ಸೇವಕರ ಸಹಾಯದಿಂದ ಹೊರಬರುತ್ತಾನೆ. ದೇವಾಲಯಕ್ಕೆ ಬಂದು ದೇವರಿಗೆ ಅರ್ಪಿಸಿ, ಮತ್ತೆ ಛತ್ರಿ, ಚಾಮರ ನಡೆಮುಡಿಗಳೊಡನೆ ತಳಿಗೆ ಮನೆಗೆ ಹಿಂದಿರುಗಿ ಬರುತ್ತಾನೆ. ಬೆಳಗಿ ತೊಳೆದಿರುವ ದೇವರ ಉತ್ಸವಮೂರ್ತಿಗೆ ಹೂವಿನ ಹಾಗೂ ಕುಂಕುಮ ಅಲಂಕಾರ ಮಾಡಿಸಿ ಛತ್ರಿ, ಚಾಮರಗಳ ಸೇವೆಯೊಡನೆ ತಳಿಗೆ ಮನೆಯಿಂದ ತರಲಾಗುತ್ತದೆ. ಆಗ ಮೊಸರನ್ನ, ಸಿಹಿಲಾಡು, ಹೆಸರಬೇಳೆ, ಪುಳಿಯೊಗರೆಗಳ ಪ್ರಸಾದ ವಿನಿಯೋಗ ನಡೆಯುತ್ತದೆ. ಅಷ್ಟರಲ್ಲಿ ಅಲಂಕೃತಗೊಂಡಿರುವ ಹುಲಿಯವಾಹನದ ಮೇಲೆ ಉತ್ಸವಮೂರ್ತಿಯನ್ನು ಇಡುತ್ತಾರೆ. ಉತ್ಸವಕ್ಕೆ ಅಣಿಯಾಗುತ್ತಾರೆ.

ಮಜ್ಜನಕ್ಕೂಗುವುದು, ದೇವಸ್ಥಾನದ ತಮ್ಮಡಿ ದೇವರ ಬಳಿ ಪೂಜೆಮಾಡಿ ಅಲ್ಲಿಂದ ಕುಂಭಗಳನ್ನು ಹಿಡಿದ ನಾರಿಯರ ಸಮೇತ ಚಾಮರವನ್ನು ಬೀಸುವ ಸೇವಕರೊಡನೆ ಕಮರಿಯಲ್ಲಿರುವ ಮಜ್ಜನ ಸೊಣೆ ಎಂಬಲ್ಲಿಗೆ ಬರುತ್ತಾನೆ. ದೇವಾಲಯದಿಂದ ತುಸು ದೂರದಲ್ಲಿ

ಸುಮಾರು ೩೦೦ ಅಡಿಗಳ ಆಳದ ಕಮರಿಯಲ್ಲಿ ಈ ಮಜ್ಜನ ಸೊಣೆ ಇದೆ. ಅಂದರೆ ಸ್ನಾನದ ಕೊಳ. ಇಳಿಯಲು ಅಲ್ಲಲ್ಲಿ ಸೋಪಾನಗಳಿವೆ. ಇಲ್ಲಿ ತಮ್ಮಡಿ ಮೂರು ಮುಳುಗನ್ನು ಮುಳುಗಿದ ಮೇಲೆ ಮಡವಾಳಿಯು ಕೆಂಪುವಸ್ತ್ರವನ್ನು ತಮ್ಮಡಿಗೆ ತೊಡಿಸುತ್ತಾನೆ. ನಡುವಿನಲ್ಲಿ ಪುಟ್ಟ ಶ್ವೇತವಸ್ತ್ರವನ್ನು ತೊಡಿಸುತ್ತಾನೆ. ನಂತರ ಜೊತೆಯಲ್ಲಿ ತಂದಿರುವ ಕುಂಭಗಳಿಗೆ ತುಳಸಿ, ಕನಕಾಂಬರ, ಮಲ್ಲಿಗೆ, ಕಾಕಡಹೂವುಗಳ ಅಲಂಕಾರ ಮಾಡುತ್ತಾರೆ. ಅಷ್ಟರಲ್ಲಿ ತಮ್ಮಡಿಗೆ ಮಲ್ಲಿಗೆ ಹಾಗೂ ತುಳಸಿ ಹಾರಗಳನ್ನು ಹಾಕುತ್ತಾರೆ. ಕರ್ಪೂರಹಚ್ಚಿ ಅಗರಬತ್ತಿಯಿಂದ ಕುಂಭಗಳಿಗೆ ಮಧ್ಯಾಹ್ನ ಒಂದು ಗಂಟೆ ಹೊತ್ತಿಗೆ ಪೂಜೆ ಮಾಡುತ್ತಾರೆ. ಕಡಲೆಪುರಿಯನ್ನು ಅರ್ಪಿಸುತ್ತಾರೆ. ಆಗ ಜಾಗಟೆ, ಓಲಗ, ತಮಟೆ, ಕಂಸಾಳೆಗಳ ವಾದನ ನಡೆಯುತ್ತದೆ. ಮಾದಿಗ ಜನಾಂಗದವರ ಪುರುಷರು ಮಲ್ಲಿಗೆಹೂವಿನ ಹಾರಗಳನ್ನು ಕೊರಳಿಗೆ ಹಾಕಿಕೊಳ್ಳುತ್ತಾರೆ. ಈ ಸಂದರ್ಭದಲ್ಲಿ ದಾಸಯ್ಯಗಳು ಹಾಗೂ ಜೋಗಯ್ಯಗಳು ಇರುತ್ತಾರೆ. ದಾಸಯ್ಯ ಜಾಗಟೆ ಬಾರಿಸಿದರೆ, ಜೋಗಯ್ಯ ಕಂಸಾಳೆ ನುಡಿಸುತ್ತಾನೆ. ಭೂಹಳ್ಳಿಯ ಗಿರಿದಾಸಪ್ಪ ಎಂಬ ಭಕ್ತ ನಂದಿಧ್ವಜಕುಣಿತ ಹಾಗೂ ಪೂಜಾಕುಣಿತದ ಕಲಾ ಸಾಮಗ್ರಿಗಳಿಗೆ ಪೂಜೆ ಮಾಡುತ್ತಾನೆ. ದೂಂತೂರಿನ ಎ.ಕೆ.ಜನಾಂಗದವರು ಓಲಗವನ್ನು ನುಡಿಸುತ್ತಾರೆ. ಈ ವೇಳೆಯಲ್ಲಿ ಪಂಜಿನಸೇವೆಗಳು ಇರುತ್ತವೆ.

ನಂತರ ತಮ್ಮಡಿಗೆ ಮಡಿವಾಳ ಸೇವಕನೋರ್ವ ಹೆಗಲ ಮೇಲೆ ಪೂರ್ಣಕುಂಭವನ್ನು ಇಡುತ್ತಾನೆ. ತಮ್ಮಡಿಯ ಜೊತೆ ನಾಲ್ವರು ನಾರಿಯರು ಕುಂಭವಿಡಿದು ಬರುತ್ತಾರೆ. ಕುಂಭವ ನಂದಿಧ್ವಜಕುಣಿತ, ಪೂಜಾಕುಣಿಗಳ ಜೊತೆ ದೇವಾಲಯಕ್ಕೆ ಸಾಗುತ್ತದೆ. ಈ ಸಮಯದಲ್ಲಿ ಅಡಿಗಡಿಗೂ ತೆಂಗಿನಕಾಯಿಗಳ ಈಡುಗಾಯಿ ಒಡೆಯುವುದು ಸಾಗುತ್ತಿರುತ್ತದೆ. ಕುಂಭವನ್ನು ತಮ್ಮಡಿಯು ದೇವಾಲಯದ ಒಳಗೆ ಗರ್ಭಗೃಹದಲ್ಲಿ ಇಡುತ್ತಾನೆ. ಇದೇ ಸಂದರ್ಭದಲ್ಲಿ ಶಾಲೆಗಳಿಂದ ಕರೆತಂದಿರುವ ವಿದ್ಯಾರ್ಥಿಗಳಿಂದ ಮುತ್ತತ್ತಿರಾಯನ ಹಾಡುಗಳಿಗೆ ನೃತ್ಯ ಸಂಯೋಜನೆಯೂ ನಡೆಯುತ್ತದೆ. ಕೋಲಾಟ, ಹನುಮಂತನವೇಷ, ಕಲೆಗಳ ಪ್ರದರ್ಶನವು ನಡೆಯುತ್ತದೆ. ಹಲವಾರು ನಾರಿಯರು ಕಲಶಗಳನ್ನು ಹೊತ್ತು ಬರುತ್ತಿರುತ್ತಾರೆ.

ಸೇವಂತಿಗೆ, ಮಲ್ಲಿಗೆ, ಗುಲಾಬಿ, ಅಲ್ಲದೇ ಚೆಂಡು ಹೂವುಗಳಿಂದ ಅಲಂಕಾರ ಮಾಡಿದ ಉತ್ಸವಮೂರ್ತಿಯನ್ನು ಹುಲಿವಾಹನದ ಮೇಲಿನ ಹಿತ್ತಾಳೆಲೋಹದ ಮಧ್ಯೆ ಇಡುತ್ತಾರೆ.

ಉತ್ಸವಮೂರ್ತಿಯಾದ ಆಂಜನೇಯನಿಗೆ ಬೆಳ್ಳಿಯ ಕಿರೀಟವಿದೆ. ಕುಂಕುಮ, ನಾಮ, ಗಂಧದ ಅಲಂಕಾರಗಳ ನಂತರ ತಮ್ಮಡಿ ಪೂಜೆ ಮಾಡುತ್ತಾನೆ. ಈ ವೇಳೆಯಲ್ಲಿ ಮಡಿವಾಳಿಯೊಬ್ಬ ಪಂಜನ್ನು ನಿವಾಳಿಸುತ್ತಾನೆ. ನಂತರ ವಾಹನವನ್ನು ಭಕ್ತರೆಲ್ಲಾ ಸೇರಿ ಎತ್ತಿ ಹೆಗಲಮೇಲೆ ಇಟ್ಟುಕೊಳ್ಳುತ್ತಾರೆ. ಅಷ್ಟರಲ್ಲಿ ಹಾಲರಬಿ ಗರ್ಭಗುಡಿಯಿಂದ ಬರುತ್ತದೆ. ಈ ಹಾಲರಬಿಗೆ ಏಳಿಗೆಹಳ್ಳಿಯ ಮುತ್ತೇಗೌಡರ ಮನೆಯಿಂದಲೇ ಮೊಸರು ಬರಬೇಕು. ಅಂದರೆ ಆದ್ಯದಲ್ಲಿ ಇವರು ಈ ಪರಿಪಾಟವನ್ನು ಬೆಳೆಸಿದ್ದರು. ಅದೇ ಈಗಲೂ ಮುಂದುವರೆದು ಕೊಂಡುಬರುತ್ತಿದೆ. ಮಾದಿಗ ಜನಾಂಗದ ಭಕ್ತರು ಮೊಸರಿನ ಗಡಿಗೆಯನ್ನು ಹೊಡೆಯಲು ಬಿದಿರನ ದೊಣ್ಣೆಗಳನ್ನು ಹಿಡಿದು ಕಾದಿರುತ್ತಾರೆ. ಮರವೊಂದಕ್ಕೆ ಮೇಲೆ ಅಡ್ಡಲಾಗಿ ಅಟ್ಟವನ್ನು ಕಟ್ಟಲಾಗಿರುತ್ತದೆ. ಇಲ್ಲಿ ತಮ್ಮಡಿ ನಿಂತು ಹಾಲು, ಮೊಸರು ಇರುವ ಗಡಿಗೆಯನ್ನು ಕಟ್ಟಿದ ದಾರದಿಂದ ಬಿಡುತ್ತಿರುತ್ತಾನೆ. ಕೆಳಗೆ ನಿಂತಿರುವ ದೊಣ್ಣೆ ಆಯುಧಾದಾರಿಗಳು ಹೊಡೆಯಲು ಹವಣಿಸುತ್ತಾರೆ. ತಮ್ಮಡಿ ತಪ್ಪಿಸುತ್ತಾನೆ. ಹೀಗೆ ಈ ಆಟ ಸಾಗುತ್ತಾ ದೊಣ್ಣೆ ಹಿಡಿದ ಭಕ್ತರು ಗಡಿಗೆಯನ್ನು ಹೊಡೆಯುವಲ್ಲಿ ಸಫಲವಾಗುತ್ತಾರೆ. ಆಗ ಮಡಿವಾಳಿಯು ಕುಂಭಾಭಿಕ್ಷೇಕ ಮಾಡುತ್ತಾನೆ. ಅರಿಶಿನದ ನೀರು, ಇದನ್ನು ಚೆಲ್ಲುತ್ತಾನೆ. ನಂತರ ಆರು ತೆಂಗಿನಕಾಯಿಗಳಿಗೆ ಕಾರಾಚನಾರಿನಿಂದ ಬಿಗಿದು ಕಟ್ಟಲಾಗಿರುತ್ತದೆ. ತುಳಸಿ ಮತ್ತು ಹೂಮಾಲೆ ಧರಿಸಿ ಬಿದಿರಿನ ದೊಣ್ಣೆ ಹಿಡಿದಿರುವ ಅಲಸೂರು, ನಾಯಕನಹಳ್ಳಿಯ ಮಾದಿಗ ಪುರುಷ ಭಕ್ತರು ನಿಂತಿರುತ್ತಾರೆ. ತಮ್ಮಡಿಯ ಕೈಗೆ ಕಾಯಿಯನ್ನು ಕೊಡುತ್ತಾರೆ. ಇವನು ಒಂದು ಕಾಯಿಯನ್ನು ಬಿಡುತ್ತಾನೆ. ಅವರಿಗೆ ಸಿಗದ ಹಾಗೆ ಎಳೆದುಕೊಳ್ಳುತ್ತಾನೆ. ಹೀಗೆ ಮೂರು ನಾಲ್ಕು ಬಾರಿ ಆದ ಮೇಲೆ ಚಚ್ಚಲು ಬಂದಿರುವ ಭಕ್ತರು ಸಫಲತೆಯನ್ನು ಕಾಣುತ್ತಾರೆ. ಆಗ ಹೊಸ ಎಳನೀರು ಕಾಯಿಯನ್ನು ತೆಗೆದುಕೊಳ್ಳುತ್ತಾನೆ. ಹೀಗೆ ಕಮರಿಯಲ್ಲಿನ ಸೋಣೆಯಲ್ಲಿಯೂ ಈ ಕ್ರೀಡೆ ಸಾಗುತ್ತದೆ. ಚಚ್ಚುವವರು ಸಫಲವಾದ ನಂತರ ದೇವರ ಸ್ಮರಣೆಯಿಂದ ತೆಂಗಿನಕಾಯಿ ಹೊಡೆದು ಕೈಮುಗಿಯುತ್ತಾರೆ. ವಾಹನವು ದೇವಾಲಯದತ್ತ ಹಿಂದಿರುಗುತ್ತದೆ. ಈ ವೇಳೆಯಲ್ಲಿ ವಾಹನದ ಕೆಳಗೆ ಭಕ್ತರು ಮಲಗಿ ಆಶೀರ್ವಾದ ಪಡೆಯುತ್ತಾರೆ. ಹರಕೆ ಹೊತ್ತ ಭಕ್ತರು ಬಾಳೆಹಣ್ಣು, ದವನವನ್ನು ಎಸೆಯುತ್ತಾರೆ. ದೇವಾಲಯದತ್ತ ಹಿಂದಿರುಗಿದ ವಾಹನವನ್ನು ದೇವಾಲಯದ ಮುಂದೆ ಇಡುತ್ತಾರೆ.

ಈ ಜಾತ್ರೆಯಲ್ಲಿಯೂ ಎಲ್ಲಾ ಜಾತಿಯವರೂ ತಮ್ಮ ವೃತ್ತಿಗನುಗುಣವಾಗಿ ಸೇವೆಗಳನ್ನು ಮಾಡುತ್ತಾರೆ. ಕಾಡಹಳ್ಳಿ, ಭೂಹಳ್ಳಿ, ಹಲಸೂರು, ಸಾತನೂರು, ದೂಂತೂರು, ಕುಂಚಿಟಿಗರಪಾಳ್ಯ ಮುರಲೆತಿಮ್ಮನದೊಡ್ಡಿಯ ಜನ ಇದರಲ್ಲಿ ಪಾಲ್ಗೊಳ್ಳುತ್ತಾರೆ. ಇವರೆಲ್ಲಾ ಸೇರಿ ಮಧ್ಯಾಹ್ನ ಊಟದ ವ್ಯವಸ್ಥೆಯನ್ನು ಮಾಡಿರುತ್ತಾರೆ. ಸುಮಾರು ಎರಡು ಸಹಸ್ರ ಮಂದಿ ಭೋಜನವನ್ನು ಸವಿಯುತ್ತಾರೆ. ವಾಹನದಲ್ಲಿರುವ ಉತ್ಸವಮೂರ್ತಿಯನ್ನು ಸಾಕಷ್ಟು ಭಕ್ತರ ಪೂಜೆಯ ನಂತರ ದೇವಾಲಯದೊಳಗೆ ಇರಿಸಲಾಗುತ್ತದೆ. ಇಲ್ಲಿಗೆ ಜಾತ್ರೆ ಮುಕ್ತಾಯವಾಗುತ್ತದೆ. ಹುಲಿವಾಹನದಲ್ಲಿ ಉತ್ಸವಮೂರ್ತಿ ಉತ್ಸವ ಜರಗುವಾಗ ಮುತ್ತತ್ತಿರಾಯನ ಮೇಲೆ ಜನಪದ ಗೀತೆಗಳ ಗಾಯನವು ಮಾದಿಗ ಜನಾಂಗದ ಮಹಿಳೆಯರಿಂದ ನಡೆಯುತ್ತಿರುತ್ತದೆ. ಜೊತೆಗೆ ಹಲವು ಪುರುಷ ಭಕ್ತರು ಗೋವಿಂದವನ್ನು ಇಕ್ಕುತ್ತಿರುತ್ತಾರೆ. ವೈಷ್ಣವಮತದ ಒಂದು ಅಂಗವಾಗಿ ಪ್ರಾರಂಭವಾದ ಇಲ್ಲಿನ ಆಂಜನೇಯ ಆರಾಧನೆಯು ಈಗ ಬೃಹತ್ತಾಗಿ ಬೆಳೆದಿದೆ. ಮುಂದೆಯೂ ಬೆಳೆಯುತ್ತದೆ. ಭಕ್ತರು ಯಾವುದೇ ಶುಭಕಾರ್ಯವನ್ನು ಮಾಡುವ ಮುನ್ನ ಇಲ್ಲಿನ ದೇವರ ಮುಂದೆ ಕುಳಿತು ಹೂವಿನ ಅಣತಿಯನ್ನು ಪಡೆದು ಮುಂದೆ ಹೆಜ್ಜೆ ಇಡುತ್ತಾರೆ. ಮುತ್ತತ್ತಿಯ ಮುತ್ತತ್ತಿರಾಯನ ಭಾಗವಾಗಿ ಸಾಗಿಬಂದಿರುವ ಪಾದ್ದಾರೆಯಪ್ಪ ಭಕ್ತರಿಗೆ ಮುತ್ತತ್ತಿರಾಯನೇ ಅಲ್ಲದೇ ಬೇರೆಯಲ್ಲ.

ಈ ಜಾತ್ರೆಯಲ್ಲಿ ಅಲ್ಲಲ್ಲಿ ಕಡಲೆಪುರಿ, ಬತ್ತಾಸು, ಸಿಹಿತಿಂಡಿ, ಕಾಫಿ, ಟೀ, ಬೊಂಡದ ಅಂಗಡಿಗಳು, ಆಟಿಕೆವಸ್ತುಗಳು, ಹಣ್ಣುಗಳ ಅಂಗಡಿಗಳು ಅಲ್ಲಲ್ಲಿ ಇದ್ದು ವ್ಯಾಪಾರಿ ವರ್ಗದವರು ಒಂದು ದಿನದ ಮಟ್ಟಿಗೆ ನಾಲ್ಕಾರು ಕಾಸನ್ನು ಮಾಡಿಕೊಳ್ಳುತ್ತಾರೆ. ಇಲ್ಲಿಂದ ಹೊರಡುವ ಭಕ್ತ ಸಮೂಹವು ದೇವರಿಗೆ ಗೋವಿಂದ ಇಡುತ್ತಾ ಮುತ್ತತ್ತಿವರೆಗೆ ನಡೆದೋ ಅಥವಾ ಬಸ್ಸಿನಲ್ಲಿ ಕುಳಿತೋ ಸಾಗುತ್ತಾರೆ. ಈ ಬಗೆಯ ಯಾತ್ರೆಯ ವೇಳೆ ಹಲವು ಮಂದಿ ಕಾಡಾನೆಗಳ ತುಳಿತಕ್ಕೆ ಒಳಗಾಗಿ ಸಾವನ್ನಪ್ಪಿರುವ ಹಲವಾರು ಉದಾಹರಣೆಗಳು ಇವೆ. ಇದೇ ದಿನ ಮುತ್ತತ್ತಿಯಲ್ಲಿ ಉಪವಾಸ ಅಂದರೆ ತಮ್ಮಡಿಗಳು ಮಡಿಯಿಂದ ದೇವರಿಗೆ ಪೂಜೆಯನ್ನು ಸಲ್ಲಿಸಿ ಅಲ್ಪ ಆಹಾರವಾದ ಹಾಲು ಅಥವಾ ಹಣ್ಣಿನರಸವನ್ನು ಮಾತ್ರ ಸೇವಿಸುತ್ತಾರೆ.

## ೫.೭ ಕಂಬದರಾಯನಗುಡಿ

ಕಂಬದರಾಯ ಎಂದರೆ ಮುತ್ತತ್ತಿರಾಯ ಎಂದು ಕರೆಸಿಕೊಳ್ಳುವ ಆಂಜನೇಯನೇ ಆಗಿದ್ದಾನೆ. ಈ ಕಂಬದರಾಯನಗುಡಿಯು ಬಸವನಬೆಟ್ಟ ಅರಣ್ಯದಲ್ಲಿಯೇ ಇದ್ದು ಸಂಬಾಪುರ ಹಾಗೂ ಊಳ್ಯದ ಬಳಿಯಿದೆ. ಪ್ರಸ್ತುತ ರಾಮನಗರ ಜಿಲ್ಲೆಯ ಕನಕಪುರ ತಾಲ್ಲೂಕಿಗೆ ಸೇರಿದೆ. ಹರಿಹರ ಗ್ರಾಮದಿಂದ ಹಾಗೂ ಪಾದ್ದಾರೆಗಳಿಂದ ಇಲ್ಲಿಗೆ ತಲುಪಲು ಕಾಲುದಾರಿಗಳಿವೆ.

"ಕಂಬದಪ್ಪನಗುಡಿ, ಕಂಬದರಾಯನಗುಡಿ[೭]" ಎಂದು ಕರೆಯುವುದು ಗ್ರಾಮೀಣ ಭಕ್ತರ ವಾಡಿಕೆಯಾಗಿದೆ. ವೈಷ್ಣವ ದೈವವಾದ ಹನುಮಂತನನ್ನು ಎರಡು ಅಡಿ ಎತ್ತರದ ಕಂಬದಲ್ಲಿ ಕೆತ್ತಿರುವುದರಿಂದ ಕಂಬದರಾಯ, ಕಂಬದ ಅಪ್ಪ ಎಂದು ಅರ್ಥೈಸಲಾಗಿದೆ. ಬಂಡೆಯ ತುದಿಯಲ್ಲಿ ಮರ, ಕಲ್ಲು, ಮಣ್ಣು, ಸಿಮೆಂಟ್ ಷೀಟುಗಳ ಸಹಾಯದಿಂದ ತೀರ ಸಾಧಾರಣ ಕಟ್ಟಡವನ್ನು ನಿರ್ಮಿಸಲಾಗಿದೆ. ಆದರೆ ದೇವಾಲಯದಲ್ಲಿ ಸಾಂಸ್ಕೃತಿಕ, ಧಾರ್ಮಿಕ ಸಂಪತ್ತು ಅಡಗಿದೆ ಎಂದರೆ ಆಶ್ಚರ್ಯವಾಗದೇ ಇರದು. ಆರಂಭದಲ್ಲಿ ಕಕ್ಕೆಮರದ ಮುತ್ತತ್ತಿರಾಯನು ಮೂರ್ತಿಯೇ ಗುಡಿಸಲಿನ ಹೊದಿಕೆಯಿದ್ದಿತು. ಕ್ರಮೇಣ ಪರಿವರ್ತನೆಯಾಗಿರುವುದಾಗಿ ಕ್ಷೇತ್ರಕಾರ್ಯದ ವೇಳೆಯಲ್ಲಿ ತಿಳಿದುಬಂದಿದೆ.

ಬಳಿಯ ಸೂಳ್ಯದ ಸೋಲಿಗರು ಈ ದೇವರನ್ನು ಪೂಜಿಸುತ್ತಾರಾದರೂ ಮುತ್ತತ್ತಿಯ ಮುತ್ತತ್ತಿರಾಯನಿಗೆ ನಡೆದುಕೊಳ್ಳುವ ಆದಿದ್ರಾವಿಡ ಜನಾಂಗದವರು ಸಹ ಈ ದೇವರಿಗೂ ವಿಶೇಷ ಪೂಜೆ ಸಲ್ಲಿಸುತಾರೆ. ಶ್ರಾವಣಮಾಸದಲ್ಲಿ ಮುತ್ತತ್ತಿಯಲ್ಲಿ ನಡೆಯುವ ಜಾತ್ರೆಯ ನಾಲ್ಕು ತಿಂಗಳ ನಂತರ ಇಲ್ಲಿ ಪುಟ್ಟ ಪ್ರಮಾಣದ ಜಾತ್ರೆ ನಡೆಯುತ್ತದೆ. ಸುಮಾರು ಒಂದು ಸಾವಿರದ ಜನರು ಈ ಸಮಯದಲ್ಲಿ ದೇವರಿಗೆ ಕುರಿ, ಕೋಳಿಗಳ ಬಲಿಯ ಕಾರ್ಯವು ನಡೆಯುತ್ತದೆ. ಜಾತ್ರೆಯ ಅಂಗವಾಗಿ ಮುತ್ತತ್ತಿ ಮತ್ತು ಪಾದ್ದಾರೆಗಳಲ್ಲಿ ನಡೆಯುವಂತೆ ಕಾಯಿಬಿಡುವುದು, ಹಾಲರಬಿಸೇವೆ, ಕ್ರೀಡೆಗಳು ಜರುಗುತ್ತವೆ. ಇನ್ನುಳಿದಂತೆ ಜಾತ್ರೆಯ ವೈಖರಿಯೆಲ್ಲ ಮುತ್ತತ್ತಿಯಲ್ಲಿ ನಡೆದಂತೆ ಇರುತ್ತದೆ. ದೇವರಿಗೆ ಪ್ರಿಯವಾದ ಹುಲಿವಾಹನವು ಸಹ ಇಲ್ಲಿದ್ದು, ಹುಲಿವಾಹನದ ಮೇಲೆ ಉತ್ಸವವು ನಡೆಯುತ್ತದೆ. ಪುರುಷ ಭಕ್ತರು ದೇವರ ಘೋಷಣೆಗಳನ್ನು ಕೂಗಿದರೆ ಸ್ತ್ರೀಯರು ಜನಪದ ಗೀತೆಗಳನ್ನು

ಹಾಡುವುದರ ಮೂಲಕ ದೇವರನ್ನು ಪ್ರೀತಿಯಿಂದ ಆರಾಧಿಸುತ್ತಾರೆ. ಲೋಹದಿಂದ ಮಾಡಿರುವ ಮುತ್ತತ್ತಿರಾಯನಾದ ಆಂಜನೇಯನಮೂರ್ತಿಯು ಇಲ್ಲಿದ್ದು, ಇದನ್ನು ಉತ್ಸವಕ್ಕಾಗಿ ಬಳಸುತ್ತಾರೆ. ಜೊತೆಗೆ ಚತುರ್ಭುಜವಿಷ್ಣು, ಶ್ರೀದೇವಿ, ಭೂದೇವಿಯರೇ ಅಲ್ಲದೆ ಕಲ್ಲಿನಿಂದ ಮಾಡಿರುವ ವಿಷ್ಣುಮೂರ್ತಿ, ವೇಣುಗೋಪಾಲ, ಆಂಜನೇಯ ಮತ್ತು ಗಣೇಶನ ಮೂರ್ತಿಗಳಿವೆ.

"ವಾಸ್ತವವಾಗಿ ಪ್ರಾಗ್ಯೈತಿಹಾಸಿಕ ಕಾಲದ[೮]" "ಮಾನವನ ಒಡನಾಟದ ಸ್ಥಳವಾದ ಇದು ವಿಕಾಸವನ್ನು ಕಂಡು ಪ್ರಸಿದ್ಧತೆಯನ್ನು ಪಡೆದುಕೊಂಡಿದೆ. ಇಲ್ಲಿಯೇ ಇರುವ ಹನ್ನೊಂದು ಸಾಲುಗಳ ಶಾಸನದ[೯]" ಆರು ಸಾಲುಗಳನ್ನು ಸುಲಭವಾಗಿ ಓದಬಹುದಾಗಿದ್ದು ಅದು ಇಂತಿದೆ

೧. ವಿಕ್ರಮ ಸಂವತ್ಸರದ ಕಾರ್ತಿಕ ಶುದ್ದ(ಕ)

೨. ಬ ಸಮುದ್ರದ ಮಲ್ಲಪ್ಪನ ಮಕ್ಕಳು

೩. ಮರಯದೆವಪ್ಪ ಚಿಕ್ಕದೇವಪ್ಪ ಮರಪ್ಪ

೪. ಸದೆಯ ಸಂಣಪ್ಪನ ಮಗ ದೊಡದೆ

೫. ವಪ್ಪ ನಿಲಿಸಿದ ವಿಜಮಲೆಯ ಕಂ

೬. ಲ ಕಂಬ ದೆಒಜನ ಮಗ ಕೆಂಪೋಜನ
ಮಕ್ಕಳು

ಈ ಶಾಸನದ ಅನುಗುಣವಾಗಿ ನೋಡಿದರೆ ದೊಡ್ಡದೇವಪ್ಪನೆಂಬುವವನು ಈ ಸ್ಥಳದಲ್ಲಿ ವಿಜಯಮಾಲೆಯ ಕಂಬವೊಂದನ್ನು ನಿಲ್ಲಿಸಿದ ವಿಷಯ ತಿಳಿಸುತ್ತದೆ. ಈ ವಿಜಯಮಾಲೆ ಕಂಬವು ಈಗಲೂ ತುಂಡು ತುಂಡಾಗಿ ಬಿದ್ದಿರುವುದನ್ನು ಕಾಣಬಹುದಾಗಿದೆ. ಆದರೆ ಈ ನಿರ್ಮಾಣ ಯಾವ ವಿಜಯಕ್ಕಾಗಿ ಎಂಬುದು ತಿಳಿದುಬಂದಿಲ್ಲ. ಇಲ್ಲಿಯೇ ಪುಟ್ಟ ನೀರಾಸರೆಯ ದೊಣೆ ಒಂದಿದ್ದು ಇಲ್ಲಿನ ಚಟುವಟಿಕೆಗಳಿಗೆ ಸಹಕಾರಿಯಾಗಿದೆ. ವಿಶಾಲದವಾದ ಬಂಡೆಯ ಬುಡದಲ್ಲಿ ಆಯಾಕಟ್ಟಿನ ಸ್ಥಳ ಇರುವುದರಿಂದ ಆದಿ ಮಾನವನ ಒಡನಾಟ ಇಲ್ಲಿ ಅಧಿಕವಾಗಿ ನಡೆದಿದೆ ಎಂದು ನಿರ್ಧರಿಸಬಹುದಾಗಿದೆ. ಮುತ್ತತ್ತಿ ಕ್ಷೇತ್ರದಂತೆ ಅಭಿವೃದ್ಧಿ ಕಾಣಬೇಕಾಗಿರುವ ಈ ಕ್ಷೇತ್ರಕ್ಕೂ, ಮುತ್ತತ್ತಿ ಕ್ಷೇತ್ರಕ್ಕೂ ಅವಿನಾಭಾವ ಸಂಬಂಧವಿರುವುದು ಇಲ್ಲಿ ಗಮನಾರ್ಹವಾದ ಅಂಶವಾಗಿದೆ.

## ೫.೮ ವೀರಭದ್ರನಮೂರ್ತಿ

ಶೈವದೈವಗಳ ಕುರಿತು ಇರುವ ಭಕ್ತಿ, ಶ್ರದ್ಧೆ, ನಂಬಿಕೆಗಳಿಂದಾಗಿ ಮುತ್ತತ್ತಿ ಪರಿಸರದ ಬಸವನಬೆಟ್ಟ ಅರಣ್ಯದಲ್ಲಿ ಗ್ರಾಮೀಣ ಭಕ್ತ ಸಮೂಹವು ವೀರಭದ್ರನಮೂರ್ತಿ ಸ್ಥಾಪಿಸಿ ಅದಕ್ಕೊಂದು ವೇದಿಕೆ ಮತ್ತು ಮಂಟಪಗಳನ್ನು ನಿರ್ಮಿಸಿದೆ. ಇಲ್ಲಿ ಯಾವುದೇ ಪ್ರಸಿದ್ಧವಾದ ಊರು ಇರದೇ ಇರುವುದು ಗಮನಾರ್ಹವಾಗಿದೆ. ಆದರೂ ವೀರಭದ್ರನಮೂರ್ತಿ ಸ್ಥಾಪನೆಗೆ ಕಾರಣವೆಂದರೆ ಅರಣ್ಯ ಚಟುವಟಿಕೆಗಳನ್ನೇ ತಮ್ಮ ಜೀವನಾಧಾರವನ್ನಾಗಿ ಮಾಡಿಕೊಂಡಿದ್ದ ಭಕ್ತ ಜನರ ಶ್ರದ್ಧೆಯೇ ಆಗಿದೆ. ಸಾರಿಗೆಸಂಪರ್ಕ ಸುವ್ಯವಸ್ಥಿತವಾಗಿರದ ಸಮಯದಲ್ಲಿ ಮುತ್ತತ್ತಿಯ ಮುತ್ತತ್ತಿರಾಯನ ದರ್ಶನ ಪಡೆಯಲು ಸಾಗುತ್ತಿದ್ದ ಭಕ್ತರು ಇಲ್ಲಿ ಹೂ, ತೆಂಗಿನಕಾಯಿ, ಬಾಳೆಹಣ್ಣು, ಅಗರಬತ್ತಿ, ಕರ್ಪೂರ ಅರ್ಪಿಸಿ ಪೂಜಿಸಿಯೇ ಮುಂದೆ ಸಾಗುತ್ತಿದ್ದರು. "ಕನಕಪುರದ ತಾಲ್ಲೂಕಿನ ಸಾತನೂರು ಮಾರ್ಗವಾಗಿ ಮುತ್ತತ್ತಿಗೆ ಹೋಗುವ ದಾರಿಯಲ್ಲಿ ನಾಗನಮಡುವು ಎಂಬ ಸ್ಥಳವಿದೆ. ಈ ಸ್ಥಳದ ಬಲ ದಂಡೆಯ ಮೇಲೆ ಪ್ರಾಚೀನವಾದ ಒಂದು ಚಿಕ್ಕದಾದ ಕಲ್ಲಿನಮಂಟಪದಲ್ಲಿ ವೀರಭದ್ರನ ಒಂದು ಕಲ್ಲಿನ ವಿಗ್ರಹವಿದೆ. ನಾಲ್ಕು ಕೈಗಳನ್ನು ಹೊಂದಿದ್ದು, ಪ್ರತಿ ಕೈಯಲ್ಲಿ ಆಯುಧಗಳಿವೆ. ಬಲದ ಹಿಂದಿನ ಕೈಯಲ್ಲಿ ಬಾಣವಿದೆ. ಎಡದ ಮುಂದಿನ ಕೈಯಲ್ಲಿ ಗುರಾಣಿ ಮತ್ತು ಎಡದ ಹಿಂದಿನ ಕೈಯಲ್ಲಿ ಬಿಲ್ಲನ್ನು ಹಿಡಿದಿರುವಂತೆ ಚಿತ್ರಿಸಲಾಗಿದೆ. ಶಿರದಲ್ಲಿ ಮುಕುಟವಿದ್ದು, ಸೌಮ್ಯಸ್ವಭಾವದ ಮುಖ ಲಕ್ಷಣವಿದೆ[೧೦]"

ಬಹುತೇಕವಾಗಿ ವೀರಭದ್ರನ ವಿಗ್ರಹಗಳು ರೌದ್ರ ಮತ್ತು ಉಗ್ರರೂಪವನ್ನುಳ್ಳದ್ದಾಗಿರುತ್ತದೆ. ಆದರೆ ಈ ವಿಗ್ರಹ ಸೌಮ್ಯಸ್ವಭಾವದಿಂದಿರುವುದು ಒಂದು ವಿಶೇಷವಾಗಿದೆ. ಈ ವಿಗ್ರಹದಲ್ಲಿ ಹಣೆಯ ಮೇಲಿನ ಮೂರನೇಯ ಕಣ್ಣನ್ನು ಗುರುತಿಸಲು ಕಷ್ಟಕರವಾಗಿದೆ. ೧೨ನೇ ಶತಮಾನದಿಂದ ವೀರಭದ್ರನ ಆರಾಧನೆ ಚುರುಕುಗೊಂಡಿದ್ದಾದರಿಂದ ಆ ಅವಧಿಯಲ್ಲಿ ಈ ವಿಗ್ರಹದ ನಿರ್ಮಾಣವಾಗಿದೆ. ಈ ದೃಷ್ಟಿಯಿಂದ ಈ ವೀರಭದ್ರನ ವಿಗ್ರಹದ ಪ್ರಾಚೀನತೆಯನ್ನು ಕ್ರಿ.ಶ.ಸುಮಾರು ೧೨ನೆಯ ಶತಮಾನದ ಅಂತ್ಯವೆಂದು ನಿರ್ಧರಿಸಬಹುದು. ಶೈವಧರ್ಮದ ಈ ಮೂರ್ತಿ ಸಾತನೂರಿನ ಕಡೆಯ ರಸ್ತೆ ಸುವ್ಯವಸ್ಥೆಯು ಮತ್ತು ಅಗಲವು ಆದುದರಿಂದ ಸಾತನೂರಿನ ವೈದ್ಯರೊಬ್ಬರಿಂದ ಸ್ಥಾನಾಂತರವಾಗಿದೆ. ಕೇವಲ ಮಂಟಪದ ಅವಶೇಷ ಮಾತ್ರ ಉಳಿದಿದೆ.

## ೫.೯ ಸೋಮನಕೆರೆಗುಡಿ

ಸೋಮನಕೆರೆಗುಡಿ ಎಂಬುದು ಸಾತನೂರಿನ ಮಾರ್ಗವಾಗಿ ಮುತ್ತತ್ತಿಗೆ ಪ್ರಯಾಣಿಸುವಾಗ ಭೂಹಳ್ಳಿಯ ನಂತರ ಸಿಗುವುದೇ ಆಗಿದೆ. ಇಲ್ಲಿ ಜನವಸತಿ ಯಾವುದು ಇಲ್ಲ. ಬಸವನಬೆಟ್ಟದ ಅರಣ್ಯ ಪ್ರಾರಂಭವಾಗುವುದು ಇಲ್ಲಿಂದಲೇ. ಆದುದರಿಂದ ಇಲ್ಲೊಂದು ಆಂಜನೇಯನ ಪುಟ್ಟ ಗುಡಿಯೊಂದನ್ನು ಕಟ್ಟಿದ್ದಾರೆ. ಒಳಗೆ ಮೂರ್ತಿಯಿದ್ದು, ಉತ್ಸವಮೂರ್ತಿಯು ಇದೆ. ಜೊತೆಗೆ ಮುತ್ತತ್ತಿರಾಯನಿಗೆ ಇರುವಂತೆ ಹುಲಿಯವಾಹನವು ಸಹ ಇದೆ. ಪ್ರತಿದಿನವು ಭೂಹಳ್ಳಿಯ ಅರ್ಚಕರೊಬ್ಬರು ಬಂದು ಪೂಜಿಸುವರು. ಶನಿವಾರಗಳಲ್ಲಿ ವಿಶೇಷಪೂಜೆ. ಆಗ ಸುತ್ತಮುತ್ತಲ ಗ್ರಾಮಗಳಿಂದ ಅಪಾರವಾಗಿ ಭಕ್ತಾದಿಗಳು ಬರುತ್ತಾರೆ. ಮಹಿಳೆಯರು ಈ ದೇವರನ್ನು ಕುರಿತು ಮತ್ತು ಮುತ್ತತ್ತಿರಾಯನನ್ನು ಕುರಿತು ಜನಪದ ಗೀತೆಗಳನ್ನು ಹಾಡುತ್ತಾರೆ. ಸ್ವಾಮಿಯಕೆರೆ ಎಂಬುದು ಸ್ವಾಮನಕೆರೆ, ಸೋಮನಕೆರೆ ಎಂದಾಗಿದೆ. ಬಳಿಯಲ್ಲಿ ಕೆಂಪುನೀರಿನ ಪುಟ್ಟಕೆರೆಯಿದ್ದು, ದೇವಾಲಯಕ್ಕೆ ಆಸರೆಯಾಗಿದೆ. ಜಾತ್ರಾ ಸಂದರ್ಭದಲ್ಲಿ ಭಕ್ತರು ಮೊದಲು ಪೂಜೆಯನ್ನು ಸಲ್ಲಿಸಿ ಹೊರಡುತ್ತಿದ್ದುದರಿಂದ ಅಂಗಡಿಗಳು ತೆರೆಯುತ್ತಿದ್ದವು. ಈಗ ವಾಹನ ಸೌಕರ್ಯದಿಂದ ಪ್ರಯಾಣಿಸುವವರಾದ್ದರಿಂದ ಇಲ್ಲಿ ವಾಹನವನ್ನು ನಿಲ್ಲಿಸಿ ಅರ್ಚಕರು ಸಲ್ಲಿಸಿದ ಪೂಜೆಯನ್ನು ಸ್ವೀಕರಿಸಿ ಕಾಣಿಕೆ ಅರ್ಪಿಸುತ್ತಾರೆ. ಆ ಸಮಯದಲ್ಲಿ ದೇವರ ಸ್ಮರಣೆಯನ್ನು ಮಾಡುತ್ತಾರೆ. ವಿಧವಿಧವಾದ ಪ್ರಕಾರವಾಗಿ ಮುತ್ತತ್ತಿರಾಯನನ್ನು ಕೂಗಿ ಕರೆಯುತ್ತಾರೆ.

ಇಲ್ಲಿಯೇ ಗುಡಿಯ ಮುಂಭಾಗದಲ್ಲಿ "ಪುಟ್ಟ ವೀರಗಲ್ಲೊಂದನ್ನು ಇರಿಸಿದ್ದು, ಇದು ಒಂದು ಅಡಿ ಎತ್ತರ ಮತ್ತು ಅಷ್ಟೇ ಅಗಲವನ್ನು ಹೊಂದಿದೆ. ಸತಿಪತಿಯರ ಚಿತ್ರಣವಿದ್ದು, ವೀರನು ಖಡ್ಗ, ಗುರಾಣಿ ಹಿಡಿದಿದ್ದಾನೆ. ಅಂದರೆ ಇಲ್ಲಿ ನಡೆದ ಕಾದಾಟದಲ್ಲಿ ಶತ್ರುಗಳಿಂದ ವೀರನು ಕೊಲ್ಲಲ್ಪಟ್ಟಿದ್ದು, ಈತನ ಸತಿಯು ಚಿತೆ ಏರಿದ್ದಾಳೆ.[೧೧]" ಈ ದೃಷ್ಟಿಯಿಂದ ಇದೊಂದು ಐತಿಹಾಸಿಕ ಘಟನೆಯ ಸ್ಥಳವು ಆಗಿದೆ. ಕ್ರಿ.ಶ.ಸುಮಾರು ೧೬ನೆಯ ಶತಮಾನಕ್ಕೆ ಸೇರುವ ಈ ವೀರಗಲ್ಲಿನ ಕುರುಹುವಿನಿಂದಾಗಿ ಈ ದೇವಾಲಯ ಕ್ರಿ.ಶ.ಸುಮಾರು ೧೫ನೆಯ ಶತಮಾನದಿಂದಲೆ ಪ್ರಸಿದ್ಧಿಗೆ ಬಂದಿದೆ ಎಂದು ನಿರ್ಧರಿಸಬಹುದಾಗಿದೆ

## ಅಡಿಟಿಪ್ಪಣಿಗಳು

೧. ಕೆ.ಅನಂತರಾಮು ; ಸಕ್ಕರೆಸೀಮೆ, ಅನಂತಪ್ರಕಾಶನ, ಮೈಸೂರು, ಪುಟ-೨೩೪, ೧೯೮೨

೨. ಮುತ್ತುರಾಜು ; ಮಳವಳ್ಳಿ ತಾಲ್ಲೂಕಿನ ನವಶೋಧಿತ ಪ್ರಾಚ್ಯಾವಶೇಷಗಳು, ಇತಿಹಾಸ ದರ್ಶನ, ಪುಟ-೨೧,

೩. ಕೆ.ಅನಂತರಾಮು ;ಪೂರ್ವೋಕ್ತ, ಪುಟ-೨೩೨,

೪. ಪಂಡಿತ.ಮ.ಮಲ್ಲಪ್ಪ ; ಓರಗಲ್ಲುಸೂರೆ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ಪುಟ-೬೭, ೧೯೭೯

೫. ೬.ಕೆ.ಅನಂತರಾಮು ; ಪೂರ್ವೋಕ್ತ ಪುಟ-೨೧೯,

೭ ಮುತ್ತುರಾಜು ; ಐದು ಶತಮಾನಗಳ ಇತಿಹಾಸದ ಸಂಬಾಪುರದ ಕಂಬದರಾಯನಗುಡಿ, ಹೊಸದಿಗಂತ, ಪುಟ-೩, ೩-೨-೧೯೯೮

೮. ಮುತ್ತುರಾಜು ; ಬಸವನಬೆಟ್ಟ ಅರಣ್ಯದಲ್ಲಿ ಪ್ರಾಗೈತಿಹಾಸಿಕ ಅವಶೇಷಗಳ ಪತ್ತೆ, ಕನ್ನಡಪ್ರಭ, ಪುಟ-೫, ೪-೧೧-೧೯೯೭

೯. ಮುತ್ತುರಾಜು ; ಸಂಬಾಪುರ ಪ್ರಾಗೈತಿಹಾಸಿಕ ಕಾಲದಿಂದ (ಸುಮಾರು ಕ್ರಿಸ್ತ.ಪೂರ್ವ೨೦೦೦) ಇಂದಿನವರೆಗೆ ಒಂದು ಶೋಧನೆ, ಇತಿಹಾಸ ದರ್ಶನ, ಸಂಪುಟ-೧೫, ೨೦೦೦

೧೦.ಮುತ್ತುರಾಜು ; ಪ್ರಾಚೀನವೀರಭದ್ರ ವಿಗ್ರಹಪತ್ತೆ, ಪ್ರಜಾವಾಣಿ, ಪುಟ-೫, ೬-೧೨-೧೯೯೬

೧೧.ಮುತ್ತುರಾಜು ; ಇತಿಹಾಸ ದರ್ಶನ, ಸಂಪುಟ-೨೩, ಪುಟ-೯, ೨೦೦೮

## ಅಧ್ಯಾಯ-೬

## ಮುತ್ತತ್ತಿರಾಯನ ದೇವಾಲಯದ ಉಗಮ, ವಿಕಾಸ ಮತ್ತು ಆರಾಧನೆ

ಮುತ್ತತ್ತಿ ಸ್ಥಳದಲ್ಲಿ ಆರಂಭವಾದ ಆಂಜನೇಯನಗುಡಿ, ಮುತ್ತತ್ತಿರಾಯನಗುಡಿ ಎಂದೇ ಪ್ರಚಲಿತಕ್ಕೆ ಬಂದಿತ್ತು. ಮಾದಿಗ ಜನಾಂಗದ ಕಾಳದಾಸನೆಂಬುವನ ಪ್ರಯತ್ನದಿಂದ ಗಂಗರಾಜನೆಂಬ ಪಾಳೇಗಾರನ ನೆರವಿನಿಂದ ಗುಡಿ ನಿರ್ಮಾಣವನ್ನು ಪಡೆಯಿತು. ಆರಂಭದಲ್ಲಿ ಕಕ್ಕೆಸೊಪ್ಪಿನ ಗುಡಿಸಲಿನಲ್ಲಿ ಗುಡಿನಿರ್ಮಾಣವಾಗಿದ್ದು ತದನಂತರ ಕಕ್ಕೆಮರದ ಮುತ್ತತ್ತಿರಾಯನಮೂರ್ತಿ ಮತ್ತು ಮರದ ತೊಲೆಗಳುಳ್ಳ ಇಟ್ಟಿಗೆಯ ದೇವಾಲಯವನ್ನು ಹೊಂದಿದ್ದಿತ್ತು. ಕ್ರಿ.ಶ.ಸುಮಾರು ೧೯೭೨ರ ವೇಳೆಗೆ ದೇವಾಲಯದ ಗರ್ಭಗುಡಿಯ ಪುನರ್ ನವೀಕರಣ ಮಾಡಿ ದೇಗುಲಕ್ಕೆ ತಗಡಿನಶೀಟ್‌ಗಳ ಹೊದಿಕೆಯನ್ನು ಹಾಕಿಸಲಾಯಿತು. ತದನಂತರ ಕ್ರಿ.ಶ.ಸುಮಾರು ೧೯೮೬ರ ತನಕ ಇದೇ ಮುಂದುವರೆದು ಕಲ್ಲುಕಟ್ಟಡದ ಸುಸಜ್ಜಿತ ದೇವಾಲಯದ ನಿರ್ಮಾಣವನ್ನು ಕಂಡಿತು. ೧೯೮೬ರ ಪೂರ್ವದಲ್ಲಿದ್ದ ದೇವಾಲಯದಲ್ಲಿನ ಮರದತೊಲೆಗಳು ಅದರಲ್ಲಿ ಬಿಡಿಸಿದ ಹೂವು, ಎಲೆ, ಬಳ್ಳಿ, ಜ್ಯಾಮಿತಿಯಾಕಾರದ ಚಿತ್ರಗಳು ಇವುಗಳನ್ನು ಅಲ್ಲಿ ಕಾಣಬಹುದಾಗಿದೆ. ಗರ್ಭಗುಡಿ ನಿರ್ಮಾಣದ ವೇಳೆ ಅನೇಕ ಚಿತ್ರ ಮತ್ತು ಶಾಸನದ ಕಲ್ಲುಗಳು ಮಣ್ಣಿನಲ್ಲಿ ಮುಚ್ಚಿಹೋಗಿವೆ ಎಂಬ ತಮ್ಮಡಿಗಳ ಹೇಳಿಕೆ ಇಲ್ಲಿ ಗಮನಾರ್ಹ. ಈಗ ಉಳಿದು ಬಂದಿರುವ ಅಲ್ಲಿನ ನಾಲ್ಕು ವೀರಗಲ್ಲುಗಳ ಜೊತೆ ಅಪಾರ ಸಂಖ್ಯೆಯಲ್ಲಿ ಇನ್ನು ಇದ್ದವು ಎಂಬುದು ಗಮನಾರ್ಹವಾದ ಅಂಶವಾಗಿದೆ. ಗರ್ಭಗುಡಿಯಲ್ಲಿ ಕಕ್ಕೆಮರದ ಸುಮಾರು ೪ ಅಡಿ ಎತ್ತರದ ಚೌಕಟ್ಟಾದ ಕಂಬವೊಂದು ಇದ್ದು, ಅದರ ಬುಡದಲ್ಲಿ ಒಂದು ಮುಖಕ್ಕೆ ಮಾತ್ರ ಒಂದು ಕಾಲು ಅಡಿಯಷ್ಟು ಎತ್ತರವಿರುವ ಆಂಜನೇಯನ ಮೂರ್ತಿಯನ್ನು ಕೊರೆಯಲಾಗಿತ್ತು. ದೇವಾಲಯದ ದೀಪವು ನಿರಂತರವಾಗಿ ಉರಿಯುವಂತೆ ನೋಡಕೊಳ್ಳಲಾಗುತ್ತಿತ್ತು. ಎದುರಿಗೊಂದು ಕೊಂಡವಿದ್ದು, ಸದಾ ಕೊಳ್ಳಿಗಳು ಉರಿಯುತ್ತಿರುತ್ತದೆ. ಭಕ್ತರು ಮೈಕೈ ನೋವಿಗೆ ಅದರ ಬೂದಿಯನ್ನು ಬಳಿದುಕೊಳ್ಳುತ್ತಾರೆ. ಪಕ್ಕದಲ್ಲಿ ಒರಗು ಎಂದು ಕರೆಯುವ ಮುಸ್ಲಿಂ ಸಂತನೊಬ್ಬನು ಅಲ್ಲಿ ಐಕ್ಯನಾದನೆಂಬ ಪ್ರತೀತಿ ಇರುವ ಸಮಾಧಿಯಿದ್ದು, ಜಾತ್ರೆಯ ವೇಳೆಯಲ್ಲಿ ಇವನ ಹೆಸರಿನಲ್ಲಿ ಒಂದು ಎಡೆ ಇಡುತ್ತಿದ್ದರು. ಕಾರ್ತಿಕ ಮಾಸದಲ್ಲಿ ಅದರ ಮೇಲೆ ದೀಪ ಹಚ್ಚುತ್ತಿದ್ದರು.

೧೯೮೭ರ ತನಕವು ಮದ್ದೂರಿನ ಕಡೆಯ ಸಂತನ ಬಂಧುಗಳು ಬಂದು ಪೂಜಿಸುತ್ತಿದ್ದರು. ದೇವಾಲಯದ ನವೀಕರಣದ ವೇಳೆಯಲ್ಲಿ ಇದನ್ನು ತೆಗೆದುಹಾಕಲಾಗಿದೆ. ಇದರ ನಂತರ ಪುಟ್ಟ ವೇದಿಕೆಯ ಮೇಲೆ ಗುಡಿಯೊಂದಿದ್ದು, ಚೌಕಾಕಾರದ ವೇದಿಕೆಯಾದುದರಿಂದ ಹತ್ತಾರು ಜನ ಕುಳಿತು ಮಲಗುವ ಸ್ಥಳಾವಕಾಶ ಇದ್ದಿತು. ಒಳಗೆ ನಾಲ್ಕಾರು ನವಶಿಲಾಯುಗದ ಕೈಕೊಡಲಿ ಜೊತೆಗೆ ಹನುಮಂತನ ದುಂಡಾದ ಶಿಲಾಪ್ರತಿಮೆಗಳು ಇದ್ದು ಪೂಜೆಗೊಳ್ಳುತ್ತಿದ್ದವು.

ಕಾವೇರಿ ನದಿ ತೀರದಲ್ಲಿ ಸಮೃದ್ಧವಾಗಿ ರಾಸುಗಳಿಗೆ ಮೇವು ಮತ್ತು ನೀರು ದೊರೆಯುವುದರಿಂದ ಅರಣ್ಯದ ಈ ಭಾಗದಲ್ಲಿ ಹಲವಾರು ದನದ ದೊಡ್ಡಿಗಳು ನಿರ್ಮಾಣವಾಗುತ್ತಿದ್ದವು. ದೊಡ್ಡಹಾಲಹಳ್ಳಿ, ಏಳಿಗೆಹಳ್ಳಿ, ಹಲಗೂರು, ಮಳವಳ್ಳಿ ಮುಂತಾದ ಕಡೆಗಳಿಂದ ಗೌಡರ ಮನೆಯ ಹೆಚ್ಚುವರಿ ಹಸುಗಳಿಗೆ ಇಲ್ಲಿ ದೊಡ್ಡಿಗಳನ್ನು ನಿರ್ಮಿಸಿ ಸಲಹಲಾಗುತ್ತಿತ್ತು. ಇದರಿಂದ ಉತ್ತಮ ಫಲವು ರಾಸುಗಳ ಯಜಮಾನರಿಗೆ ಲಭಿಸುತ್ತಿತ್ತು. ಕನಕಪುರದ ತಾಲ್ಲೂಕಿನ ಏಳಗಳ್ಳಿಯ "ಗೌಡರ ದನಗಳನ್ನು ಮೇಯಿಸಲು ಮಾದಿಗನೊಬ್ಬನು ನಿತ್ಯವು ಆ ಅರಣ್ಯಕ್ಕೆ ಬರುತ್ತಿದ್ದನು. ಅವನು ಹುತ್ತದಲ್ಲಿದ್ದ ಸ್ವಾಮಿಯನ್ನು ಪತ್ತೆ ಹಚ್ಚಿದನು. ಬೇಲದಕಾಯಿ, ಬಿಲ್ವಪತ್ರೆಕಾಯಿ, ಕಾಮಜೇನುಗಳನ್ನು ಕೊಟ್ಟುಕೊಂಡು ದೇವರನ್ನು ಸಾಕಿದನು. ಆಮೇಲೆ ಅವನೇ ಗಂಗಟಿಕಾರ ಒಕ್ಕಲಿಗ ಕುಟುಂಬವೊಂದನ್ನು ಸ್ವಾಮಿಯ ಪೂಜೆಗಾಗಿ ಕರೆತಂದು ನೆಲೆಗೊಳಿಸಿದನು. ಆ ತಮ್ಮಡಿಗೆ ಸ್ವಾಮಿಗೊಂದು ನೆರಳು ಮಾಡಬೇಕೆಂದು ಇಷ್ಟವಾಯಿತು. ಆ ಹೊತ್ತಿನಲ್ಲಿ ದೊಡ್ಡಗಂಗರಾಜನೆಂಬುವನು ಆ ಸುತ್ತಿಗೆ ದೊರೆಯಾಗಿದ್ದನು. ತಮ್ಮಡಿಯು ತನ್ನ ಬಳಿಯಲ್ಲಿದ್ದ ಒಂದು ನಾಯಿಗೆ ಗುಟ್ಟಿನಲ್ಲಿ ಏನೋ ಹೇಳಿಕೊಟ್ಟು ದೊರೆಯ ಅರಮನೆಗೆ ಕಳುಹಿಸಿದನು. ಅಂತಃಪುರಕ್ಕೆ ನುಗ್ಗಿದ ನಾಯಿ, ರಾಜಕುಮಾರನ ತೊಟ್ಟಿಲಮೇಲೆ ಕುಳಿತುಬಿಟ್ಟಿತು. ಎಷ್ಟೋ ಸಾರಿ ಓಡಿಸಿದರು ಮತ್ತೆ ಮತ್ತೆ ಅಲ್ಲಿಗೆ ಹೋಗುತ್ತಿತ್ತು. ಹಿಂದಿನಿಂದ ಆ ತಮ್ಮಡಿಯು ದಾಸಯ್ಯನ ವೇಷದಲ್ಲಿ ಜಾಗಟೆ ಬಾರಿಸುತ್ತಾ ದೊರೆಯ ಪುರವನ್ನು ಹೊಕ್ಕು 'ಮುತ್ತತ್ತಿರಾಯನಿಗೊಂದು ನೆರಳು ಮಾಡಿಕೊಟ್ಟರೆ ನಾಯಿ ಕಾಟ ತಪ್ಪುತ್ತದೆ' ಎಂದು ಸಾರಿ ಬಂದನು.[೧]" ಅದರಂತೆ ದೊಡ್ಡಗಂಗರಾಜನು ಸ್ವಾಮಿಗೊಂದು ಹುಲ್ಲಿನಮಾಡನ್ನು ಮಾಡಿಕೊಟ್ಟನು.

ಅಂದರೆ ಮುತ್ತತ್ತಿಗುಡಿಯು ಪ್ರಥಮ ಹಂತದಲ್ಲಿ ಕಕ್ಕೆಸೊಪ್ಪಿನ ಗುಡಿಸಿಲ ನೆಲೆಯನ್ನು ಕಂಡರೆ ದ್ವಿತೀಯ ಹಂತದಲ್ಲಿ ಹುಲ್ಲಿನ ಗುಡಿಸಿಲಿನ ನೆಲೆಯನ್ನು ಕಂಡು ಮತ್ತಷ್ಟು ಉತ್ತಮವಾಯಿತು. ಆರಂಭದಲ್ಲಿ ಕಲ್ಲಿನ ರೂಪದಲ್ಲಿ ಪೂಜೆಗೊಳ್ಳುತ್ತಿದ್ದ ಮೂರ್ತಿ ನಾಲ್ಕು ಅಡಿಗಳ ಕಕ್ಕೆಮರದಲ್ಲಿ ರೂಪವನ್ನು ಕಂಡಿತು.

ಈ ವೇಳೆಯಲ್ಲಿ ಪ್ರೊ.ಎಸ್.ಕೆ.ರಾಮಚಂದ್ರರಾವ್ ರವರು ತಿಳಿಸಿರುವಂತೆ "ಸಣ್ಣಪುಟ್ಟ ಗುಡಿಗಳು ಜನರ ಅಗತ್ಯಗಳನ್ನು, ಬಯಕೆಗಳನ್ನು ಪೂರೈಸಲೆಂದು ಸಿದ್ಧವಾದವು. ಇಂತಹ ಗುಡಿಗಳೇ ದಿಟವಾಗಿ ಗುಡಿಗಳು, ಉಳಿದವು ಆಡಂಬರದವು. ಜನಜೀವನದಲ್ಲಿ ಗುಡಿಯ ಅಥವಾ ಸಾರ್ವಜನಿಕ ಪೂಜೆಯ ಅಗತ್ಯವಿರುವುದದಾದರೆ ಅವು ಈ ಗುಡಿಗಳಿಂದಲೇ ತೀರುವುವು. ಜನರ ಆದರ ನಿಜವಾಗಿ ಊರಿಕೊಳ್ಳುವುದು. ಈ ಗುಡಿಗಳಲ್ಲೇ ಈ ಸಣ್ಣಪುಟ್ಟ ಗುಡಿ ಗುಂಡಾರಗಳಲ್ಲಿ ಕಲೆಯ ಪಾಲು ಕಡಿಮೆಯದಿರಬಹುದು. ಅದರ ಅಚ್ಚುಕಟ್ಟು ಅಷ್ಟಾಗಿ ಇಲ್ಲದಿರಬಹುದು ಗುಡಿಯೊಳಗಣ ಮೂರ್ತಿ ಕುರೂಪವಾಗಿರಬಹುದು. ಆದರೆ ಸಹಜವಾದ ಬಯಕೆಯಿಂದ ನೇರವಾಗಿ ತೋರಿಕೊಂಡ ವಿವರ ಈ ಗುಡಿಯನ್ನುವುದನ್ನು ಮರೆಯುವ ಆಗಿಲ್ಲ.

ಈ ಗುಡಿಗೆ ಬಂದು ಅದರ ಪ್ರಯೋಜನವನ್ನು ಪಡೆದುಕೊಳ್ಳುವ ಜನ ಕಪಟವರಿಯದ ಸರಳ ಮನಸ್ಸಿನವರು. ಸಭ್ಯತೆಯ ಸುಳಿಯಲ್ಲಿ ಸಿಕ್ಕಿ ತಮ್ಮತನವನ್ನು ಕಳೆದುಕೊಂಡಿರುವವರಲ್ಲ. ಗುಡಿಗೂ ಅವರಿಗೂ ತೀರದ ಹತ್ತಿರದ ನೆಂಟು. ಈ ನೆಂಟು ಸಂಕುಚಿತವಾದುದೆಂದು ಹೇಳಬಹುದು. ಆದರೆ ಅದು ಆಳವಾದುದ್ದು ಎಂದು ಹೇಳಬೇಕು. ದೊಡ್ಡ ಊರಿನ ದೊಡ್ಡ ಗುಡಿಗೆ ಹೋಗುವ ಜನರಲ್ಲಿ ಮುಕ್ಕಾಲುಪಾಲು ಬರಿಯ ಪ್ರವಾಸಿಗಳು, ಹವ್ಯಾಸಿಗಳು, ಕಛೇರಿಗೆ ಹೋಗುವಂತೆಯೇ ವಿಹಾರಕ್ಕೆ ಹೋಗುವಂತೆ, ಮಾರುಕಟ್ಟೆಗೆ ಹೋಗುವಂತೆಯೇ, ಗುಡಿಗೂ ಹೋಗುವರು. ಅಲ್ಲಿ ಮಾಡಬೇಕಾದುದಕ್ಕಿಂತ ನೋಡುವುದು ಹೆಚ್ಚಾಗಿರುತ್ತದೆ. ಅವರ ಪಾಲಿಗೆ ಹಳ್ಳಿಯ ಸಣ್ಣಗುಡಿಯಲ್ಲಿ ನೆರೆಯುವ ಜನರ ಶ್ರದ್ಧೆ, ಭಕ್ತಿ, ಮನೋವೃತ್ತಿಗಳನ್ನು ಇವರಲ್ಲಿ ಕಾಣುವುದು ಕಷ್ಟ.[2]"

ಗುಡಿ ಅಥವಾ ದೇವಾಲಯಗಳ ಅಗತ್ಯ ಮತ್ತು ಉಪಯೋಗಗಳನ್ನು ಕುರಿತು ಪ್ರೊ.ಎಸ್.ಕೆ.ರಾಮಚಂದ್ರರಾವ್ "ಊರಿಗೊಂದು ಗುಡಿಯೇಕೆ? ಹಳ್ಳಿಯ ಸಾಮುದಾಯಿಕ ಜೀವನದಲ್ಲಿ ಇಂಥದೊಂದು ಸಾರ್ವಜನಿಕ ಸ್ಥಳದ ಅಗತ್ಯವಿದೆ. ಹಲವಾರು ಸಾಮಾಜಿಕ, ಆರ್ಥಿಕ, ಧಾರ್ಮಿಕ ಪ್ರಯೋಜನಗಳಿಗೆ ಇದು ನೆರವಾಗುತ್ತದೆ. ಮದುವೆ, ಮುಂಜಿ, ಸಂತೆ, ಸಭೆ, ಸಮಾರಾಧನೆ, ಜಾತ್ರೆ, ಜಾಗರಣೆ, ಓಲಗ, ಓಲಾಟ ಎಲ್ಲಕ್ಕೂ ಗುಡಿಯೇ ಗತಿ. ಗುಡಿಯೇನು ಯಾರೊಬ್ಬರದು ಅಲ್ಲ, ಯಾರೊಬ್ಬರು ಕಟ್ಟಿಸಿದರು, ಕಟ್ಟಿಮುಗಿದೊಡನೆ ಗುಡಿ ಊರವರಿಗೆಲ್ಲ ಸೇರಿದ್ದು, ಕಟ್ಟಿಸಿದವನ ಒಡೆತನ ಅಲ್ಲಿಗೆ ಮುಗಿಯಿತು. ಗುಡಿಗೆ ಈ ಗುಣವಿರುವುದರಿಂದಲೇ ಊರ ಹಿರಿಯರು ಇದನ್ನು ಓರಣವಾಗಿರಿಸಿಕೊಳ್ಳಲು ಹವಣಿಸುತ್ತಾರೆ. ಪೂಜೆ ಪುನಸ್ಕಾರಗಳು ತಪ್ಪದೇ ನಡೆಯಲು ಯತ್ನಿಸುತ್ತಾರೆ. ಕಾಲ ಕಾಲಕ್ಕೆ ಉತ್ಸವ-ಜಾತ್ರೆಗಳನ್ನು ನಡೆಸುತ್ತಾರೆ. ಇವೆಲ್ಲ ಊರವರ ಹೊಣೆಯೇ, ಎಲ್ಲರೂ ನೆರವಾಗುತ್ತಾರೆ. ದೇವರ ಉತ್ಸವ ಹೊರಟರೆ ಎಲ್ಲರೂ ಹೆಗಲು ಕೊಡುವುದಿಲ್ಲವೇ? ಮನೆ ಮನೆಯಲ್ಲಿಯೂ ಮಂಗಳಾರತಿ ಮಾಡಿಸುವುದಿಲ್ಲವೇ? ಮನೆಯ ಪೂಜೆ 'ಆತ್ಮಾರ್ಥ', ಗುಡಿಯ ಪೂಜೆ 'ಪರಾರ್ಥ'[5].

ಹೀಗೆ ಮುತ್ತತ್ತಿಯು "ಮುತ್ತತ್ತಿಸ್ಥಳ ಕಾಳದಾಸಮುತ್ತನಿಂದ ಆರಂಭವಾದರು ನಂತರದಲ್ಲಿ ಜನಪ್ರಿಯತೆಯನ್ನು ಪಡೆದುಕೊಳ್ಳುತ್ತಾ ಬಂದಿತು. ಜಾತಿಪದ್ಧತಿಯ ಸ್ತರದಲ್ಲಿ ಕೆಳಹಂತದಲ್ಲಿರುವ ಮಾದಿಗ ಜಾತಿಯವರಾದ ಕಾಳದಾಸ ಮುತ್ತನಿಂದ ಪೂಜೆ ಸ್ವೀಕರಿಸಲು ಭಕ್ತರು ಹಿಂಜರಿದಾಗ ಆತ ಹಲಗೂರಿನ ಗಂಗಟಿಗಾರ ಒಕ್ಕಲಿಗರವರನ್ನು ತಮ್ಮಡಿಯಾಗಿ ಪೂಜಿಸಲು ಕರೆತರುತ್ತಾನೆ. ಇದಕ್ಕೆ ಪ್ರತಿಯಾಗಿ ತಮ್ಮಡಿಗಳು ದೇವಾಲಯದ ಎಲ್ಲ ಕಾರ್ಯಗಳಲ್ಲೂ ಸೂಕ್ತಸ್ಥಾನಮಾನ ನೀಡುವ ವಚನವನ್ನು ನೀಡುತ್ತಾರೆ. ಜಾತ್ರೆಯಲ್ಲಿ ದೇವಾಲಯದ ಒಳಗೆ ಪೂಜೆ ಸ್ವೀಕರಿಸಿ ಹೂಮಾಲೆ ಹಾಕಿಸಿ ಕೊಳ್ಳುವುದು, ಕಾಯಿ ಚಚ್ಚುವುದು, ಹಾಲರಬಿ ಹೊಡೆಯುವುದು ಅಲ್ಲದೆ ಸೂಕ್ತ ಸಂಭಾವನೆ ಪಡೆಯುವುದು. ಇಲ್ಲಿ ಕಾಯಿ ಚಚ್ಚುವ ಮತ್ತು ಹಾಲರಬಿ ಸೇವೆ ಎರಡರಲ್ಲೂ ತಮ್ಮಡಿಗಳು ಹಾಗೂ ಮಾದಿಗ ಜನಾಂಗದವರು ಕೂಡಿ ಪಾಲ್ಗೊಳ್ಳುತ್ತಾರೆ ಎಂಬುದು ಗಮನಾರ್ಹವಾದ ಅಂಶವಾಗಿದೆ.[6]"

ಹೀಗೆ ವ್ಯಕ್ತಿಯಿಂದ ಆರಂಭವಾದರೂ ಸಮಷ್ಟಿಯಾಗಿ ಬೆಳೆದಿರುವ ಮುತ್ತತ್ತಿರಾಯನಗುಡಿ ಕ್ರಿ.ಶ.೧೯೮೬ರಲ್ಲಿ ಹೊಸ ಕಟ್ಟಡವನ್ನು ನಿರ್ಮಿಸಿಕೊಂಡಿದೆ. ವಿಶಾಲವಾದ ಪ್ರಾಂಗಣದೊಳಗೆ ೬೦ ಹಾಗೂ ೮೦ ಅಡಿ ಅಳತೆಯಲ್ಲಿ ಕಲ್ಲುಕಟ್ಟಡವನ್ನು ಪಡೆದುಕೊಂಡಿತು. ಗರ್ಭಗುಡಿ, ಸುಖನಾಸಿ ಹಾಗೂ ಹಜಾರಗಳನ್ನು ಉಳ್ಳ ಇದು ತದನಂತರ ಗೋಪುರ ಮತ್ತು ಕಳಶ ಪ್ರತಿಷ್ಠಾಪನೆಯನ್ನು ಪಡೆದುಕೊಂಡಿತು.

## ೬.೧ ಆದಿದ್ರಾವಿಡರು

"ಮಾದಿಗ ಜನಾಂಗದವರು ಕರ್ನಾಟಕದಲ್ಲಿ ತಾವು ಆದಿದ್ರಾವಿಡರು ಎಂದು ಕರೆದುಕೊಳ್ಳುತ್ತಾರೆ. ಮಾತಂಗಮುನಿಯು ಮಾದಿಗರ ಮೂಲಪುರುಷ[೩]" ಮಾತಂಗಿ ಮಾದಿಗರ ದೇವಿ. ಮತಂಗ ಕುಲವೆಂದರೆ ಆನೆಕುಲವೆಂಬ ಅರ್ಥವುಂಟು. ಆನೆ ಎಂಬುದು ಭೂಮಂಡಲದ ಬಹುದೊಡ್ಡ ಪ್ರಾಣಿ. "ಮಾದಿಗ, ಮತಂಗ, ಮಾತಂಗಿ[೬]" ಇವೆಲ್ಲವುಗಳಲ್ಲಿ ತಾದಾತ್ಮ್ಯವಿದೆ. 'ಕನ್ನಡ ಜಾನಪದ ವಿಶ್ವಕೋಶ'ವು ಮಾದಿಗರ ಬಗ್ಗೆ ಹೇಳುವಾಗ ಅವರು ತೊಗಲು ಕೆಲಸ ಮಾಡುವವರು, ಎಡಗೈನವರು, ಆದಿಜಾಂಬವರ ಸಂತತಿಯವರು ಎಂದು ಹೇಳುತ್ತದೆ. ಈ ಮಾತಂಗರು ದಕ್ಷಿಣದ ಯಾವುದೋ ರಾಜನೊಬ್ಬರ ಮಕ್ಕಳಂತೆ. ನಂತರ ಮುನಿಯಾದವರು. ಮಾತಂಗಿಯನ್ನು ಪರಶುರಾಮನು ಸೋಲಿಸಿದಾಗ "ಮಾದಿಗನೊಬ್ಬನ ಮನೆಯ ಚರ್ಮ ಹದಮಾಡುವ ಮಡಿಕೆ ಕೆಳಗೆ ಅವಿತುಕೊಂಡ ಕತೆ ಬರುತ್ತದೆ.[೭]"

ಮುತ್ತತ್ತಿರಾಯನ ಒಕ್ಕಲುಗಳಾದ ಮಾದಿಗ ಜಾತಿಯವರು ಕನಕಪುರ ತಾಲ್ಲೂಕಿನ, ಅಲಸೂರು, ನಾಯಕನಹಳ್ಳಿ, ಸಾತನೂರು, ಕನಕಪುರ, ದೊಡ್ಡಹಾಲಹಳ್ಳಿ, ಬೆಂಗಳೂರು ನಗರ, ಚನ್ನಪಟ್ಟಣ, ರಾಮನಗರ, ಹಾರೋಹಳ್ಳಿ, ಮಳವಳ್ಳಿ ತಾಲ್ಲೂಕಿನ ಮಳವಳ್ಳಿ, ಹಲಗೂರು, ಬಾಳೆಹೊನ್ನಿಗ, ಚಿಲ್ಲಾಪುರ, ನಡಕಲಪುರ, ಹೊನ್ನನಾಯಕನಹಳ್ಳಿ, ಕಂಡ್‌ಕೆರೆ, ಬಿದಿರಹೊಸಹಳ್ಳಿ, ಅಪ್ಪುಗೌಡನಪುರ, ಸಾಯಳ್ಳಿ, ಹಾಲುನತ್ತ, ಕೊಳ್ಳೇಗಾಲ ತಾಲ್ಲೂಕಿನ ಬೂದಿತಿಟ್ಟು, ಮದ್ದೂರು ತಾಲ್ಲೂಕಿನ ತೊಪ್ಪಗ್ನಳ್ಳಿ, ಮಂಡ್ಯ ಜಿಲ್ಲೆಯ ಮಂಡ್ಯ, ಮುಂತಾದ ಸ್ಥಳಗಳಲ್ಲಿ ಹರಡಿರುವ ಮಾದಿಗರ ಮುಖ್ಯ ಕಸುಬು ಚರ್ಮಗಾರಿಕೆಯೇ ಆಗಿದೆ. ತಮಟೆಗಳನ್ನು ಮಾಡಿಕೊಡುವುದು ಮುತ್ತತ್ತಿ ಮತ್ತು ಪಾದ್ದಾರೆ ದೇವಾಲಯಗಳಿಗೆ ಗೋವಿನ ಚಕ್ಕಳದಿಂದ ಪಾದರಕ್ಷೆ ಮಾಡಿ ಕೊಡುವುದು ಇವರೇ ಆಗಿದ್ದಾರೆ. ಇವರಲ್ಲಿ ಹಲಸೂರು, ನಾಯಕನಹಳ್ಳಿ, ಮಳವಳ್ಳಿ, ಬಾಳೆಹೊನ್ನಿಗ, ಬೂದನೂರಿನ ಮಾದಿಗರು ಪ್ರಧಾನ ಪಾತ್ರವಹಿಸುತ್ತಾರೆ. ಇವರು ಮುತ್ತತ್ತಿರಾಯನ ಒಕ್ಕಲು ಅಲ್ಲದೆ, ಸಿದ್ಧಾಪ್ಪಾಜಿ, ತಿರುಪತಿ ತಿಮ್ಮಪ್ಪ, ಮೇಲುಕೋಟೆ ಚೆಲುವನಾರಾಯಣನಿಗೂ ಸಹ ನಡೆದುಕೊಳ್ಳುತ್ತಾರೆ.

ಮುತ್ತತ್ತಿರಾಯನ ಹೆಸರನ್ನೇ ವ್ಯಕ್ತಿನಾಮವಾಗಿ ಬಳಸುತ್ತಾರೆ. ಕಾಳಮುತ್ತ, ಕೆಂಚಮುತ್ತ, ದೊಡ್ಡಮುತ್ತ, ಚಿಕ್ಕಮುತ್ತ ಅಲ್ಲದೆ ಆಂಜನೇಯನ ಇನ್ನೊಂದು ಹೆಸರಾದ ಸಂಜೀವರಾಯ ಹುಚ್ಚಯ್ಯ ಎಂಬುದನ್ನು ಸಹ ಇಟ್ಟುಕೊಳ್ಳುತ್ತಾರೆ.

ಮುತ್ತತ್ತಿಯಲ್ಲಿ ಆಂಜನೇಯನನ್ನು ಕಂಡಂತಹ ಇವರ ಆದ್ಯಪುರಷ ಕಾಳದಾಸ. ಇವನು ಮಾದಿಗರಲ್ಲಿ ಕಕ್ಕೇಸೊಪ್ಪಿನ 'ಕಾಳದಾಸಮುತ್ತ' ಎಂತಲೇ ಪ್ರಸಿದ್ಧಿಯನ್ನು ಪಡೆದಿದ್ದಾನೆ. ಇವನಿಗೆ ಒಂದು ತಾಮ್ರಶಾಸನವು ಸಹ ಬರೆದುಕೊಡಲ್ಪಟ್ಟಿದೆ. "ದೇವರ ಜೊತೆಗೆ ಇವರು ತಾಮ್ರಪತ್ರವನ್ನು ಇಟ್ಟು ಪವಿತ್ರವೆಂಬಂತೆ ಪೂಜಿಸುತ್ತಾರೆ. ಇದಕ್ಕೆ ಸಂಬಂಧಿಸಿದಂತೆ ಓಲೆಗರಿಗಳೂ ಸಹ ಇದ್ದು ಅವೆಲ್ಲ ತೃಟಿತವಾಗಿವೆ. ಕನಕಪುರ ತಾಲ್ಲೂಕಿನ ಅಲಸೂರುವಿನಲ್ಲಿನ ಮಾದಿಗರ ಮನೆಯಲ್ಲಿ ಈ ಓಲೆಗರಿಗಳಿದ್ದುದಾಗಿ ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ.[೮]" ಈ ಆದಿದ್ರಾವಿಡ ಜನಾಂಗದವರೇ ಜಾತ್ರೆಯಲ್ಲಿ ಪ್ರಮುಖ ಪಾತ್ರವಹಿಸುತ್ತಾರೆ. ಇವರು ಎರಡು ದಿನ ಪಾದ್ದಾರೆ ಜಾತ್ರೆ, ಎರಡು ದಿನ ಮುತ್ತತ್ತಿಜಾತ್ರೆ, ಮತ್ತೆರಡು ದಿನ ಸಂಬಾಪುರದ ಬಳಿ ಇರುವ ಕಂಬದರಾಯ ಎಂದು ಪ್ರಸಿದ್ಧಿಯಾಗಿರುವ ಆಂಜನೇಯನ ಜಾತ್ರೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ದೇವರ ದೀಪ ಕಂಬಕ್ಕೆ ಅಲಸೂರಿನ ಮಾದಿಗರ ಮನೆಯಿಂದಲೇ ಎಣ್ಣೆ ಬರಬೇಕು. ಅಂದರೆ ಈ ಜಾತ್ರೆಯಲ್ಲಿ ಪ್ರಾಮುಖ್ಯತೆಯನ್ನು ಇದು ತೋರಿಸುತ್ತದೆ. ಭಕ್ತಿ, ಶ್ರದ್ಧೆಗಳಿಂದ, ಮಡಿ ನಿಯಮಗಳನ್ನು ಅನುಸರಿಸಿ ಹರಳುಕಾಳುಗಳಿಂದ ಹರಳೆಣ್ಣೆಯನ್ನು ತಯಾರಿಸಿಕೊಂಡು ಹೋಗಿ ದೇವರ ತಮ್ಮಡಿಯ ಸಹಾಯದಿಂದ ದೀಪದ ಕಂಬಕ್ಕೆ ಸುರಿಯುತ್ತಾರೆ. ಜಾತ್ರೆಯ ವೇಳೆಯಲ್ಲಿ ಕಾಯಿಚಚ್ಚುವ, ಹಾಲರಬಿ ಹೊಡೆಯುವ ಕ್ರೀಡೆಗಳಲ್ಲಿ ಇವರದೇ ಪ್ರಮುಖ ಪಾತ್ರ ಇರುತ್ತದೆ. ಇತರರಿಗೆ ಅಲ್ಲಿ ಅವಕಾಶವಿಲ್ಲ. ಇದಕ್ಕಾಗಿಯೇ ಇವರು ಕಾಡಿಗೆ ಹೋಗಿ ಸುಮಾರು ೮ ಅಡಿ ಎತ್ತರದ ಬಿದಿರಿನ ದೊಣ್ಣೆಯನ್ನು ಕಡಿದುಕೊಂಡು ಬಂದಿರುತ್ತಾರೆ. ಸಸ್ಯಾಹಾರದ ಜೊತೆಗೆ ಮಾಂಸಾಹಾರಿಗಳು ಆದ ಇವರು ಮದ್ಯವನ್ನು ಸೇವಿಸುತ್ತಾರೆ. ಶನಿವಾರ, ಶ್ರಾವಣಶನಿವಾರ ಮನೆಯಲ್ಲಿ ವಿಶೇಷ ಪೂಜೆ ನಡೆಸುವಾಗ ಮಾಂಸ ಮದ್ಯವನ್ನು ಎಡೆಯಲ್ಲಿ ಇಡುತ್ತಾರೆ. ನಂತರ ಸೇವನೆಯಾಗುತ್ತದೆ. ಆಗಾಗ ಪಾದ್ದಾರೆ ಮತ್ತು ಮುತ್ತತ್ತಿಯಲ್ಲಿ 'ದೇವರಸ್ಯಾವೆ' ಎಂಬ ಸೇವೆಯನ್ನು ನಡೆಸುತ್ತಾರೆ. ಆಗ ಮೇಕೆ, ಕುರಿ ಅಥವಾ ಕೋಳಿಯ ಬಲಿಯಾಗುತ್ತದೆ. ಆಗ ವಿವಿಧ ಭಾಗಗಳಿಂದ ಇವರ ಬಾಂಧವರು ಬಂದು ನೆರೆಯುತ್ತಾರೆ.

ಇವರಿಗೆ ಸಂಬಂಧಿಸಿದಂತೆ ಮುತ್ತತ್ತಿಯರಾಯ ದೇವಾಲಯದ ಬಳಿ ಸ್ವಲ್ಪ ಜಾಗವೂ ಇದ್ದು ಅದು ಈಗ ಅತಿಕ್ರಮಣಕ್ಕೆ ತುತ್ತಾಗಿದೆ. ಇವರ ಹೆಣ್ಣುಮಕ್ಕಳು ವಿವಿಧ ಬಗೆಯ ಜನಪದ ಗೀತೆಗಳನ್ನು ಮುತ್ತತ್ತಿರಾಯನಿಗೆ ಸಂಬಂಧಿಸಿದಂತೆ ಕಟ್ಟಿ ಹಾಡುತ್ತಾರೆ. ಕಳೆಕೀಳುವಾಗ, ನಾಟಿಹಾಕುವಾಗ, ಧಾನ್ಯ ಕೇರುವಾಗ, ತೂರುವಾಗ, ವಿಶೇಷ ಸಂದರ್ಭಗಳಲ್ಲಿಯೇ ಅಲ್ಲದೇ ಜಾತ್ರಾ ವೇಳೆಯಲ್ಲಿ ಉತ್ಸವದ ಸಮಯದಲ್ಲಿ ಮುತ್ತತ್ತಿರಾಯನಿಗೆ ಸಂಬಂಧಿಸಿದ ಗೀತೆಗಳನ್ನು ಹಾಡುತ್ತಾರೆ.

ಈ ಮಾದಿಗರಲ್ಲಿಯೂ ಪೂಜಾರಿಗಳಿರುತ್ತಾರೆ. ಇವನನ್ನು ತಮ್ಮಡಿ ಎಂದು ಕರೆಯುತ್ತಾರೆ. 'ತಮ್ಮಡಿ' ಎಂದರೆ 'ದಾಸ' ಎಂದು ಅರ್ಥ. ಈತ ಇವರ ಕೇರಿಯಲ್ಲಿರುವ ಮಾರಿ, ಸಿದ್ಧಾಪ್ಪಾಜಿ, ಹನುಮಂತನನ್ನು ಪೂಜಿಸುತ್ತಾನೆ. ಅಲ್ಲದೇ ವಿಶೇಷ ಸಂದರ್ಭಗಳಲ್ಲಿ ಬಂಧುಗಳ ಮನೆಗಳಲ್ಲೂ ಹೋಗಿ ಪೂಜೆ ಸಲ್ಲಿಸುತ್ತಾನೆ. ಈ ಮಾದಿಗರು ಮುತ್ತತ್ತಿಯ ಜಾತ್ರೆಯಲ್ಲಿ ಏಳಗಳ್ಳಿಗ್ರಾಮದ ಮುತ್ತೇಗೌಡರ ಮನೆಯಿಂದ ಚಿಕ್ಕದೊಂದು ಮಣ್ಣಿನ ಹರಬಿಯಲ್ಲಿ ಹಾಲು ಬರುತ್ತದೆ. ಆಮೇಲೆ ದೇವಾಲಯದ ಮುಖ್ಯಸ್ಥರು ಮಾದಿಗರ ಯಜಮಾನನನ್ನು ಆಹ್ವಾನಿಸಿ, ದೇವರೆದುರಿಗೆ ಆತನಿಗೆ ಹೂಮಾಲೆಯನ್ನು ಹಾಕಿ ಹಾಲರಬಿಸೇವೆ, ಕಾಯಿಸೇವೆಗಳಿಗೆ ಅಣಿಯಾಗಬೇಕೆಂದು ಹೇಳುತ್ತಾರೆ. ಅವನು ತನ್ನ ದಂಡಧಾರಿ ತಂಡದವರೊಡನೆ ದೇವಾಲಯದ ಎದುರಿಗಿರುವ ದೂಪದ ಮರದಡಿಯಲ್ಲಿ ಹೋಗಿ ನಿಲ್ಲುತ್ತಾನೆ. ತದನಂತರ ತನ್ ತಂಡದವರೊಡಗೂಡಿ ದೇವಾಲಯದ ಒಳಗೆ ಪೂಜೆ ಸ್ವೀಕರಿಸಿ ಹೊರಬಂದು ತಮ್ಮ ಸೇವಾ ಕಾರ್ಯದಲ್ಲಿ ತೊಡಗುತ್ತಾರೆ. ಆದಿಜಾಂಬವ ಕುಲಬಾಂಧವರು ಎಂದು ಕರೆಸಿಕೊಳ್ಳುವ ಇವರು ಒಂದು ಕರಪತ್ರದಲ್ಲಿ ತಮಗೂ ಮುತ್ತತ್ತಿಗೂ ಇರುವ ಬಾಂಧವ್ಯ ಕುರಿತು ದೀರ್ಘವಾಗಿ ಕ್ರಿ.ಶ.೧೯೯೫ ಇಸವಿಯಲ್ಲಿ ಅಚ್ಚು ಹಾಕಿಸಿದ್ದಾರೆ. ಅದು ಇಂತಿದೆ.

॥ಶ್ರೀ ಆಂಜನೇಯಸ್ವಾಮಿ ಪ್ರಸನ್ನ॥

ಶ್ರೀ ಶ್ರೀ ಮುತ್ತತ್ತಿರಾಯಸ್ವಾಮಿ ಪ್ರಸನ್ನ ಹಲಗೂರು ಹೋಬಳಿ, ಮಳವಳ್ಳಿ ತಾಲ್ಲೂಕು ಮಾನ್ಯರೆ ಹಾಗೂ ಆತ್ಮೀಯ ಬಂಧುಗಳೇ,

ಹಿಂದೆ ಮುತ್ತತ್ತಿಯಲ್ಲಿ ಶ್ರೀ ಆಂಜನೇಯಸ್ವಾಮಿಯು ಮೂಗುತ್ತದಲ್ಲಿ ನೆಲೆಸಿದ ನೆಲೆಯನ್ನು ಪತ್ತೆ ಹಚ್ಚಿ ಆ ಸ್ವಾಮಿಯ ಭಕ್ತನಾಗಿದ್ದಂತ ಆದಿಜಾಂಬಕುಲದ ಶ್ರೀ ಕಕ್ಕೇಸೊಪ್ಪಿನ ಕಾಳಿದಾಸನ ವಿಚಾರ ಮತ್ತು ಮುತ್ತತ್ತಿಯಲ್ಲಿ ನಮ್ಮ ಆದಿಜಾಂಬವ ಕುಲಬಾಂಧವರು ಶ್ರಿ ಆಂಜನೇಯಸ್ವಾಮಿಗೆ ಸಲ್ಲುವ ದೇವತಾ ಕಾರ್ಯವನ್ನು ಮುಂದುವರಿಸಿಕೊಂಡು ಅವರೆಲ್ಲ ಸೇರಿ ಮುತ್ತತ್ತಿಯಲ್ಲಿ ಕೈಹಂಚಿನ ಚಾವಡಿ ಕಟ್ಟೆ ಸ್ಥಳದಲ್ಲಿ ಈಗ ಛತ್ರ ಕಟ್ಟುವ ವಿಚಾರ.

ಶ್ರೀ ಆಂಜನೇಯಸ್ವಾಮಿಯು ಮುತ್ತತ್ತಿಯಲ್ಲಿ ನೆಲೆಸಿದ್ದ ಕಾಲದಲ್ಲಿ ಕಕ್ಕೆಸೊಪ್ಪಿನ ಕಾಳಿದಾಸನು ನಾಯಕನಳ್ಳಿಯನ್ನು ಬಿಟ್ಟು ಬಾಣಸಮುದ್ರದ ಕೆಂಚಮಾಯಿಗೌಡರ ಹಸುಗಳನ್ನು ಮೇವಿಗಾಗಿ ಮುತ್ತತ್ತಿ ಕಾಡಿಗೆ ಹೊಡೆದುಕೊಂಡು ಹೋಗುತ್ತಾನೆ. ಎಲ್ಲಾ ಹಸುಗಳು ಮೂಗುತ್ತದ ಸುತ್ತಲು ಮೇಯುತ್ತಿರುವಾಗ ಶ್ರೀಆಂಜನೇಯಸ್ವಾಮಿಯ ದೃಷ್ಟಿ ಒಂದು ಹಾಲು ಕೊಡುವಂತಹ ಹಸುವಿನ ಮೇಲೆ ಬೀಳುತ್ತದೆ. ಆಗ ತಕ್ಷಣ ಆ ಹಸುವು ಮೂಗುತ್ತದ ಬಳಿಗೆ ಹೋಗಿ ನಿಂತು ಮೂಗುತ್ತದಲ್ಲಿ ನೆಲೆಸಿದ್ದ ಶ್ರೀ ಆಂಜನೇಯಸ್ವಾಮಿಗೆ ಹಾಲು ಕೊಡುತ್ತದೆ. ಆ ಸಮಯದಲ್ಲಿ ಕಕ್ಕೆಸೊಪ್ಪಿನ ಕಾಳಿದಾಸನು ಇದನ್ನು ಗಮನಿಸಿರುವುದಿಲ್ಲ ಸಾಯಂಕಾಲವಾದ ನಂತರ ಹಸುಗಳನ್ನು ಮನೆಗೆ ಹೊಡೆದುಕೊಂಡು ಬರುತ್ತಾನೆ. ಹಾಲು ಕೊಟ್ಟು ಬಂದಿದ್ದಂತಹ ಹಸುವು ಮನೆಯಲ್ಲಿ ಕರುವಿಗೆ ಹಾಲು ಕೊಡುವುದಿಲ್ಲ. ಹೀಗೆಯೇ ಎರಡು ಮೂರು ದಿನಗಳ ಕಾಲ ಮುತ್ತತ್ತಿಯಲ್ಲಿ ನೆಲೆಸಿದಂತ ಸ್ವಾಮಿಗೆ ಹಾಲು ಕೊಟ್ಟು ಬಂದು ಮನೆಯಲ್ಲಿ ಕರುವಿಗೆ ಹಾಲು ಕೊಡದಿರುವುದನ್ನು ಕಂಡಂತ ಕೆಂಚಮಾಯಿಗೌಡರು ಕಾಳಿದಾಸನಿಗೆ ಹೀಗೆ ಹೇಳುತ್ತಾರೆ. ಹಸುವು ಕರುವಿಗೆ ಹಾಲು ಕೊಡುತ್ತಿಲ್ಲ ಯಾರೋ ಹಾಲು ಕರೆದುಕೊಳ್ಳುತ್ತಿದ್ದಾರೆ ನೋಡು ಈ ಹಸುವಿನ ಮೇಲೆ ನಿಗಾ ಇಡು ಎಂದು ಹೇಳುತ್ತಾರೆ. ಮಾರನೇ ದಿನ ಕಕ್ಕೆಸೊಪ್ಪಿನ ಕಾಳಿದಾಸನು ಹಾಲು ಕೊಡುತ್ತಿದ್ದಂತಹ ಹಸುವಿನ ಮೇಲೆ ನಿಗಾ ಇಡುತ್ತಾನೆ. ಹಸುವು ಮೇಯುತ್ತಿದ್ದು ತನ್ನ ದಿನನಿತ್ಯದಂತೆ ಹಾಲು ಕೊಡಲು ಮೂಗುತ್ತದ ಬಳಿಗೆ ಹೋಗಿ ನಿಂತು ಶ್ರೀ ಆಂಜನೇಯಸ್ವಾಮಿಗೆ ಹಾಲು ಕೊಡುತ್ತಿರುತ್ತದೆ. ಶ್ರೀ ಕಕ್ಕೆಸೊಪ್ಪಿನ ಕಾಳಿದಾಸನು ಹಸುವು ಹಾಲು ಕೊಡುತ್ತಿರುವುದನ್ನು ನೋಡುತ್ತಾನೆ. ಆಗ ಆಂಜನೇಯಸ್ವಾಮಿಯ ದರ್ಶನವಾಗುತ್ತದೆ.

ಕಕ್ಕೆಸೊಪ್ಪಿನ ಕಾಳಿದಾಸನಿಗೆ ಜ್ಞಾನೋದಯವಾಗಿ ಸ್ವಾಮಿಗೆ ಭಕ್ತಿಯಿಂದ ನಮಸ್ಕರಿಸುತ್ತಾನೆ. ಆಗ ಶ್ರೀ ಆಂಜನೇಯಸ್ವಾಮಿಯು ಪ್ರತ್ಯಕ್ಷನಾಗಿ ಶ್ರೀ ಕಕ್ಕೆಸೊಪ್ಪಿನ ಕಾಳಿದಾಸನನ್ನು ನೋಡಿ ನಾನು ಶ್ರೀಆಂಜನೇಯಸ್ವಾಮಿಯಾಗಿ ಇಲ್ಲಿ ನೆಲೆಸಿರುವೆ ನೀನು ನನ್ನ ಭಕ್ತನಾಗಿ ನನ್ನ ಸೇವೆಯನ್ನು ಮಾಡಿಕೊಂಡು ಇಲ್ಲಿಯೇ ಇರು, ನಿನಗೆ ಸನ್ ಮಂಗಳವನುಂಟು ಮಾಡುವೆ ಎಂದು ಸ್ವಾಮಿಯು ಹೇಳುತ್ತಾರೆ. ಇದಕ್ಕೆ ಕಾಳಿದಾಸನು ಒಪ್ಪಿ ಬರುತ್ತೇನೆಂದು ಹೇಳುತ್ತಾನೆ. ಸಾಯಂಕಾಲವಾಗುತ್ತದೆ ಕಾಳಿದಾಸನು ಹಸುಗಳನ್ನು ಹೊಡೆದುಕೊಂಡು ಕೆಂಚಮಾಯಿಗೌಡರ ಮನೆಗೆ ಹಿಂದಿರುಗುತ್ತಾನೆ. ಅಂದು ಹಸುವು ಮನೆಯಲ್ಲಿ ಕರುವಿಗೆ ಹಾಲು ಕೊಡುತ್ತದೆ. ಕಕ್ಕೆಸೊಪ್ಪಿನ ಕಾಳಿದಾಸನು ಬೆಳಗಿನ ಜಾವ ೫ ಗಂಟೆಗೆ ಎದ್ದು

ಕೆಂಚಮಾಯಿಗೌಡರ ಮನೆಯನ್ನು ಬಿಟ್ಟು ನೇರ ಮುತ್ತತ್ತಿಯಲ್ಲಿ ಮೂಗುತ್ತದಲ್ಲಿ ನೆಲೆಸಿದ ಶ್ರೀ ಆಂಜನೇಯಸ್ವಾಮಿಯ ಸನ್ನಿಧಿಗೆ ಬಂದು ಕಾವೇರಿ ನದಿಯಲ್ಲಿ ಸ್ನಾನಮಾಡಿ ಕಕ್ಕೆಸೊಪ್ಪನ್ನು ಉಡುಗೆಯಾಗಿ ನಡುವಿಗೆ ಕಟ್ಟಿಕೊಂಡು ಮೂಗುತ್ತದಲ್ಲಿದ್ದ ಶ್ರೀ ಆಂಜನೇಯಸ್ವಾಮಿಗೂ ಸುತ್ತಲೂ ಕಕ್ಕೆಸೊಪ್ಪಿನ ಗುಡಾರವನ್ನು ಕಟ್ಟಿ ಸ್ವಾಮಿಗೆ ಪೂಜೆ ಮಾಡಲು ನಿರತನಾಗುತ್ತಾನೆ. ಈಗೆಯೇ ಕಾಳಿದಾಸನು ತನ್ನ ದಿನನಿತ್ಯ ಪೂಜೆಯನ್ನು ಮಾಡಿಕೊಂಡು ಬರುತ್ತಿರುವಾಗ ಒಂದು ದಿವಸ ಶ್ರೀಆಂಜನೇಯಸ್ವಾಮಿಯು ಪ್ರತ್ಯಕ್ಷನಾಗಿ ಶ್ರೀಕಕ್ಕೆಸೊಪ್ಪಿನ ಕಾಳಿದಾಸನಿಗೆ ಈಗೆಂದು ಹೇಳುತ್ತಾನೆ. ಮುಂದೆ ಈ ಸ್ಥಳವು ನನ್ನ ಭಕ್ತರ ಪುಣ್ಯಕ್ಷೇತ್ರವಾಗ ಬೇಕಾಗಿದೆ. ಅದಕ್ಕಾಗಿ ನನಗೆ ಒಂದು ಸ್ಥಾನ (ದೇವಸ್ಥಾನ) ಆಗಬೇಕು. ಇದು ಶಿವನಸಮುದ್ರವನ್ನು ಆಳುತ್ತಿರುವ ಶ್ರೀರಂಗರಾಯರಿಂದ ಇದು ಸಾಧ್ಯ ಅದಕ್ಕಾಗಿ ನಾನು ಹುಲಿ(ವ್ಯಾಗ್ರ)ಯ ರೂಪವನ್ನು ತಾಳಿ ಅರಮನೆಯಲ್ಲಿ ಶ್ರೀರಂಗರಾಯರ ಮಗುವಿನ ತೊಟ್ಟಿಲಬಳಿ ಮಲಗುತ್ತೇನೆ. ಅದೇ ಸಮಯಕ್ಕೆ ನೀನು ನಾಮವನ್ನು ಹಣೆಯಲ್ಲಿ ಧರಿಸಿ ದಾಸಯ್ಯನೆಂದು ಹೇಳಿ ಈ ರೀತಿ ಹೇಳು ಅದೇನೆಂದರೆ ಹಿರಿಯ ಮುತ್ತತ್ತಿಯಲ್ಲಿ ಶ್ರೀ ಆಂಜನೇಯಸ್ವಾಮಿಯು ಮುತ್ತತ್ತಿರಾಯಸ್ವಾಮಿಯಾಗಿ ನೆಲೆಸಿರುವರು. ಅದಕ್ಕಾಗಿ ನಿಮ್ಮಿಂದ ಆ ಸ್ವಾಮಿಯು ನೆಲೆಸಿರುವ ಸ್ಥಳದಲ್ಲಿ ದೇವಸ್ಥಾನ ಕಟ್ಟಿಸಿಕೊಟ್ಟರೆ ಆ ಹುಲಿ(ವ್ಯಾಗ್ರ)ಯನ್ನು ನಾನು ಹಿಂದಕ್ಕೆ ಕರೆದುಕೊಂಡು ಹೋಗುವೆ ಎಂದು ಹೇಳು, ಎಂದು ಈ ರೀತಿಯಾಗಿ ಶ್ರೀ ಆಂಜನೇಯಸ್ವಾಮಿಯು ಕಾಳಿದಾಸನಿಗೆ ಹೇಳಿಕೊಡುತ್ತಾರೆ.

ಶ್ರೀ ಆಂಜನೇಯಸ್ವಾಮಿ ಕಕ್ಕೆಸೊಪ್ಪಿನ ಕಾಳಿದಾಸನಿಗೆ ಹೇಳಿದಂತೆಯೇ ಶಿವನಸಮುದ್ರದ ಶ್ರೀರಂಗರಾಯರ ಅರಮನೆಗೆ ಹೋಗಿ ಹುಲಿಯರೂಪವನ್ನು ತಾಳಿ ಮಗುವಿನ ತೊಟ್ಟಿಲ ಬಳಿ ಮಲಗಿರುತ್ತದೆ. ಇದನ್ನು ನೋಡಿದ ಶ್ರೀರಂಗರಾಯರು ಮತ್ತು ಆತನ ಹೆಂಡತಿ ಇಬ್ಬರು ಹೆದರಿ ಚಿಂತಿಸುತ್ತಿರುವಾಗ ಅದೇ ಸಮಯಕ್ಕೆ ಶ್ರೀ ಕಕ್ಕೆಸೊಪ್ಪಿನ ಕಾಳಿದಾಸರು ಕಕ್ಕೆಸೊಪ್ಪಿನ ಉಡುಗೆಯನ್ನು ನಡುವಿಗೆ ಕಟ್ಟಿಕೊಂಡು ಮೈಯಲ್ಲಿ ನಾಮವನ್ನು ಬಳಿದುಕೊಂಡು ಈ ರೀತಿಯಾಗಿ ಸಾರುತ್ತ ಶ್ರೀರಂಗರಾಯರಿಗೆ ಹೇಳುತ್ತಾನೆ. ಏನೆಂದರೆ ಹಿರಿಯ ಮುತ್ತತ್ತಿಯಲ್ಲಿ ಶ್ರೀ ಆಂಜನೇಯಸ್ವಾಮಿಯು ನೆಲೆಸಿರುವರು ಅವರಿಗೆ ನಿಮ್ಮಿಂದ ಒಂದು ಚಾವಡಿ (ದೇವಸ್ಥಾನ)ಯನ್ನು ಒಂದು ಹಗಲು ಒಂದು ರಾತ್ರಿಯಲ್ಲಿ ಕಟ್ಟಿಸಿದರೆ ಆ ಹುಲಿಯನ್ನು ನಾನು ಕರೆದುಕೊಂಡು ಹೋಗುತ್ತೇನೆ ಎಂದು ಹೇಳುತ್ತಾನೆ. ಅದಕ್ಕೆ ಶ್ರೀರಂಗರಾಯರು ಆಗಲಿ ಎಂದು ಒಪ್ಪಿಕೊಂಡು ಮುತ್ತತ್ತಿಗೆ ತನ್ನ ಪರಿವಾರ ಸಮೇತರಾಗಿ ಬಂದು ಒಂದು ಹಗಲು, ಒಂದು ರಾತ್ರಿಯಲ್ಲಿ ದೇವಸ್ಥಾನವನ್ನು ಕಟ್ಟಿಸಿ, ಹಲಗೂರಿನ ಶ್ರೀನಾರಾಯನ ಜೋಯಿಸರಿಂದ ದೇವಸ್ಥಾನಕ್ಕೆ ಪುಣ್ಯೋತ್ಸವ ಮಾಡಿಸಿ ಶ್ರೀ ಆಂಜನೇಯಸ್ವಾಮಿಯ ವಿಗ್ರಹವನ್ನು ಪಂಚಲೋಹದಿಂದ ಮಾಡಿಸಿ ಒಂದು ಶಂಕು ಜಾಗಟೆಯನ್ನು ಸಹ ಮಾಡಿಸಿ ಶ್ರೀಕಕ್ಕೆಸೊಪ್ಪಿನ ಉಡುಗೆಯನ್ನು ಕಟ್ಟಿದ್ದ ಕಾಳಿದಾಸನಿಗೆ ಕಕ್ಕೆಸೊಪ್ಪಿನ ಕಾಳಿದಾಸನೆಂದು ಹೆಸರಿಟ್ಟು ತಾವು ಮಾಡಿಸಿದ್ದ ವಿಗ್ರಹ ಮತ್ತು ಸ್ವಾಮಿಯ ಪೂಜೆ ಮಾಡಿಕೊಂಡಿದ್ದಂತ ಕಕ್ಕೆಸೊಪ್ಪಿನ ಕಾಳಿದಾಸನಿಗೆ ಹಲಗೂರಿನ ಪಕ್ಕದಲ್ಲಿರುವ ಬ್ಯಾಡರಹಳ್ಳಿ ಗ್ರಾಮದಲ್ಲಿ ೬ ಎಕರೆ ಜಮೀನನ್ನು ಅವನ ಜೀವನೋಪಾಯಕ್ಕೆಂದು ಕೊಡುಗೆಯಾಗಿ ಮತ್ತೆ ದೇವಸ್ಥಾನದ ಪೂಜೆಯಿಂದ ಬರುವಂತಹ ಸೌಲಭ್ಯಗಳೆಲ್ಲವನ್ನು ಕಕ್ಕೆಸೊಪ್ಪಿನ ಕಾಳಿದಾಸನಿಗೆ ಕೊಡುವಂತೆ ಇದೆಲ್ಲವನ್ನು ಲಿಖಿತದ ಮೂಲಕ ತಾಮ್ರದ ಚಪ್ಪೋಡಿನಲ್ಲಿ ಬರೆದು ಕಾವೇರಿ ನದಿತೀರಕ್ಕೆ ಶ್ರೀರಂಗರಾಯರು ಕಕ್ಕೆಸೊಪ್ಪಿನ ಕಾಳಿದಾಸನನ್ನು ಕರೆದುಕೊಂಡು ಹೋಗಿ ಆ ಚಪ್ಪೋಡನ್ನು ಕಾಳಿದಾಸನ ಕೈಗೆ ಕೊಟ್ಟು ಶಿವನಸಮುದ್ರಕ್ಕೆ ಹಿಂದಿರುಗುತ್ತಾರೆ. ಇದೆಲ್ಲವೂ ಸತ್ಯವಾದ ಸಂಗತಿಯೆಂದು ತಮ್ಮಲ್ಲಿ ತಿಳಿಸುತ್ತ ಆ ಶ್ರೀರಂಗರಾಯರು ವಂಶಿಕರಾದ ಆದಿಜಾಂಬವ ಕುಲಬಾಂಧವರಾದ ನಾಯಕನಹಳ್ಳಿ ಗ್ರಾಮದಲ್ಲಿ ಈಗಲೂ ಸಹ ಇದೆ.

ಇದನ್ನು ಯಾರು ಬೇಕಾದರು ಓದಿ ತಿಳಿದುಕೊಳ್ಳಬಹುದು. ಈ ರೀತಿಯಾಗಿ ಕಕ್ಕೆಸೊಪ್ಪಿನ ಕಾಳಿದಾಸನು ಶ್ರೀ ಆಂಜನೇಯಸ್ವಾಮಿಯ ನೆಲೆಯನ್ನು ಪತ್ತೆಮಾಡಿ ಸ್ವಾಮಿಯ ಅಪ್ಪಣೆಯಂತೆ ಭಕ್ತನಾಗಿ ಸ್ವಾಮಿಯ ಅಪೇಕ್ಷೆಯಂತೆ ಅವನಿಗೆ ಪ್ರಿಯವಾದಂತ ಸೇವೆಗಳೆಂದರೆ ದೊಣ್ಣೆಗಳಿಂದ ಕಾಯಿ ಹೊಡಿಯುವುದು, ಹಾಲರಬಿಸೇವೆ ಮಾಡುವುದು ಮತ್ತು ಹುಲಿವಾಹನ ಪೂಜೆ ಮೆರೆಸುವುದು. ಈಗೆ ಅನೇಕ ದೇವತಾಕಾರ್ಯ ಶ್ರೀಕಕ್ಕೆಸೊಪ್ಪಿನ ಕಾಳಿದಾಸನು ನಡೆಸಿಕೊಂಡು ಬಂದು ತಾನು ದೈವಾಧಿನ ಕಾಲದಲ್ಲಿ ತನ್ನ ವಂಶಿಕರಾದ ನಾಯಕನಹಳ್ಳಿ, ಹಲಸೂರು [ಪು.ತಿ.ನೊ]

ಬಾಳೆಹೊನ್ನಿಗ, ಮಳವಳ್ಳಿ, ದೊಡ್ಡಾಲಹಳ್ಳಿ, ನೆನೆಮಾನಹಳ್ಳಿ, ಚಿಲ್ಲಾಪುರ, ಈಗೆ ತನ್ನೆಲ್ಲ ಕುಲಬಾಂಧವರಿಗೆ ತಾನು ನಡೆಸಿಕೊಂಡು ಬಂದಂತ ಶ್ರೀ ಆಂಜನೇಯಸ್ವಾಮಿಯ ನಿಯಮದಂತೆ ಸೇವೆ ಮಾಡಿಕೊಂಡು ಹೋಗುವದೆಂದು ಹೇಳಿ ಮತ್ತೆ ಇದೆಲ್ಲಕ್ಕಿಂತ ಮುಖ್ಯವಾಗಿ ಸ್ವಾಮಿಯು ಅಪ್ಪಣೆ ಮಾಡಿದ ನಂತರ ಅವನಿಗೆ ಪ್ರಿಯವಾದಂತಹ ಪಾದುಕೆ(ಪಾದರಕ್ಷೆ)ಯನ್ನು ಸಹ ಈ ಮೇಲೆ ತಿಳಿಸಿರುವ ಗ್ರಾಮದವರು ಮತ್ತು ಬೂದಿತಿಟ್ಟನವರೊಡಗೂಡಿ ಅರ್ಪಿಸುವಂತೆ ಹೇಳಿ ಶ್ರೀಕಕ್ಕೆಸೊಪ್ಪಿನ ಕಾಳಿದಾಸನು ದೈವಾದೀನರಾಗುತ್ತಾರೆ. ಇದು ಜನಬಳಕೆಯಲ್ಲಿರುವ ವಾಸ್ತವ ಸ್ಥಿತಿ ಮತ್ತೆ ಸತ್ಯಸಂಗತಿ ಅದೇ ರೀತಿ ಶ್ರೀ ಕಕ್ಕೆಸೊಪ್ಪಿನ ಕಾಳಿದಾಸನ ಆಸೆಯಂತೆ ಹಾಗೂ ಆಜ್ಞೆಯಂತೆ ಮೇಲೆ ತಿಳಿಸಿರುವ ಎಲ್ಲ ಗ್ರಾಮದ ಆದಿಜಾಂಬವ ಕುಲಬಾಂಧವರು ಸೇರಿಕೊಂಡು ಮತ್ತೆ ಇದೆಲ್ಲಕ್ಕಿಂತ ಮುಖ್ಯವಾಗಿ ನಾಯಕನಹಳ್ಳಿ ಹಲಸೂರಿನವರು ಮುತ್ತತ್ತಿಯಲ್ಲಿ ಶ್ರೀ ಆಂಜನೇಯಸ್ವಾಮಿಗೆ ಪ್ರಿಯವಾದಂತೆ ಸೇವೆ ಮಾಡಲು ಈ ಎರಡು ಗ್ರಾಮದವರು ಹೆಚ್ಚಿನ ಜವಾಬ್ದಾರಿಯನ್ನು ತೆಗೆದುಕೊಂಡು ಕಾಡಳ್ಳಿ ಮತ್ತು ಬೂವಳ್ಳಿ ಗೌಡರ ಮುಂದಾಳತ್ವದಲ್ಲಿ ನಡೆಸಿಕೊಂಡು ಬರುತ್ತಿದ್ದು ಅದೇ ರೀತಿ ಈಗಲೂ ಸಹ ಆ ದೇವರಿಗೆ ಪ್ರಿಯವಾದಂತ ಸೇವೆಗಳೆಂದರೆ ದೊಣ್ಣೆಗಳಿಂದ ಕಾಯಿ ಒಡೆಯುವುದು, ಹಾಲರಬಿ ಸೇವೆ ಮಾಡುವುದು ಮತ್ತು ಹುಲಿವಾಹನ ಪೂಜೆ ಮೆರೆಸುವುದು. ಹೀಗೆ ಇನ್ನು ಅನೇಕ ದೇವತಾ ಕಾರ್ಯಗಳನ್ನು ಮೇಲೆ ತಿಳಿಸಿರುವ ಎಲ್ಲಾ ಗ್ರಾಮದ ಆದಿಜಾಂಬವ ಕುಲಬಾಂಧವರು ನಡೆಸಿಕೊಂಡು ಬರುತ್ತಿರುವುದು. ಮಳವಳ್ಳಿ ತಾಲ್ಲೂಕು ಎಲ್ಲಾ ಆಂಜನೇಯಸ್ವಾಮಿ ಭಕ್ತಾದಿಗಳಿಗೂ ಮತ್ತು ಕನಕಪುರ ತಾಲ್ಲೂಕು ಸ್ವಾಮಿಯ ಭಕ್ತಾದಿಗಳಿಗೂ ತಿಳಿದಂತಹ ವಿಚಾರವಾಗಿರುತ್ತದೆ. ಮತ್ತೆ ಇದೆಲ್ಲಕ್ಕಿಂತ ಮುಖ್ಯವಾಗಿ ಶ್ರೀ ಆಂಜನೇಯಸ್ವಾಮಿಯ ಅಪ್ಪಣೆಯಾದ ನಂತರ ಪಾದುಕೆ(ಪಾದರಕ್ಷೆ)ಯನ್ನು ನಮ್ಮ ಆದಿಜಾಂಬವ ಕುಲಬಾಂಧವರಾದ ಕೊಳ್ಳೇಗಾಲ ತಾಲ್ಲೂಕು ಬೂದಿತಿಟ್ಟನ ಗ್ರಾಮದವರು ಮಳವಳ್ಳಿ, ಬಾಳೆಹೊನ್ನಿಗ, ನೆನೆಮಾನಹಳ್ಳಿ ಹೀಗೆ ಮೇಲೆ ತಿಳಿಸಿರುವ ಎಲ್ಲ ಗ್ರಾಮದದೊಡಗೂಡಿ ಪಾದರಕ್ಷೆಯನ್ನು ಶ್ರೀ ಆಂಜನೇಯಸ್ವಾಮಿಗೆ ಅರ್ಪಿಸಿಕೊಂಡು ಬರುತ್ತಿರುವುದು ಸಹ ಜನಬಳಕೆಯಲ್ಲಿರುವ ವಿಚಾರ ಮತ್ತು ಸತ್ಯವಾದ ಸಂಗತಿಯು ಕೂಡ. ಇದೆಲ್ಲ ದೇವತಾ ಕಾರ್ಯವನ್ನು ನಮ್ಮ ಆದಿಜಾಂಬವ ಕುಲಬಾಂಧವರೇ ನಡೆಸಿಕೊಂಡು ಬರುತ್ತಿದ್ದು, ಮತ್ತೆ ಎಲ್ಲಾ ಆದಿಜಾಂಬವ ಕುಲಬಾಂಧವರು ಭಗವಂತನ ಸೇವೆ ಮಾಡಲು ವರ್ಷಕ್ಕೆ ಒಂದು ಸಾರಿ ಅಂದರೆ ಶ್ರಾವಣ ಮಾಸದಲ್ಲಿ ಮುತ್ತತ್ತಿಗೆ ಹೋಗಿ ಸ್ವಾಮಿಯ ದೇವತಾ ಕಾರ್ಯವನ್ನೆಲ್ಲವನ್ನು ಮುಗಿಸಿಕೊಂಡು ಅಲ್ಲೇ ಮೂರು ದಿನ ತಂಗಲೆಂದು ಮೇಲೆ ಹೆಸರಿಸಿರುವ ಎಲ್ಲಾ ಗ್ರಾಮದ ಕುಲಬಾಂಧವರು ಸೇರಿ ಮುತ್ತತ್ತಿಯಲ್ಲಿ ಶ್ರೀ ಆಂಜನೇಯಸ್ವಾಮಿ ದೇವಸ್ಥಾನದ ಎದುರಿಗೆ ೫ ರಿಂದ ೬ ಅಂಕಣ ಕೈಹಂಚಿನ ಚಾವಡಿ(ಛತ್ರ)ವನ್ನು ಕಟ್ಟಿದ್ದು, ನಮ್ಮೆಲ್ಲ ಕುಲಬಾಂಧವ ಭಕ್ತಾದಿಗಳು ಸ್ವಾಮಿಯ ಸೇವೆ ಮಾಡಲು ಹೋಗಿ ಆ ಚಾವಡಿಯಲ್ಲಿ ತಂಗಿ ಬರುತ್ತಿದ್ದ ವಿಚಾರವು ನಮ್ಮೆಲ್ಲ ಕುಲಬಾಂಧವ ಹಿರಿಯರಿಗೂ ಮತ್ತು ಮುತ್ತತ್ತಿಯಲ್ಲಿ ಹಿಂದಿನಿಂದಲೂ ನೆಲೆಸಿರುವ ಭಕ್ತಾದಿಗಳಿಗೂ ತಿಳಿದಂತಹ ವಿಚಾರವಾಗಿರುತ್ತದೆ. ಇದು ಸಹ ಸತ್ಯ

ಸಂಗತಿಯಾಗಿರುತ್ತದೆ. ಈ ಚಾವಡಿ (ಛತ್ರ)ಯು ಧರ್ಮಛತ್ರವೆಂದು ನಾಮಂಕಿತಗೊಂಡು ಹಿಂದೆ ವಿಲೇಜ್ ಪಂಚಾಯಿತಿ, ಮಂಡಲ ಪಂಚಾಯಿತಿಯಲ್ಲೂ ಧರ್ಮಛತ್ರವೆಂದು ಖಾತೆಯಲ್ಲಿ ನೋಂದಾಯಿಸಿರುತ್ತದೆ. ಈಗ ಗ್ರಾಮ ಪಂಚಾಯಿತಿಯಲ್ಲೂ ಸಹ ಸುಮಾರು ೨೦ ವರ್ಷ ರೆಕಾರ್ಡ್‌ನಲ್ಲಿ ಅ.ಸ.ನಂ ೧೪ ಖಾತೆ ನಂ.೧೨ ಆಗಿರುತ್ತದೆ. ಈ ಛತ್ರವು ತುಂಬಾ ಹಳೆಯದಾಗಿದ್ದು ೨೦-೩೦ ವರ್ಷವಾಗಿದ್ದು, ಮತ್ತೆ ಕೈಹಂಚಿನ ಚಾವಡಿಯಾದ್ದರಿಂದ ಇದು ಎಲ್ಲಾ ಗ್ರಾಮದ ಕುಲಬಾಂಧವರಿಗೆ ಸೇರಿದ್ದರಿಂದ ಯಾರು ಸಹ ಜವಾಬ್ದಾರಿಯಿಂದ ಇದನ್ನು ನೋಡಿಕೊಳ್ಳದೆ ಹೋದುದರಿಂದ ಇದರ ಹಂಚುಗಳೆಲ್ಲವೂ ಹೊಡೆದು ಹೋಗಿ, ನಶಿಸಿಹೋಗುವ ಸ್ಥಿತಿಯಲ್ಲಿದ್ದು, ಮತ್ತೆ ಮುಖ್ಯವಾಗಿ ಈ ಛತ್ರದ ಅಕ್ಕಪಕ್ಕದವರು ಸಹ ಜಾಗವನ್ನು ಒತ್ತುವರಿ ಮಾಡಿಕೊಂಡಿರುತ್ತಾರೆ. ಈ ವಿಚಾರವನ್ನು ಸ್ವಾಮಿಯ ಪೂಜೆಗೆಂದು ಹಲಗೂರು ಪಕ್ಕದ ಗ್ರಾಮವಾದ ಬಾಳೆಹೊನ್ನಿಗದ ಯಜಮಾನರು, ಮುಖಂಡರು, ನಮ್ಮ ಕುಲಬಾಂಧವರು ಕಟ್ಟಿದ್ದ ಛತ್ರದ ಸ್ಥಿತಿಗತಿಯನ್ನು ನೋಡಿ ತಕ್ಷಣ ಕಾರ್ಯೋನ್ಮುಖರಾಗಿ ಅಕ್ಕಪಕ್ಕದ ಎಲ್ಲ ಕುಲಬಾಂಧವರು ಗ್ರಾಮಕ್ಕೆ ಭೇಟಿ ನೀಡಿ ಎಲ್ಲ ಗ್ರಾಮದವರ ಸಲಹೆ ಸಹಕಾರವನ್ನು ಪಡೆದು ಮತ್ತೆ ಎಲ್ಲ ಗ್ರಾಮದ ಕುಲಬಾಂಧವರು ಒಂದು ಕಡೆ ಸೇರಿ ಚರ್ಚಿಸಿ ಮುತ್ತತ್ತಿಗೆ ಹೋಗುವಂತೆ ತೀರ್ಮಾನಿಸಿ, ಮುತ್ತತ್ತಿಗೆ ಎಲ್ಲ ಗ್ರಾಮದವರು ತೆರಳಿ, ನಾವು ಹಿಂದೆ ಕಟ್ಟಿದಂತಹ ಕೈಹಂಚಿನ ಛತ್ರ ಇದ್ದ ಸ್ಥಳದಲ್ಲೇ ಮತ್ತೆ ಹೊಸ ಛತ್ರ ಕಟ್ಟುವಂತೆ ಅದೇ ಸ್ಥಳದಲ್ಲಿ ಹದಿಕಿತ್ತು ೩ ದಿವಸ ಅಲ್ಲಿಯೇ ತಂಗಿದ್ದು, ಹದಿಗೆ ಕಲ್ಲುಗಳನ್ನು ಹೊತ್ತುಹಾಕಿ ಮುಂದಿನ ಕೆಲಸಕ್ಕೆ ಹಣದ ಅವಶ್ಯಕತೆ ಮುಖ್ಯವೆಂದು ತಿಳಿದು ಇದಕ್ಕೆ ಸಂಬಂಧಪಟ್ಟ ಹತ್ತಿರದ ಗ್ರಾಮದ ಕುಲಬಾಂಧವ ಭಕ್ತಾದಿಗಳಲ್ಲಿ ವಿಚಾರ ವಿನಿಮಯ ಮಾಡುತ್ತ ನಾವು ಈ ರೀತಿ ತೀರ್ಮಾನ ಕೈಗೊಂಡಿರುವುದಾಗಿ ತಮ್ಮಲ್ಲಿ ತಿಳಿಸಲು ಇಚ್ಛಿಸುತ್ತೇವೆ. ನಮ್ಮೆಲ್ಲ ಗ್ರಾಮಗಳಿಂದ ಹಣವನ್ನು ಕ್ರೋಢೀಕರಿಸುವುದರ ಜೊತೆಗೆ ನಮ್ಮ ಎಲ್ಲ ಕುಲಬಾಂಧವ ಭಕ್ತಾದಿಗಳು ಧನಸಹಾಯವನ್ನು ಬೇಡಿ ಮುತ್ತತ್ತಿಯಲ್ಲಿ ನಮ್ಮ ಎಲ್ಲ ಆದಿಜಾಂಬವ ಕುಲಬಾಂಧವ ಛತ್ರ ಎಂದು ಕಟ್ಟುವುದೆಂದು ನಮ್ಮ ಕುಲಬಾಂಧವ ಭಕ್ತಾದಿಗಳು ಮುಂದೆ ಬಂದು ಸಹಕರಿಸುವಂತೆ ಈ ಕರಪತ್ರದ ಮೂಲಕ ತಮ್ಮಲ್ಲಿ ಮನವಿ ಮಾಡುತ್ತ ಇದಕ್ಕೆ ತಮ್ಮ ತನುಮನದ ಜೊತೆಗೆ ಹಣ ಸಹಾಯವನ್ನು ಮಾಡುತ್ತ ತಮ್ಮ ಅಮೂಲ್ಯ ಸಲಹೆ ಸಹಕಾರ ನೀಡಿ ಪ್ರೋತ್ಸಾಹಿಸಬೇಕೆಂದು ಈ ಮೂಲಕ ಕೇಳಿಕೊಳ್ಳುತ್ತೇವೆ. ನಮಗೆ ಸಹಕರಿಸಿದ ತಮ್ಮೆಲ್ಲ ಕುಲಬಾಂಧವರಿಗೂ ಹಾಗೂ ಇತರ ವರ್ಗದ ಭಕ್ತಾದಿಗಳಿಗೂ ಆ ಮುತ್ತತ್ತಿ ಶ್ರೀ ಆಂಜನೇಯಸ್ವಾಮಿಯು ಸನ್ಮಂಗಳ ಉಂಟು ಮಾಡಲೆಂದು ಆ ಭಗವಂತನಲ್ಲಿ ಪ್ರಾರ್ಥಿಸಿಕೊಳ್ಳುತ್ತೇವೆ.

ಪ್ರಕಟಣೆ
ಆದಿಜಾಂಬವ ಕುಲಬಾಂಧವ
ಭಕ್ತಾಧಿಗಳು

ವಂದನೆಗಳೊಂದಿಗೆ,
ಸಂಗ್ರಹಣೆ ಮತ್ತು ರಚನೆ
ಬಿ.ಸಿದ್ಧಯ್ಯ, ಬಾಳೇಹೊನ್ನಿಗ

ಈ ಆದಿಜಾಂಬವ ಕುಲದವರೆಂಬ ಮಾದಿಗ ಜನಾಂಗದ ಮುತ್ತತ್ತಿರಾಯನ ವಿವಿಧ ಒಕ್ಕಲುಗಳು ಬೇರೆ ಬೇರೆ ಊರುಗಳಲ್ಲಿ ಚದುರಿರುವುದರಿಂದ ಸಂಘಟನಾ ಶಕ್ತಿ, ಶಿಕ್ಷಣದ ಕೊರತೆಗಳ ಅಭಾವದಿಂದ ಇಂದಿಗೂ ಸಹ ಇವರು ಇಚ್ಛೆಪಟ್ಟಿರುವ ನವೀಕೃತ ಧರ್ಮಛತ್ರವನ್ನು ಕಟ್ಟಲಾಗಿಲ್ಲ. ಸ್ನಾತಕೋತ್ತರ ತರಗತಿಗಳಲ್ಲಿ ಓದುವ ವಿದ್ಯಾವಂತರು ಜಾತ್ರೆಯಲ್ಲಿ ಪಾಲ್ಗೊಂಡು ಕಾಯಿಚಚ್ಚುವ, ಹಾಲರಬಿ ಹೊಡೆಯುವ, ಹುಲಿವಾಹನಸೇವೆಗಳಲ್ಲಿ ಪಾಲ್ಗೊಳ್ಳುತ್ತಿದ್ದರೂ ಸಹ ಇವರ ಕುಲಬಾಂಧವರೆಲ್ಲ ಸಂಘಟಿಸುವ ಕಾರ್ಯ ನಡೆಯುತ್ತಿಲ್ಲ.

ಮುತ್ತತ್ತಿಗೆ ಪೂಜೆಗೆ ಬಂದ ಮೇಲೆ ದೇವರಿಗೆ ಮುಡಿಕೊಡುತ್ತಾರೆ. ಹೆಂಗಸರು ಮುಡಿ ಅಥವಾ ಪಂಚಮುಡಿಯನ್ನು ಕೊಡುತ್ತಾರೆ. ಇವರ ಕರಪತ್ರದಲ್ಲಿ ಕಕ್ಕೆಸೊಪ್ಪಿನ ಕಾಳಿದಾಸನಿಗೆ ದೇವರಾದ ಶ್ರೀ ಆಂಜನೇಯನು ಪ್ರತ್ಯಕ್ಷನಾಗಿ ಈ ಸ್ಥಳವು ನನ್ನ ಭಕ್ತರ ಪುಣ್ಯಕ್ಷೇತ್ರವಾಗಬೇಕಾಗಿದೆ. ಅದಕ್ಕಾಗಿ ನನಗೆ ಒಂದು ಸ್ಥಾನ (ದೇವಸ್ಥಾನ) ಆಗಬೇಕು. ಇದು ಶಿವನಸಮುದ್ರವನ್ನು ಆಳುತ್ತಿರುವ ಶ್ರೀರಂಗರಾಯರಿಂದ ಇದು ಸಾಧ್ಯ. ಅದಕ್ಕಾಗಿ ನಾನು ಹುಲಿ (ವ್ಯಾಗ್ರ)ಯ ರೂಪವನ್ನು ತಾಳಿ ಅರಮನೆಯಲ್ಲಿ ಶ್ರೀರಂಗರಾಯರ ಮಗುವಿನ ತೊಟ್ಟಿಲ ಬಳಿ ಮಲಗುತ್ತೇನೆ. ಅದೇ ಸಮಯಕ್ಕೆ ನೀನು ನಾಮವನ್ನು ಹಣೆಯಲ್ಲಿ ಧರಿಸಿ ದಾಸಯ್ಯನೆಂದು ಹೇಳಿ ಈ ರೀತಿ ಹೇಳು ಅದೇನೆಂದರೆ ಹಿರಿಯ ಮುತ್ತತ್ತಿಯಲ್ಲಿ ಶ್ರೀ ಆಂಜನೇಯಸ್ವಾಮಿಯು ಮುತ್ತತ್ತಿರಾಯಸ್ವಾಮಿಯಾಗಿ ನೆಲೆಸಿರುವುದು. ಅದಕ್ಕಾಗಿ ನಿಮ್ಮಿಂದ ಆ ಸ್ವಾಮಿಯು ನೆಲೆಸಿರುವ ಸ್ಥಳದಲ್ಲಿ ದೇವಸ್ಥಾನ ಕಟ್ಟಿಸಿಕೊಟ್ಟರೆ ಆ ಹುಲಿ (ವ್ಯಾಗ್ರ)ಯನ್ನು ನಾನು ಹಿಂದಕ್ಕೆ ಕರೆದುಕೊಂಡು ಹೋಗುವೆ ಎಂದು ಹೇಳು ಎಂದು ಈ ರೀತಿಯಾಗಿ ಶ್ರೀ ಆಂಜನೇಯಸ್ವಾಮಿಯು ಕಾಳಿದಾಸನಿಗೆ ಹೇಳಿಕೊಡುತ್ತಾನೆ. ನಂತರ ಇದೇ ರೀತಿ ನಡೆದುಕೊಂಡ ಕಕ್ಕೆಸೊಪ್ಪಿನ ಕಾಳಿದಾಸನಿಂದ ಮುತ್ತತ್ತಿಯಲ್ಲಿ ಹುಲ್ಲಿನಗುಡಿ, ಉತ್ಸವಮೂರ್ತಿ, ಜಾಗಟೆ ಬ್ಯಾಡರಹಳ್ಳಿಯ ಬಳಿ ಹೊಲದ ಕೊಡುಗೆ ಬರುತ್ತದೆ. ಆದರೆ ಈಗ ದೇವಾಲಯದ ಅರ್ಚನೆಯ ಸ್ಥಾನವನ್ನು ವಹಿಸಿಕೊಂಡಿರುವ ತಮ್ಮಡಿಗಳ ಹೇಳಿಕೆಯ ಸ್ವರೂಪವೇ ಬೇರೆ. ಅದು ಕೆ.ಅನಂತರಾಮುರವರ ಪುಸ್ತಕದಲ್ಲಿ ಕಕ್ಕೆಸೊಪ್ಪಿನ ಕಾಳಿದಾಸನು ಕರೆತಂದ ತಮ್ಮಡಿಯು ರಾಜನಾದ ಗಂಗರಾಜನಿಂದ ದೇವಾಲಯ ಅಂದರೆ ಹುಲ್ಲುಗುಡಿಸಲು ಮಾಡಿಸಿದ ಎಂದಿದೆ. ಅಲ್ಲದೇ, ವ್ಯಾಘ್ರದ ಬದಲು ಶ್ವಾನ ಎಂದಿದೆ.

ತಾಮ್ರಶಾಸನದಲ್ಲೂ ಶ್ರೀರಂಗರಾಯನೆಂದು ಉಲ್ಲೇಖಿಸಿರುವುದರಿಂದ ಆದಿಜಾಂಬವರ ಈ ಜನಪ್ರತೀತಿಯು ಇತಿಹಾಸಕ್ಕೆ ಸಮೀಪವಾಗಿದೆ. ಮುತ್ತತ್ತಿಯ ಮೂಲಪುರುಷರು ಇವರಾದರೂ, ಏಕಾಗ್ರತೆ, ಇಚ್ಛಾಶಕ್ತಿ, ಸಾಮಾಜಿಕ ವ್ಯವಸ್ಥೆಯ ಕಾರಣದಿಂದ ಇವರಿಗೆ ಯಾವುದೇ ಆರ್ಥಿಕ ಸವಲತ್ತು ದೇವಾಲಯದಿಂದ ಇಲ್ಲವಾಗಿದೆ. ಬದಲಾಗಿ ಮುಜರಾಯಿ ಇಲಾಖೆಯಿಂದ ಜಾತ್ರೆಯ ಸೇವಾ ಕಾರ್ಯದಲ್ಲಿ ಪಾಲ್ಗೊಳ್ಳುವಿಕೆಯಿಂದ ಒಂದು ಸಾವಿರ ರೂಪಾಯಿಗಳ ಗೌರವಧನ ಮಾತ್ರ ಲಭಿಸುತ್ತದೆ. ಮುತ್ತತ್ತಿಯಲ್ಲಿ ಪ್ರಾಣಿಬಲಿ ನೀಡಿದವರು ಅದರ ಹಕ್ಕಿರುವ ಮಾದಿಗರಿಗೆ ಕೊಡುತ್ತಿದ್ದ, ಈ ಇದಕ್ಕೆ ಪ್ರತಿಯಾಗಿ ಅವರು ಹಂಚಿಕಡ್ಡಿ, ಪೊರಕೆ, ಕುಡುಗೋಲುಗಳನ್ನು ಭಕ್ತರಿಗೆ ಹೊಂದಿಸಿಕೊಡುತ್ತಿದ್ದರು. ದೇವಾಲಯ ಮುಜರಾಯಿ ಇಲಾಖೆಗೆ ಸೇರಿದ ಮೇಲೆ ಇದು ಸಹ ನಿಂತುಹೋಗಿದೆ.

## ೬.೨ ತಮ್ಮಡಿಗಳು

ಬ್ರಾಹ್ಮಣ ಅಥವಾ ಪ್ರಗತಿಯಲ್ಲಿರುವ ಇತರ ಜಾತಿಗಳಲ್ಲಿ ದೇವಾಲಯದಲ್ಲಿ ಪೂಜೆ ಮಾಡುವವರನ್ನು ಪೂಜಾರಿ, ಅರ್ಚಕರು ಮತ್ತು ಪುರೋಹಿತರು ಎಂದು ಕರೆದರೆ, ಸಮಾಜದ ಜಾತಿಪದ್ದತಿಯ ಕೆಳಸ್ತರದಲ್ಲಿ ಇರುವ ಪೂಜಾರಿಗಳನ್ನು 'ತಮ್ಮಡಿ' ಎಂದು ಕರೆಯುತ್ತಾರೆ. ಇದು ಹಳೇಮೈಸೂರು ಪ್ರಾಂತ್ಯದಲ್ಲಿ ಪ್ರಚಲಿತವಾಗಿರುವ ಪದ ಅಥವಾ ಶಬ್ದ. ಇವರು ಶಾಸ್ತ್ರೋಕ್ತವಾಗಿ ಪೂಜೆ, ಮಂತ್ರ, ಪೂಜಾವಿಧಿ ಇನ್ನಿತರ ಕ್ರಿಯೆಗಳನ್ನು ಕಲಿತವರಲ್ಲ. ತಮ್ಮಲ್ಲಿರುವ ಭಕ್ತಿಯೇ ಪೂಜೆಯಾಗಿ ಹೊರಹೊಮ್ಮುತ್ತದೆ. ಪೂಜಾವಿಧಿಗಳಲ್ಲಿ ತಮ್ಮದೇ ಆದ ಕ್ರಮವನ್ನು ಅನುಸರಿಸುತ್ತಾರೆ. ಗ್ರಾಮೀಣ ಜನಪದ ಶಾಸ್ತ್ರೋಕ್ತ ಪೂಜಾವಿಧಿಗಳನ್ನು ಬಯಸುವುದು ಇಲ್ಲ, ಬದಲಾಗಿ ಅವರ ಭಕ್ತಿ, ಶ್ರದ್ಧೆ, ಹರಕೆ, ಇಷ್ಟಾಭಿಲಾಷೆಗಳು, ಕಷ್ಟ ಈಡೇರಿದರೆ ಆಯಿತು. "ತಮ್ಮಡಿ ಎಂಬುದು ನಾಮಪದವಾಗಿದ್ದು, ಪೂಜಾರಿ; ಗುರು; ಋಷಿ ಎಂಬ ಅರ್ಥಗಳು ಇವೆ. ದ್ರಾವಿಡ ಮೂಲದ ಮುನಿಯೆಂಬುದನ್ನು ಸೇರಿಸಬಹುದು.[೯]" "ಋಷಿ ಎಂಬ ಶಬ್ದಕ್ಕಿಂತ ಮುನಿ ಎಂಬ ಮಾತು ಆದಿಮೂಲಕ್ಕೆ ಕೊಂಡೊಯ್ಯುವುದುಂಟು.[೧೦]" "ಮಾತಂಗಮುನಿ ಎಂಬುದನ್ನು ಉಲ್ಲೇಖಿಸುತ್ತ ದ್ರಾವಿಡವ್ಯಕ್ತಿ ಎಂಬುದನ್ನು ಕಾಣಬಹುದು. ಈ ತಮ್ಮಡಿ ಎಂಬ ಶಬ್ದ ದ್ರಾವಿಡಮೂಲದ್ದು[೧೧]" ಅದು ದೇವರಿಗೆ ದಾಸ ಎಂಬ ಅರ್ಥ ಸ್ಫುರಿಸುತ್ತದೆ. ತಮ್ಮ+ಅಡಿ>ತಮ್ಮಡಿ ಎಂದು ಇದನ್ನು ಬಿಡಿಸಿದರೆ ದೇವರ ಅಥವಾ ಭಗವಂತ. ಅಡಿ, ಕೆಳಗೆ, ಆಜ್ಞಾಪಾಲಕ, ದಾಸ ಎಂಬ ಅರ್ಥಗಳು ಬರುತ್ತವೆ.

ಹಳೇಮೈಸೂರು ಪ್ರಾಂತ್ಯದಲ್ಲಿ ಬ್ರಾಹ್ಮಣರನ್ನು ಬಿಟ್ಟರೆ, ಗ್ರಾಮೀಣ ದೇವತೆಗಳನ್ನು ಪೂಜಿಸುವ ಇತರರನ್ನು ತಮ್ಮಡಿ, ತಮ್ಮಡಪ್ಪ, ತಮ್ಮಡಯ್ಯ ಎಂದು ಕರೆಯುತ್ತಾರೆ. ಮುತ್ತತ್ತಿಯ ಮುತ್ತತ್ತಿರಾಯನನ್ನು ಹಲವು ಕಾಲ ಪೂಜಿಸಿಕೊಂಡು ಬಂದ ಮಾದಿಗರ ಕಕ್ಕೆಸೊಪ್ಪಿನ ಕಾಳಮುತ್ತದಾಸನು. "ದನವನ್ನು ಮೇಯಿಸುವ ಹಲಗೂರಿನ ಅಣ್ಣತಮ್ಮಂದಿರಾದ ಕಾಳೇಗೌಡ ಮತ್ತು ಕೆಂಚೇಗೌಡ ಅಣ್ಣತಮ್ಮಂದಿರು[೧೨]" "ದೇವರಿಗೆ ಬೇಕಾದ ಹುಚುಗ್ಗಿಕ್ಕಿ (ಇದರ ಅರ್ಥ ಸ್ಪಷ್ಟವಾಗುವುದಿಲ್ಲ) ಎಂಬ ವಸ್ತುವನ್ನು ಕಕ್ಕೆಸೊಪ್ಪಿನ ಕಾಳದಾಸ ಮುತ್ತನ ಕೈವಶಕ್ಕೆ ನೀಡುತ್ತಾರೆ.

ದೇವರನ್ನು ಪೂಜಿಸುವ ಅನ್ಯಗಣ್ಯ ಭಕ್ತರೆಲ್ಲಾ ಸೇರಿ ಈ ಕಾಳೆಗೌಡ, ಕೆಂಚೇಗೌಡ ಅಣ್ಣತಮ್ಮಂದಿರಿಗೆ ಕಾಳಮುತ್ತ, ಕೆಂಚಮುತ್ತ ಎಂದ ನಾಮಕರಣ ಮಾಡಿ, ದೇವರಸೇವೆಗೆ ಎಡೆಯನ್ನು ಮಾಡುವ

ಕಾರ್ಯವನ್ನು ಇವರಿಗೆ ಒಪ್ಪಿಸಿ. ಇವರನ್ನು ಕಕ್ಕೆಸೊಪ್ಪಿನ ಕಾಳಮುತ್ತದಾಸನ ವಶಕ್ಕೆ ಅಂದರೆ ಅಧೀನಕ್ಕೆ ಕೊಡುತ್ತಾರೆ. ಅಲ್ಲಿಂದ ಈ ತಮ್ಮಡಿಗಳ ಪರಂಪರೆ ಇಲ್ಲಿ ಬೆಳೆದುಬಂದಿದೆ. ಈಗ ಸಂತತಿ ಬೆಳೆದ ಹಾಗೆ ತಮ್ಮಡಿಗಳು ಬೇರೆ ಬೇರೆ ಊರುಗಳಲ್ಲಿ ಉದ್ಯೋಗಗಳನ್ನು ಕಂಡುಕೊಂಡಿದ್ದಾರೆ. ಗುಂಡಾಪುರದಲ್ಲಿ ಮುತ್ತಯ್ಯ ಮತ್ತು ರವಿ, ಎಗ್ಗನೂರಿನಲ್ಲಿ ಮುತ್ತುಸ್ವಾಮಿ, ಬಾಳ್‌ಗುಣಸೆಯಲ್ಲಿ ಚಿಕ್ಕಮುತ್ತು, ಮುತ್ರಾಜು, ಹಗಾದೂರಿನಲ್ಲಿ ಕರಿಯಪ್ಪ, ಮುತ್ತುರಾಜು, ಸಂಜೀವಮೂರ್ತಿಗಳು ನೆಲೆಗೊಂಡಿದ್ದು, ಇವರಿಗೆಲ್ಲಾ ಮುತ್ತತ್ತಿಯಲ್ಲಿಯೂ ಮನೆಗಳಿವೆ, ಇಲ್ಲಿ ವ್ಯಾಪಾರವನ್ನೂ ನಡೆಸುತ್ತಾರೆ. ದೇವರ ಪೂಜೆಯನ್ನು ವರ್ಷದಲ್ಲಿ ತಿಂಗಳಿಗನುಸಾರ ಇವರು ವಿಂಗಡಿಸಿಕೊಂಡಿದ್ದಾರೆ. ಅದರಂತೆ ಪೂಜಿಸುತ್ತಾರೆ. ಶಾಸ್ತ್ರೋಕ್ತವಾದ ಮಂತ್ರಗಳಿಲ್ಲದೆ ತಾವು ಅನುಸರಿಸಿಕೊಂಡು ಬಂದ ಭಕ್ತಿಪೂರ್ವಕ ಆರಾಧನೆಯನ್ನು ಇವರು ಮಾಡುತ್ತಾರೆ. ಹಿರಿತಮ್ಮಡಿಯು ಕೇಶಬಿಟ್ಟು ಜುಟ್ಟು ಕಟ್ಟಿಕೊಂಡಿದ್ದು ನಾಮಧರಿಸುತ್ತಾರೆ. ಕೇಸರಿಬಣ್ಣದ ಪಂಚೆ ಇವರ ಉಡುಗೆಯಾಗಿದೆ. ಅಂಗಿಯ ಬದಲು ಕೆಂಪು ಟವೆಲ್ ಅನ್ನು ಬೆನ್ನಿನ ಮೇಲೆ ಹಾಕಿಕೊಳ್ಳುತ್ತಾರೆ. ಜಾತ್ರೆಯ ವೇಳೆಯಲ್ಲಿ ದೇವಾಲಯದಿಂದ ಹೊಳೆಯತನಕ ಕಾಯಿಗಳನ್ನು ಕಾರಾಚನಾರಿನಿಂದ ಕಟ್ಟಿಬಿಡುತ್ತಿರುತ್ತಾರೆ. ಮಾದಿಗ ಭಕ್ತ ಜನಾಂಗ ಚಚ್ಚಲು ಸಿದ್ಧರಾಗಿರುತ್ತಾರೆ. ಹಾಲರಬಿ ಸೇವೆಯಲ್ಲಿಯೂ ಸಹ ಏಳಿಗೆಹಳ್ಳಿಯ ಮುತ್ತೇಗೌಡರ ಮನೆಯಿಂದ ಬಂದಂತಹ ಹಾಲು, ಮೊಸರು ಮತ್ತು ತುಪ್ಪದ ಗಡಿಗೆಯನ್ನು ದೇವರ ಬಳಿಯಿಟ್ಟು ಪೂಜಿಸಿ, ಬಳಿಯಲ್ಲಿರುವ ಮರದ ಮೇಲೆ ಕಟ್ಟಿರುವ ಅಡ್ಡ ಆಸರೆಕೋಲಿನ ಸಹಾಯದಿಂದ ಬಿಡುತ್ತಿರುತ್ತಾರೆ. ಕೆಳಗೆ ಇದನ್ನು ಹೊಡೆಯಲು ಕಾಯುತ್ತಿರುವವರಿಗೆ ಸಿಗದ ಹಾಗೆ ಇದನ್ನು ನೋಡಿಕೊಳ್ಳುತ್ತಿರುತ್ತಾರೆ. ದೇವರಿಗೆ ಮಜ್ಜನದ ನೀರನ್ನು ಹೊಳೆಯಿಂದ ತರುವುದು ಇವರ ಸೇವಾಕಾರ್ಯವೇ ಆಗಿದೆ. ಮುತ್ತತ್ತಿಗೆ ಸಂಬಂಧಪಟ್ಟ ಜನಪದ ಗೀತೆಗಳಲ್ಲಿ ಇವರನ್ನು ಉಲ್ಲೇಖಿಸಲಾಗಿದೆ.

## ೬.೩ ವೈದಿಕ ಆರಾಧಕರು

"ವೈದಿಕ ಅಂದರೆ ನಾಮಪದವಾಗಿದ್ದು ವೇದಗಳನ್ನು ಬಲ್ಲವನು; ಬ್ರಾಹ್ಮಣ್ಯ; ಆಚಾರವಂತ ವೆಂದು, ಗುಣವಾಚಕದಲ್ಲಿ ವೇದಗಳಿಗೆ ಸಂಬಂಧಿಸಿದ ಎಂಬ ಅರ್ಥಗಳು ಇವೆ.[೧೩]" ಶಾಸ್ತ್ರೋಕ್ತವಾಗಿ ಪೂಜೆ ಮಾಡುವ ಇವರನ್ನು ಮುತ್ತತ್ತಿಯಲ್ಲಿ ಜಾತ್ರೆ ಹಾಗೂ ವಿಶೇಷ ಸಂದರ್ಭದಲ್ಲಿ ಬರಮಾಡಿಕೊಳ್ಳಲಾಗುತ್ತದೆ. ಇವರು ಮಳವಳ್ಳಿ ತಾಲ್ಲೂಕಿನ ಹಲಗೂರಿನವರಾಗಿದ್ದಾರೆ. ತಿಪ್ಪಾಜೋಯಿಸರು ಎಂಬ ಅರ್ಚಕರು ಮೊದಲು ಕುದುರೆ ಮೇಲೆ ಹೋಗಿ ಮುತ್ತತ್ತಿಯ ಮುತ್ತತ್ತಿರಾಯನನ್ನು ಹಾಗೂ ಪಾದ್ದಾರೆಯ ಪಾದ್ದಾರಪ್ಪನನ್ನು ಪೂಜಿಸುತ್ತ ಬರುತ್ತಿದ್ದರು. ಮುತ್ತತ್ತಿಗೆ "ಸರ್ವಸಿದ್ಧತೆಗಳಿಂದ ಕುದುರೆಯನ್ನೇರಿ ಹಸುಬೆಚೀಲವನ್ನು ಇಳಿಬಿಟ್ಟು, ಸೇವಕನನ್ನು ಹಿಂದಿಕ್ಕಿಕೊಂಡು ಹೋಗುತ್ತಿದ್ದ ಠೀವಿಯೇ ಬೇರೆ. ಅವರನ್ನು ಕಂಡರೆ ಎಲ್ಲರೂ ಗೌರವದಿಂದ ಗದಗುಟ್ಟುತ್ತಿದ್ದರು.[೧೪]" ಇವರಿಗೆ ಇಬ್ಬರು ಗಂಡು ಮಕ್ಕಳು. ನಾರಾಯಣಪಂಡಿತರು ಮತ್ತು ವೆಂಕಣ್ಣಪಂಡಿತರು. ನಾರಾಯಣಜೋಯಿಸರು ಸಹ ಆಗಾಗ ಕುದುರೆ ಏರಿ ಹೋಗುತ್ತಿದ್ದರಾದರೂ, ಹೆಚ್ಚಾಗಿ ನಡೆದುಕೊಂಡೇ ಹೋಗಿ ಮುತ್ತತ್ತಿಯಲ್ಲಿ ಪೂಜಿಸಿ ಬರುತ್ತಿದ್ದರು. ಕ್ರಿ.ಶ.೧೯೭೮ರಿಂದ ವೆಂಕಣ್ಣಪಂಡಿತರ ಸರದಿ ಬಂದಿದ್ದು, ಇವರು ಅರ್ಚಕವೃತ್ತಿಯ ಜೊತೆಗೆ ಆಯುರ್ವೇದವನ್ನು ಸಹ ಮಾಡುತ್ತಾರೆ. ಜಾತ್ರಾವೇಳೆಯಲ್ಲಿ ಮುತ್ತತ್ತಿಗೆ ಹೋಗಿ ಅಗ್ರೋದಕವನ್ನು ತಂದು ದೇವರಿಗೆ ವೇದೋಕ್ತ ಮಂತ್ರದ ಜೊತೆಗೆ ಮಹಾಭಿಕ್ಷೇಕ, ಪಂಚಾಮೃತ, ಮಹಾಮಂಗಳಾರತಿಯನ್ನು ನೆರವೇರಿಸುತ್ತಾರೆ. ೧೯೮೬ರಲ್ಲಿ ನೂತನ ಕಟ್ಟಡದ ಉದ್ಘಾಟನೆಯಲ್ಲಿಯೂ ಹೋಮ, ಅಭಿಷೇಕ ಕಾರ್ಯಗಳಲ್ಲಿ ಇವರು ಭಾಗವಹಿಸಿ ೧೯೯೬ರಲ್ಲಿ ದೇವಾಲಯದ ಮೇಲೆ ಪ್ರತಿಷ್ಠಾಪಿತವಾದ ಕಳಶ ಸ್ಥಾಪನೆಯ ಕಾರ್ಯದಲ್ಲೂ ಪೌರೋಹಿತ್ಯವಹಿಸಿದ್ದಾರೆ. ಜಾತ್ರಾ ವೇಳೆಯಲ್ಲಿ ಮಧ್ಯಾಹ್ನ ೧೨ಗಂಟೆಯ ತನಕ ಇವರು ದೇವಸ್ಥಾನದಲ್ಲಿ ಪೂಜೆ ಮಾಡಲು ಅವಕಾಶವಿದೆ. ನಂತರ ತಮ್ಮಡಿಗಳ ಸರದಿ. ತಿಪ್ಪಾಜೋಯಿಸರಿಗಿಂತ ಮೊದಲಿನ ವೈದಿಕರ ಉಲ್ಲೇಖಗಳು ದೊರೆತ್ತಿಲ್ಲವಾದರೂ ತಾಮ್ರಶಾಸನದಲ್ಲಿ ಉಲ್ಲೇಖಿಸಿರುವ ಹಲಗೂರು ನಾರಾಣ್ಯೆಯ ಎಂಬುವವರು ಇವರ ಆದ್ಯಪುರುಷ ಇದ್ದಂತೆ ತೋರುತ್ತದೆ.ಸುಮಾರು ೧೨೦ ವರ್ಷಗಳ ನಿರಂತರ ಸೇವೆ ಈ ವೈದಿಕರದ್ದಾಗಿದೆ. ಈಗ ವೆಂಕಣ್ಣ ಪಂಡಿತರ ಅಳಿಯ ಶ್ರೀಕಂಠಶರ್ಮ ಅವರು ಪೂಜಾ ಕಾರ್ಯದಲ್ಲಿ ಭಾಗಿಗಳಾಗುತ್ತಿದ್ದಾರೆ.

## ಅಡಿಟಿಪ್ಪಣಿಗಳು

೧. ಕೆ.ಅನಂತರಾಮು ; ಸಕ್ಕರೆಸೀಮೆ, ಅನಂತಪ್ರಕಾಶನ, ಮೈಸೂರು, ಪುಟ–೨೨೨, ೧೯೮೨

೨. ಪ್ರೊ.ಎಸ್.ಕೆ.ರಾಮಚಂದ್ರರಾವ್ ; ಭಾರತೀಯ ದೇವಾಲಯಗಳ ಜಾನಪದ ಮೂಲ, ಐ.ಬಿ.ಹೆಚ್.ಪ್ರಕಾಶನ, ಬೆಂಗಳೂರು, ಪುಟ–೧.೨ ೧೯೮೧

೩. ಪ್ರೊ.ಎಸ್.ಕೆ.ರಾಮಚಂದ್ರರಾವ್ ; ಮೂರ್ತಿಶಿಲ್ಪದ ನೆಲೆ–ಹಿನ್ನೆಲೆ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ಪುಟ–೨೬,೨೭ ೧೯೭೫

೪. ಮುತ್ತುರಾಜು ; ಮುತ್ತತ್ತಿಯ ತಾಮ್ರಶಾಸನ, ಇತಿಹಾಸದರ್ಶನ, ಸಂ:೯, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ಪುಟ–೩೮, ೧೯೯೪

೫. ೬.೭.ಡಾ.ರಾಜೇಗೌಡ ಹೊಸಹಳ್ಳಿ ; ತಾಳಬಂದೋ ತಂಬೂರಿ ಬಂದೋ, ಸಿ.ವಿ.ಜಿ.ಪಬ್ಲಿಕೇಷನ್, ಬೆಂಗಳೂರು, ಪುಟ–೩೭, ೩೯,೪೦

೮. ಮುತ್ತುರಾಜು ; ಮುತ್ತತ್ತಿಯ ತಾಮ್ರಶಾಸನ, ಇತಿಹಾಸದರ್ಶನ, ಸಂಪುಟ–೯, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ಪುಟ–೩೬,೩೯ ೧೯೯೪

೯. ಕನ್ನಡ ರತ್ನಕೋಶ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ಪುಟ–೧೦೨, ೧೯೯೪

೧೦.೧೧. ಡಾ.ರಾಜೇಗೌಡ ಹೊಸಹಳ್ಳಿ ; ಪೂರ್ವೋಕ್ತ, ಪುಟ–೩೭, ೩೮

೧೨. ಮುತ್ತುರಾಜು ; ಮುತ್ತತ್ತಿಯ ತಾಮ್ರಶಾಸನ, ಇತಿಹಾಸದರ್ಶನ, ಸಂಪುಟ–೯, ಕರ್ನಾಟಕ ಇತಿಹಾಸಅಕಾಡೆಮಿ, ಬೆಂಗಳೂರು, ಪುಟ–೩೮, ೧೯೯೪

೧೩. ಕನ್ನಡ ರತ್ನಕೋಶ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ಪುಟ–೨೪೮, ೧೯೯೪

೧೪. ಕೆ.ಅನಂತರಾಮು ; ಪೂರ್ವೋಕ್ತ ಪುಟ–೨೧೮, ೧೯೮೨

## ಅಧ್ಯಾಯ-೭

## ಮುತ್ತತ್ತಿರಾಯನ ಉಪಕ್ಷೇತ್ರಗಳು

ಒಂದು ದೇವರು ಒಂದು ಕ್ಷೇತ್ರದಲ್ಲಿ ನೆಲೆಕಂಡು ಪ್ರಸಿದ್ಧತೆಯನ್ನು ಪಡೆದುಕೊಂಡ ಮೇಲೆ ಅಪಾರ ಸಂಖ್ಯೆಯ ಭಕ್ತರನ್ನು ಸೆಳೆದುಕೊಳ್ಳುತ್ತದೆ. ಇಂತಹ ಭಕ್ತರಿಗೂ ತಮ್ಮ ಆರಾಧ್ಯದೈವವನ್ನು ತಮ್ಮ ಬಳಿಯಲ್ಲಿಯೇ ಕಾಣುವ ಮತ್ತು ಪೂಜಿಸುವ ತವಕ. ಆದುದರಿಂದಲೇ ಒಂದು ಪ್ರಮುಖ ದೇವರಿಗೆ ಅಲ್ಲಲ್ಲೆ ಗುಡಿಗಳು ನಿರ್ಮಾಣವಾಗುತ್ತವೆ. ಆ ಮೂಲಕ ಇತರರಿಗೂ ಈ ದೇವರ ಮಹಿಮೆ ತಿಳಿದು ಭಕ್ತರನ್ನು ಸೆಳೆಯಲು ಅನುಕೂಲವಾಗುತ್ತದೆ. ಇಂತಹ ಗುಡಿಗಳು ಸಹ ಪ್ರಸಿದ್ಧಿಯನ್ನು ಪಡೆದು ಉಪಕ್ಷೇತ್ರಗಳಾಗುತ್ತವೆ. ಉದಾ: ವೆಂಕಟರಮಣನ ಹಲವಾರು ಉಪಕ್ಷೇತ್ರಗಳನ್ನು ನೋಡಬಹುದು. ಇವುಗಳನ್ನು ಚಿಕ್ಕತಿರುಪತಿ ಎಂತಲೇ ಕರೆಯುತ್ತಾರೆ. ದೊಡ್ಡ ತಿರುಪತಿಗೆ ಹೋಗಿ ಬರಲಾಗದವರು, ಚಿಕ್ಕತಿರುಪತಿಗೆ ಹೋಗಿ ಬರುತ್ತಾರೆ. ಮುಖ್ಯಕ್ಷೇತ್ರದಲ್ಲಿ ಆಚರಿಸುವ ಪೂಜಾವಿಧಾನ, ಸಂಪ್ರದಾಯ, ರೂಢಿ, ಪದ್ಧತಿ, ನಂಬಿಕೆ, ನಡಾವಳಿ, ಹರಕೆ, ಕಲೆ, ಜಾತ್ರೆಗಳು ಇಲ್ಲಿಯೂ ಸಹ ನಡೆಯುತ್ತದೆ. ಇವುಗಳಲ್ಲಿ ಕೆಲವು ಇಲ್ಲದೇಯೂ ಇರುತ್ತದೆ.

ಮುತ್ತತ್ತಿಯ ಮುತ್ತತ್ತಿರಾಯನಿಗೆ ಸಂಬಂಧಿಸಿದಂತೆಯೂ ಸಹ ದಕ್ಷಿಣ ಕರ್ನಾಟಕದಲ್ಲಿ ಹಲವಾರು ಉಪಕ್ಷೇತ್ರಗಳಿವೆ. ಮಂಡ್ಯ ಜಿಲ್ಲೆಯ ಹರಿಹರಪುರ, ಕೆ.ಎಂ.ದೊಡ್ಡಿ, ಕೆ.ಹೊನ್ನಲಗೆರೆ, ಬ್ಲಫ್ ಬಳಿಯ ಚಿಕ್ಕಮುತ್ತತ್ತಿ, ಗುತ್ತಲು, ರಾಮನಗರ ಜಿಲ್ಲೆಯ ಕನಕಪುರ ತಾಲ್ಲೂಕಿನ ದೊಡ್ಡಾಲಳ್ಳಿ ಬಳಿಯ ಬೆಟವರಹಳ್ಳಿ, ನಾಯಕನಹಳ್ಳಿ, ಅಚ್ಚಲು, ಹನುಮೇನಹಳ್ಳಿಗೇಟ್, ಹೊನ್ನಗಳ್ಳಿ, ಉದಾರಹಳ್ಳಿ, ಬೆಂಗಳೂರು ಗ್ರಾಮಂತರ ಜಿಲ್ಲೆಯ ದೇವನಹಳ್ಳಿ ತಾಲ್ಲೂಕಿನ ಕುಂದಾಣದಲ್ಲಿ ಹಾಗೂ ಬೆಂಗಳೂರು ನಗರದ ಕೋರಮಂಗಲ, ಜ್ಞಾನಭಾರತಿ, ಮಾಗಡಿರಸ್ತೆಯ ಸುಂಕದಕಟ್ಟೆ, ಶಿರ್ಶಿಸರ್ಕಲ್, ಕೊಟ್ಟಿಗೆಪಾಳ್ಯ, ಹುಳಿಮಾವು, ಹಾಸನ ಜಿಲ್ಲೆಯ ಗಂಡಸಿ ಬಳಿ ಇತ್ಯಾದಿ ಸ್ಥಳಗಳಲ್ಲಿ ಕಾಣಬಹುದು. ಇವುಗಳಲ್ಲಿ ಮಂಡ್ಯ ಜಿಲ್ಲೆಯ ಕೆ.ಆರ್.ಪೇಟೆ ತಾಲ್ಲೂಕಿನ ಹರಿಹರಪುರದ ಹರಿಹರೇಶ್ವರನ ದೇವಾಲಯದ ಬಳಿಯಿರುವ ಮುತ್ತುರಾಯನ ದೇವಾಲಯದ ಜಾತ್ರೆಯು ಪ್ರಥಮ ಏಕಾದಶಿಯ ಮಾರನೆ ದಿನ ನಡೆಯುತ್ತದೆ.

ಬೆಂಗಳೂರು ನಗರದಲ್ಲಿರುವ ಶಿರ್ಶಿವೃತ್ತದ ಶ್ರೀಮುತ್ತರಾಯಸ್ವಾಮಿ ದೇವಾಲಯವು ಹಾಗೂ ಕೋರಮಂಗಲದ ವೆಂಕಟೇಶ್ವರನ ಬಳಿಯ ಮುತ್ತುರಾಯಸ್ವಾಮಿ ದೇವಾಲಯಗಳು ಸಾಕಷ್ಟು ಪ್ರಗತಿಯನ್ನು ಕಂಡವುಗಳೇ ಆಗಿವೆ. ಕೆ.ಎಂ.ದೊಡ್ಡಿಯ ಬಳಿ ಒಂದು ಟ್ರಸ್ಟ್ ಸ್ಥಾಪಿಸಿ ಕಲ್ಯಾಣಮಂಟಪವನ್ನು ಸಹ ನಿರ್ಮಿಸಲಾಗಿದೆ.

ಹೀಗೆ ಆಂಜನೇಯ ಅಥವಾ ಮುತ್ತಪ್ಪ ಇಲ್ಲವೇ ಮುತ್ತತ್ತಿರಾಯನ ದೇಗುಲಗಳು ಆರಂಭವಾಗುತ್ತವೆ ಎನ್ನುವುದಕ್ಕೆ ಕನಕಪುರ ತಾಲ್ಲೂಕಿನ ನಾಯಕನಹಳ್ಳಿಯ ಬಳಿಯೇ ಗೋವಿಂದೇಗೌಡರ ತೋಟದಲ್ಲಿರುವ ಗುಡಿಯೊಂದು ಉದಾಹರಣೆಯಾಗಿದೆ. ಏಳು ವರ್ಷಗಳ ಹಿಂದೆ ಈ ತೋಟದಲ್ಲೊಂದು ನವಶಿಲಾಯುಗದ (ಕಾಲ.ಕ್ರಿ.ಪೂ.೩೦೦೦) ಕರಿಯಕಲ್ಲಿನ ತ್ರಿಕೋನಾಕಾರದ ಪುಟ್ಟ ೬ಸೆಂ.ಮೀ.ಎತ್ತರ, ೩ಸೆಂ.ಮೀ. ಅಗಲದ ಕೈಕೊಡಲಿಯೊಂದು ಭೂಮಿಯಲ್ಲಿ ದೊರೆತಿದೆ. ಅನ್ಯ ಶಿಲೆಗಳಿಗಿಂತ ವಿಭಿನ್ನವಾಗಿರುವ ಇವನ್ನು ಭಯಭಕ್ತಿಗಳಿಂದ ರಕ್ಷಿಸಿ, ಅಲ್ಲಿ ಪುಟ್ಟ ಕಲ್ಲಿನ ಗುಡಿ ಕಟ್ಟಿ, ರಕ್ಷಿಸಿ ಇಟ್ಟಿದ್ದಾರೆ. ತದನಂತರ ಮುತ್ತತ್ತಿರಾಯನು ಅಣ್ಣಳ್ಳಿಯಾಲಕ್ಕಿಗೌಡರ ಕನಸಿನಲ್ಲಿ ಬಂದು ಈ ಸ್ಥಳದಲ್ಲಿ ನನಗೊಂದು ಗುಡಿ ನಿರ್ಮಿಸಬೇಕೆಂದು ಕೇಳಿದ ಮೇಲೆ ಭಕ್ತರ ಸಹಕಾರದಿಂದ ಇಲ್ಲಿಯೇ ೫ x ೪ ಅಳತೆಯ ಗುಡಿಯೊಂದನ್ನು ಕಲ್ಲುಮಣ್ಣುಗಳಿಂದ ನಿರ್ಮಿಸಲಾಗಿದೆ. ಈ ನವಶಿಲಾಯುಗದ ಕೈಕೊಡಲಿಯಲ್ಲಿಯೇ ಮುತ್ತಪ್ಪ ಒಡಮೂಡಿರುವುದು ಎಂಬ ನಂಬಿಕೆ ಇಲ್ಲಿಯ ಭಕ್ತರಲ್ಲಿದೆ. ಇಲ್ಲಿಯೇ ವಾಮನ ಅವತಾರ, ಮತ್ಸಾವತಾರ, ಪರಶುರಾಮ ಕೃಷ್ಣರ ೫ಸೆಂ.ಮೀ.ಎತ್ತರ, ೩ಸೆಂ.ಮೀ.ಅಗಲದ ೫ ಮೂರ್ತಿಗಳಿವೆ. ಎದುರಿಗೆ ಭೈರುವನನ ಮೂರ್ತಿಯ ಕುರುಹು ಅಥವಾ ಸಂಕೇತವೆಂದು ಪರಿಗಣಿಸಿ ಒಂದು ತ್ರಿಶೂಲವನ್ನು ಇರಿಸಿದ್ದಾರೆ. ಮುತ್ತತ್ತಿಯ ದೇವಾಲಯದ ಮುಂದೆಯು ಭೈರವನ ಗುಡಿಯಿರುವುದು ಇಲ್ಲಿ ಉಲ್ಲೇಖಾರ್ಹ. ಅಂದರೆ ಶೈವ ಮತ್ತು ವೈಷ್ಣವ ದೇವತೆಗಳ ಅಭೇದ್ಯ ಆರಾಧನೆ ಕಾಣಬಹುದು.

ಇದೇ ತಾಲ್ಲೂಕಿನ ಚೀಲೂರು ಬಳಿಯ ಹನುಮೇನಹಳ್ಳಿಗೇಟ್ ಅಥವಾ ಹನುಮಂತನಗರ ಎಂಬ ಕನಕಪುರದ ಮುಖ್ಯರಸ್ತೆಯಲ್ಲೊಂದು ಮುತ್ತುರಾಯಸ್ವಾಮಿಗುಡಿಯಿದೆ. ಪೂರ್ವಕ್ಕೆ ಮುಖ ಮಾಡಿರುವ ಈ ಪುಟ್ಟ ದೇವಾಲಯವನ್ನು ಐವತ್ತು ಅಡಿ ಅಗಲ, ನಲವತ್ತು ಅಡಿ ಉದ್ದವಾಗಿ ನಿರ್ಮಿಸಿದ್ದಾರೆ. ಮುಖಮಂಟಪ, ಅಂತರಾಳ, ಗರ್ಭಗುಡಿಯಿದೆ. ಗರ್ಭಗುಡಿಯಲ್ಲಿ ಮುತ್ತತ್ತಿರಾಯನ

೩ ಅಡಿ ಎತ್ತರದ ಶಿಲಾಮೂರ್ತಿಯಿದೆ. ಮುತ್ತತ್ತಿಯಲ್ಲಿನಂತಯೇ ಇಲ್ಲಿಯೂ ೩ ಅಡಿ ಉದ್ದ, ೩ ಅಡಿ ಎತ್ತರದ ಹುಲಿಯವಾಹನವಿದೆ. ಹಜಾರದ ಕಂಬಗಳಲ್ಲಿ ಪುಷ್ಪದಳ, ಪುಷ್ಪವೃತ್ತಗಳ ಚಿತ್ರಕಲೆಯಿದೆ. ಮೇಲೆ ಗೋಪುರದಲ್ಲಿ ರಾಮಲಕ್ಷ್ಮಣ ಸೀತೆಯ ಪಾದದ ಬಳಿ ಗದೆ ಹಿಡಿದು ಕುಳಿತಿರುವ ಹನುಮಂತ ಅಥವಾ ಮುತ್ತತ್ತಿರಾಯನ ಮೂರ್ತಿಗಳಿವೆ. ಇಲ್ಲಿನ ಸುತ್ತಮುತ್ತಲ ೭ ಹಳ್ಳಿಗಳಾದ ಚೀಲೂರು, ವಡೇರಹಳ್ಳಿ ಸೈಟ್ ಕಾಲೋನಿ, ಕೆಂಪ್ಪಯ್ಯನದೊಡ್ಡಿ, ಹನುಮೇನಹಳ್ಳಿ, ಕಾಳೇಗೌಡನದೊಡ್ಡಿ, ನರಿಪುರಗಳಿಗೆಲ್ಲಾ ಮುಖ್ಯ ದೇವರು ಈ ಮುತ್ತುರಾಯ ಆಗಿದ್ದಾನೆ. ಇಲ್ಲಿಯೇ ಈ ದೇವರ ಹೆಸರಿನಿಂದ ಶ್ರೀಮುತ್ತುರಾಯಸ್ವಾಮಿ ಕಳಂಜಿಯ ಸ್ವಸಹಾಯಸಂಘ, ಹನುಮಂತನಗರ ಚೀಲೂರು ಎಂಬುದು ದಿನಾಂಕ : ೨೯-೦೭-೨೦೦೨ದಿಂದ ಪ್ರಾರಂಭವಾಗಿದೆ. ಇದು ಈ ದೇವರ ಕೃಪೆಗಾಗಿ ಸ್ಥಳೀಯ ಜನರು ಇರಿಸಿಕೊಂಡಿರುವ ಪ್ರತೀಕವಾಗಿದೆ. ಈದೇವಾಲಯದಲ್ಲಿಯೇ ಮುತ್ತತ್ತಿರಾಯನು ಕೈ ಜೋಡಿಸಿ ನಿಂತಿರುವ ಹಿತ್ತಾಳೆಯ ೧.೧/೨ ಅಡಿ ಎತ್ತರದ ಮೂರ್ತಿಯನ್ನು ಬೆಂಗಳೂರಿನ ಚಿಕ್ಕಪೇಟೆಯಿಂದ ತಂದು ಇರಿಸಲಾಗಿದೆ. ಈ ದೇವರ ಮೂರ್ತಿಯನ್ನು ತಂದಾಗ ಮುತ್ತತ್ತಿಗೆ ತೆಗೆದುಕೊಂಡು ಹೋಗಿ ಅಲ್ಲಿ ಮುತ್ತತ್ತಿರಾಯನ ಮುಂದೆ ಇರಿಸಿ ಪೂಜೆ ತೀರ್ಥಗಳನ್ನು ಅರ್ಪಿಸಿ ಇಲ್ಲಿನ ಗರ್ಭಗುಡಿಗೆ ಬರಮಾಡಿಕೊಳ್ಳಲಾಗಿದೆ. ಇಲ್ಲಿ ಪೂಜಿಸುವ ತಮ್ಮಡಿಯ ಹೆಸರು ನಾರಾಯಣಸ್ವಾಮಿ. ಇಲ್ಲಿಯೂ ಸಹ ಶನಿವಾರ, ಶ್ರಾವಣಶನಿವಾರದಲ್ಲಿ ವಿಶೇಷ ಪೂಜೆ ಬೆಳಗಿನಿಂದ ಸಂಜೆಯವರೆಗೂ ಅವಿರತವಾಗಿ ನಡೆಯುತ್ತದೆ. ಗೋಕುಲಾಷ್ಟಮಿಯ ವೇಳೆಯಲ್ಲಿ ಮುತ್ತತ್ತಿಯಲ್ಲಿ ನಡೆಯುವ ಜಾತ್ರೆಯ ಹಾಗೆಯೇ ಇಲ್ಲಿಯೂ ಜಾತ್ರೆಯನ್ನು ಆಯೋಜಿಸಲಾಗುತ್ತದೆ. ಆಗ ಮುತ್ತತ್ತಿಯ ಜಾತ್ರಾ ಮಾದರಿಯಲ್ಲಿಯೇ ಮಜ್ಜನದ ನೀರು ತರುವುದು, ಕಾಯಿ ಮತ್ತು ಅರಳಿಮರದ ಮೇಲೆ ಮೊಸರು ಹಾಲುಬೆರೆತ ಗಡಿಗೆ ಹೊಡೆಯುವ ಸೇವೆಗಳನ್ನು ನಡೆಸಲಾಗುತ್ತದೆ. ಇಲ್ಲಿಯೂ ಸಹ ಸ್ಥಳೀಯ ಮಾದಿಗ ಜನಾಂಗದವರೇ ಪಾಲುಗೊಳ್ಳುತ್ತಾರೆ.

ಅಚ್ಚಲು ಗ್ರಾಮದ ಹಿಂದೆ ಒಂದು ಪುಟ್ಟ ಮುತ್ತತ್ತಿರಾಯನ ಗುಡಿಯನ್ನು ಕಟ್ಟಲಾಗಿದ್ದು, ಇಲ್ಲಿ ಶನಿವಾರ ಮತ್ತು ಶ್ರಾವಣ ಶನಿವಾರಗಳಲ್ಲಿ ವಿಶೇಷಪೂಜೆ ನಡೆಯುತ್ತದೆ. ಉದಾರಹಳ್ಳಿ ಬಳಿಯ ತಿಮ್ಮೇಗೌಡನದೊಡ್ಡಿ ಬಳಿ ಒಂದು ಮುತ್ತತ್ತಿರಾಯನ ದೇಗುಲವಿದ್ದು ಸಾಕಷ್ಟು ವಿಶಾಲವಾಗಿದೆ. ಇಲ್ಲಿಯೂ ಸಹ ನಿತ್ಯಪೂಜೆಯೇ ಅಲ್ಲದೆ ಶನಿವಾರ, ಶ್ರಾವಣಶನಿವಾರಗಳಲ್ಲಿ ವಿಶೇಷ ಪೂಜೆ ನಡೆಯುತ್ತದೆ. ಮುತ್ತತ್ತಿಯ ಜಾತ್ರೆಯಲ್ಲಿ ಪಾಲುಗೊಳ್ಳಲು ಆಗದವರು ಇಲ್ಲಿಯೇ ಬಂದು ಪೂಜೆಯನ್ನು ಮಾಡಿಸಿ ತೃಪ್ತಿಪಟ್ಟುಕೊಳ್ಳುತ್ತಾರೆ.

"ಬೆಂಗಳೂರು ಗ್ರಾಮಾಂತರ ಜಿಲ್ಲೆಯಾದ ದೇವನಹಳ್ಳಿ ತಾಲ್ಲೂಕಿನ ಕುಂದಾಣದಲ್ಲಿಯೂ ಸಹ ಸ್ಥಳೀಯ ಭಕ್ತರು ಪುಟ್ಟ ಮುತ್ತತ್ತಿರಾಯನ ಗುಡಿಯನ್ನು ನಿರ್ಮಿಸಿಕೊಂಡಿದ್ದಾರೆ.[೧]" ನಿತ್ಯಪೂಜೆಯ ಜೊತೆಗೆ ವಿಶೇಷ ಪೂಜೆಗಳು ಇಲ್ಲಿ ನಡೆಯುತ್ತವೆ. ಸ್ಥಳೀಯ ಜನರು ಮುತ್ತತ್ತಿಯ ಜಾತ್ರೆಯಲ್ಲಿಯೂ ಪಾಲ್ಗೊಳ್ಳುತ್ತಾರೆ. "ಬೆಂಗಳೂರು ನಗರದ ಹುಳಿಮಾವಿನ ಬಳಿ ಮುತ್ತುರಾಯ ಲೇಔಟ್ ಎನ್ನುವುದನ್ನು ನಿರ್ಮಿಸಲಾಗಿದೆ. ಇಲ್ಲಿ ಶ್ರೀಮುತ್ತುರಾಯಸ್ವಾಮಿ ದೇವಾಲಯವಿದ್ದು, ಇದು ಅತಿ ಹಿರಿದಾಗಿದೆ. ಕಲ್ಲು ಚಪ್ಪಡಿ ಮತ್ತು ಕಲ್ಲುಕಂಬಗಳಿಂದ ನಿರ್ಮಿತವಾಗಿದೆ. ಮುತ್ತುರಾಯಸ್ವಾಮಿ ಜೊತೆಗೆ ನಾಗರಾಜ ದೇವಾಲಯವು ಇಲ್ಲಿವೆ. ನಾಲ್ಕು ಕಲ್ಲುಕಂಬಗಳ ಆಸರೆ ಇದ್ದು, ಗರ್ಭಗುಡಿಯ ಸುತ್ತ ಪ್ರದರ್ಶನ ಪಥವಿದೆ. ಇಲ್ಲಿಯೇ ದೊರೆತಿರುವ ನವಶಿಲಾಯುಗದ ೧೫ ಅಂಗುಲ ಎತ್ತರ, ೬ ಅಂಗುಲ ಅಗಲದ ಕರಿಯ ಕೈಗೊಡಲಿಯೊಂದನ್ನು ಇಟ್ಟು ಪೂಜಿಸಲಾಗುತ್ತಿದೆ.[೨]" ಇಲ್ಲಿ ಕಲ್ಲುಕಂಬವೊಂದರಲ್ಲಿ ಮುತ್ತತ್ತಿರಯನ ಮೂರ್ತಿ ಕೆತ್ತಲಾಗಿದ್ದು ಅದಕ್ಕೆ ಹಿತ್ತಾಳೆ ಲೋಹದ ಮುಖವಾಡವನ್ನು ಹಾಕಲಾಗಿದೆ. ಎಡಪಾರ್ಶ್ವಕ್ಕೆ ಮುಖ ಮಾಡಿರುವ ಮೂರ್ತಿಗೆ ಬಾಲದಲ್ಲಿ ವ್ಯಾಸಸ್ಥಾಪಿತ ಗಂಟೆಯ ಸಂಕೇತವಿದೆ. ಮುತ್ತತ್ತಿರಾಯನ ಜೊತೆಗೆ ಮಿನಾಕ್ಷಿ, ಸುಬ್ರಮಣ್ಯ, ಗಣಪತಿ, ನವಗ್ರಹಗಳ ಮೂರ್ತಿಯಿದ್ದು, ಪುಟ್ಟ ಪ್ರಮಾಣದ ಕೊಂಡವು ಇಲ್ಲಿದೆ. ಮುತ್ತತ್ತಿರಾಯನ ಭಕ್ತರು ಈ ಗುಡಿಯನ್ನು ನಿರ್ಮಿಸಿ ತಮ್ಮ ಭಕ್ತಿಯನ್ನು ತೋರಿಸಿದ್ದಾರೆ. ನಿತ್ಯವು ಪೂಜೆಯೇ ಅಲ್ಲದೆ ವಿಶೇಷ ದಿನಗಳ ಪೂಜೆ ನಡೆಯುತ್ತದೆ.

ಬೆಂಗಳೂರು ನಗರದ ಕೋರಮಂಗಲದ ೮ನೇ ಬಡಾವಣೆಯಲ್ಲಿರುವ ಶ್ರೀವರಪ್ರದ ಲಕ್ಷ್ಮಿವೆಂಕಟೇಶ್ವರಸ್ವಾಮಿ ಆವರಣದಲ್ಲಿ ಮುತ್ತುರಾಯಸ್ವಾಮಿ ದೇವಾಲಯವು ಪೂರ್ವದಿಕ್ಕಿಗೆ ಇದೆ. ಕಲ್ಲು ಮತ್ತು ತಾರಸಿಯಿಂದ ನಿರ್ಮಿತವಾದ ಈ ದೇವಾಲಯವು ಕ್ರಿ.ಶ.೧೯೮೬ಕ್ಕೂ ಮೊದಲು ನಿರ್ಮಾಣವಾಗಿದ್ದು, ದಿನಾಂಕ : ೨೮-೮-೧೯೮೬ರಂದು ದೇವಸ್ಥಾನದ ಜೀರ್ಣೋದ್ಧಾರ ಮತ್ತು ನೂತನ ವಿಮಾನ ಗೋಪುರವನ್ನು ಪಡೆದುಕೊಂಡು ಕುಂಭಾಭಿಷೇಕವು ನಡೆದಿದೆ. ಅಂದಿನ ಮುಖ್ಯಮಂತ್ರಿಗಳು ಶ್ರೀರಾಮಕೃಷ್ಣಹೆಗಡೆ, ಜನತಾಪಕ್ಷದ ಅಧ್ಯಕ್ಷರಾದ ಶ್ರೀಚಂದ್ರಶೇಖರ್, ಅಂದಿನ ವಿಧಾನಸಭಾ ಸದಸ್ಯರಾದ ಶ್ರೀ.ಎಂ.ಶ್ರೀನಿವಾಸ ಅವರ ನೇತೃತ್ವದಲ್ಲಿ ಪಾಂಚ್ಚರಾತ್ರರ ಮೋಕ್ಷವಾಗಿ ಈ ಶುಭಕಾರ್ಯಗಳು ಅಂದು ಜರುಗಿವೆ. ಇದಕ್ಕೆ ಸೇವಾಕರ್ತರು ಶ್ರೀಮತಿ ಜಯಮ್ಮತಿಮ್ಮಾರೆಡ್ಡಿ, ಶ್ರೀಮತಿ.ಈರಮ್ಮ ಪೇಟೆ ಎಂ.ಮುನಿರೆಡ್ಡಿ ಹಾಗೂ ಅಣ್ಣಂದಿರ ಮಕ್ಕಳು ಆಗಿದ್ದಾರೆ.

ಎಂದು ಅಲ್ಲಿನ ಶಿಲಾಫಲಕವೊಂದು ತಿಳಿಸುತ್ತದೆ. ಅಂದರೆ ಮೊದಲು ಇಲ್ಲಿ ಗ್ರಾಮೀಣ ಪರಿಸರವಿದ್ದು, ಇಲ್ಲಿನ ಭಕ್ತರು ಮುತ್ತತ್ತಿಯ ಮುತ್ತತ್ತಿರಾಯನಿಗೆ ನಡೆದುಕೊಂಡಿದ್ದಾರೆ. ನಗರ ಬೆಳೆದಂತೆ ಆರ್ಥಿಕವಾಗಿ ಮುಂದುವರೆದ ಈ ಭಕ್ತರು ತಮ್ಮ ಸೇವಾರ್ಥ ಇಲ್ಲಿನ ಗುಡಿಯ ನವೀಕರಣ ಕಾರ್ಯದಲ್ಲಿ ಭಾಗಿಯಾಗಿದ್ದಾರೆ.

ಈ ದೇವಾಲಯವು ೪೦ x ೪೦ ಅಳತೆಯದ್ದಾಗಿದ್ದು, ಹಜಾರ ಮತ್ತು ಗರ್ಭಗುಡಿಯನ್ನು ಹೊಂದಿದೆ. ದ್ವಾರದ ಮೇಲೆ ಶ್ರೀರಾಮ, ಲಕ್ಷ್ಮಣ, ಸೀತೆ, ಆಂಜನೇಯರ ಮೂರ್ತಿಗಳಿದ್ದರೆ, ಬಲಬದಿಯಲ್ಲಿ ಲಕ್ಷ್ಮೀ, ಎಡಬದಿಯಲ್ಲಿ ವೀಣಾಧಾರಿ ಸರಸ್ವತಿ ಹಾಗೂ ಎರಡೂ ಪಾರ್ಶ್ವಗಳಲ್ಲಿ ಗರುಡ ಮತ್ತು ಹನುಮಂತನ ಮೂರ್ತಿಯಿವೆ. ಗರ್ಭಗುಡಿಯಲ್ಲಿ ೨ಅಡಿ ಎತ್ತರ ಮತ್ತು ೨ ಅಡಿ ಅಗಲದ ಮುತ್ತತ್ತಿರಾಯನ ಶಿಲಾವಿಗ್ರಹವಿದೆ. ಎಡಪಾರ್ಶ್ವಮುಖಿಯಾದ ಮೂರ್ತಿಯ ಬಾಲದಲ್ಲಿ ಗಂಟೆ ಇದೆ. ಹಜಾರದಲ್ಲಿ ಸರಳವಾದ ದುಂಡನೆಯ ನಾಲ್ಕು ಕಂಬಗಳಿವೆ. ಗರ್ಭಗುಡಿಯ ಮೇಲೆ ಇರುವ ಗೋಪುರದಲ್ಲಿ ಪುಟ್ಟ ಒಳಗೋಪುರಗಳು, ತೇರುಗಳು, ಲತಾಬಳ್ಳಿಗಳ ಅಲಂಕಾರವಿದೆ. ಜೊತೆಗೆ ವಿಷ್ಣು ಆಸೀನನಾಗಿರುವ ಚಿತ್ರವೇ ಅಲ್ಲದೆ ಸರಸ್ವತಿ, ಗರುಡ, ಹನುಮ, ನರಸಿಂಹ, ಲಕ್ಷ್ಮಿಯರ ಮೂರ್ತಿ ಚಿತ್ರಗಳಿವೆ.

ಗರ್ಭಗುಡಿಯಲ್ಲಿ ಲೋಹದ ಉತ್ಸವಮೂರ್ತಿಗಳೆರಡು ಇದ್ದು ಮುತ್ತತ್ತಿರಾಯ ವೀರಮಂಡಿಯೂರಿ ಕುಳಿತ ಮತ್ತು ಕೈಮುಗಿದು ನಿಂತವುಗಳು ಇವೆ. ಪ್ರಭಾವಳಿಯೂ ಇದೆ. ಇಲ್ಲಿನ ನವಗ್ರಹ ದೇವಾಲಯದ ಮುಂದೆ ಇರುವ ಶಿಲಾಫಲಕವೊಂದು "ಶ್ರೀಮುತ್ತುರಾಯಸ್ವಾಮಿ ಸನ್ನಿಧಿಯಲ್ಲಿ ಶ್ರೀಮಹಾಗಣಪತಿ, ಆದಿತ್ಯಾದಿ ನವಗ್ರಹಗಳು ಮತ್ತು ಶ್ರೀ ನಾಗದೇವತಾ ಪ್ರತಿಷ್ಠಾಪನೆಯನ್ನು ಶ್ರೀ.ಕೆ. ಹೆಚ್.ಶ್ಯಾಮಣ್ಣರೆಡ್ಡಿಯವರು ಇವರ ಧರ್ಮಪತ್ನಿ ಶ್ರೀಮತಿ.ಅಮ್ಮಯಮ್ಮ ನವರು ಇವರುಗಳ ಅಮೃತಹಸ್ತದಿಂದ ತಾ॥೩೦-೧೦-೧೯೭೬ರಂದು ನೆರವೇರಿಸಲ್ಪಟ್ಟಿತು ಎಂಬ ಮಾಹಿತಿ ದೊರೆಯುವುದರಿಂದ ಕ್ರಿ.ಶ.೧೯೭೬ರ ಹೊತ್ತಿಗಾಗಲೇ ಮುತ್ತುರಾಯದೇವಾಲಯ ಸಾಕಷ್ಟು ಪ್ರಗತಿಯನ್ನು ಕಂಡಿತ್ತು ಎಂದು ತೀರ್ಮಾನಿಬಹುದಾಗಿದೆ. ದೇವಾಲಯದ ಮುಂಭಾಗದ ದ್ವಾರದ ಮೇಲೆ 'ಶ್ರೀಮುತ್ತುರಾಯಸ್ವಾಮಿ'ಎಂದು ಬರೆಯಲಾಗಿದೆ. ಮೇಲೆ ವೈಷ್ಣವ ಲಾಂಛನಗಳಾದ ಶಂಖ, ಚಕ್ರ ಮತ್ತು ನಾಮಗಳಿವೆ. ಶಾಸ್ತ್ರೋಕ್ತವಾದ ಪೂಜೆ, ಅಭಿಷೇಕಗಳು ಇಲ್ಲಿ ಜರುಗುತ್ತವೆ. ಇಲ್ಲಿ

ವಿಶೇಷವಾಗಿ ರೆಡ್ಡಿ ಜನಾಂಗದ ಭಕ್ತರು ಮುತ್ತತ್ತಿರಾಯನ ಆರಾಧಕರಾಗಿದ್ದಾರೆ. ಹಾಗೆಯೇ ಮುತ್ತತ್ತಿಯಲ್ಲಿ ಸೇವೆಯನ್ನು ಮಾಡುತ್ತಾರೆ.

ಬೆಂಗಳೂರಿನ ಮೈಸೂರು ರಸ್ತೆಯ ಶಿರ್ಶಿವೃತ್ತದ ಬಳಿ ಮುಖ್ಯರಸ್ತೆಯ ಎಡಭಾಗದಲ್ಲಿ ಶ್ರೀಮುತ್ತುರಾಯಸ್ವಾಮಿ ದೇವಾಲಯವು ಇದೆ. ಕ್ರಿ.ಶ.೧೯೭೭ರ ಜೂನ್ ೧೪ರಂದು ಜೀರ್ಣೋದ್ಧಾರವನ್ನು ಕಂಡಿರುವ ಈ ದೇವಾಲಯದ ಜೀರ್ಣೋದ್ಧಾರದ ಕಾರ್ಯವನ್ನು ಆಗಿನ ಪೋಲಿಸ್ ಕಮಿಷನರ್ ಶ್ರೀ.ಎಂ.ಎಲ್.ಚಂದ್ರಶೇಖರ್‌ರವರು ನೆರವೇರಿಸಿದ್ದಾರೆ. ಈ ಜೀರ್ಣೋದ್ಧಾರದ ಕಾರ್ಯಕ್ಕೆಕಾರ್ಯಕರ್ತರಾಗಿಶ್ರೀ.ಎಸ್.ಸಿ.ಬರ್ಮನ್,ಡಿ.ಸಿ.ಪಿ,ಸಿ.ಎ.ಆರ್,ಶ್ರೀ.ಆರ್.ಎಂ.ವಸಂತಕುಮಾರ್, ಡಿ.ಸಿ.ಪಿ, ಸಿ.ಎ.ಆರ್, ಶ್ರೀಕೆಂಪಯ್ಯ ಡಿ.ಸಿ.ಪಿ, ಸಿ.ಎ.ಆರ್, ಶ್ರೀಸುಭಾಷ್ ಭರಣಿ, ಡಿ.ಸಿ.ಪಿ, ಸಿ.ಎ.ಆರ್ ಅವರು ಪಾಲ್ಗೊಂಡು ದೇವಾಲಯದ ನವೀಕರಣಕ್ಕೆ ಕಾರಣರಾಗಿದ್ದಾರೆ. ಅಂದರೆ ಇಲ್ಲಿ ೧೯೭೭ಕ್ಕೂ ಮೊದಲು ಸಾಧಾರಣ ಗುಡಿಯೊಂದಿದ್ದ ಮುತ್ತುರಾಯನ ದೇವಾಲಯವಿದ್ದುದ್ದು ಗೋಚರವಾಗುತ್ತದೆ. ಸಾಕಷ್ಟು ಆಧುನಿಕ ರೀತಿಯಲ್ಲಿ ಪ್ರಗತಿಕೊಂಡು ಬೆಳೆದಿರುವ ಈ ದೇವಾಲಯದಲ್ಲಿ ಅನ್ಯಮೂರ್ತಿಗಳಾದ ವಿಘ್ನೇಶ್ವರ, ಮುಖ್ಯೇಶ್ವರ (ಮುಕ್ತೇಶ್ವರ ಇರಬೇಕು), ಸತ್ಯನಾರಾಯಣ ಮೂರ್ತಿ ಇದೆ. ಆದರೆ ಪ್ರಧಾನಮೂರ್ತಿ ಮುತ್ತುರಾಯನದೇ ಆಗಿದೆ. ದೇವಾಲಯವು ಪ್ರಾಕಾರ, ನವಗ್ರಹಗಳು, ನಾಗರಕಟ್ಟೆಗಳನ್ನು ಹೊಂದಿದ್ದು, ಕಲ್ಲು ಮತ್ತು ಟೈಲ್ಸ್ ಗಳಿಂದ ನಿರ್ಮಿತಗೊಂಡಿದೆ. ಗರ್ಭಗುಡಿಯ ಮೇಲೆ ಮೂರು ಪುಟ್ಟಗೋಪುರಗಳಿವೆ. ಮುತ್ತುರಾಯನಿಗಿರುವ ಗೋಪುರ ಎತ್ತರವಾಗಿ ಪ್ರಧಾನವಾಗಿದೆ. ಇಲ್ಲಿ ಮೂರು ಕಡೆಗೂ ಮುತ್ತತ್ತಿರಾಯ ಕುಳಿತಿರುವ ಮೂರ್ತಿಗಳಿದ್ದು, ಪುಷ್ಪಮಾಲೆ ಹಿಡಿದ ಶಿವಭಕ್ತರ ಮೂರ್ತಿಗಳಿವೆ. ಈ ಗೋಪುರಕ್ಕೆ ಚಲನಚಿತ್ರ ನಟ ಡಾ.ರಾಜಕುಮಾರ್‌ರವರು ೫೦,೦೦೦ ರೂಪಾಯಿಗಳ ನೆರವನ್ನು ನೀಡಿರುವುದು ಅವರ ಭಕ್ತಿಯ ಪ್ರತೀಕವಾಗಿದೆ. ಅಲ್ಲದೆ ಈ ದೇವಾಲಯದ ಪ್ರಗತಿಯಲ್ಲಿ ಅವರ ಭಾಗವಹಿಸುವಿಕೆಯನ್ನು ವ್ಯಕ್ತಪಡಿಸುತ್ತದೆ. ಇಲ್ಲಿನ ಶಿರ್ಶಿವೃತ್ತಕ್ಕೆ ಮುತ್ತುರಾಯವೃತ್ತ ಎಂಬ ನಾಮಕರಣವು ಇದೆ.

ಬೆಂಗಳೂರು ನಗರದ ಮೈಸೂರು ರಸ್ತೆಯ ಜ್ಞಾನಭಾರತಿ ಪ್ರವೇಶದ್ವಾರದಿಂದ ತುಸುಮುಂದೆ ಮುತ್ತುರಾಯನಗರ ಎಂಬ ಪ್ರದೇಶವಿದೆ. ರೈಲ್ವೆ ಹಳಿಯ ಬಳಿ ಶ್ರೀಮುತ್ತುರಾಯಸ್ವಾಮಿ ದೇವಸ್ಥಾನವಿದೆ. ೧೫ x೧೫ ಅಳತೆಯಲ್ಲಿ ಸಿಮೆಂಟ್ ಬ್ಲಾಕ್ ಮತ್ತು ಸಿಮೆಂಟಿನಿಂದ ನಿರ್ಮಿಸಿರುವ ಈ ದೇವಾಲಯವು ಪೂರ್ವ ದಿಕ್ಕಿಗೆ ಮುಖ ಮಾಡಿದೆ.

ಆದರೆ ಉತ್ತರ ದಿಕ್ಕಿಗೆ ಒಂದು ಗರುಡ ಗಂಭವಿದೆ. ಗರ್ಭಗೃಹದ ಹಿಂದೆ ಪ್ರದಕ್ಷಣ ಪಥವಿದ್ದು ಇದಕ್ಕೆ ಟೈಲ್ಸ್‌ಗಳನ್ನು ಹಾಕಲಾಗಿದೆ. ಗರ್ಭಗುಡಿಯ ಜೊತೆಗೆ ಹಜಾರವನ್ನು ಹೊಂದಿದೆ. ಈ ದೇವಾಲಯ ಗರ್ಭಗುಡಿಯಲ್ಲಿ ಮೂರು ಸ್ತರಗಳ ಪೀಠದ ಮೇಲೆ ೧.೧/೨ಅಡಿ ಎತ್ತರದ ಮುತ್ತುರಾಯನ ಮೂರ್ತಿಯಿದೆ. ಇದು ಎದುರುಮುಖ, ಅಭಯಹಸ್ತ, ಗದೆಯನ್ನು ಒಳಗೊಂಡಿದೆ. ಮುಕುಟ, ಕಂಠಾಭರಣಗಳು, ಕಾಲ್ಕಡಗಗಳು ಹಾಗೂ ವೀರಗಚ್ಚೆಯ ಲಕ್ಷಣವನ್ನು ಹೊಂದಿದೆ. ಇಲ್ಲಿ ದೇವಾಲಯ ಮತ್ತು ಗರುಡ ಗಂಭದ ನಡುವೆ ೧೦ಅಡಿ ಉದ್ದದ ಚೌಕಾಕಾರದ ಕಲ್ಲಿನಕೊಂಡವು ಇದೆ. ಇದರಿಂದ ಇಲ್ಲಿ ಕೊಂಡವನ್ನು ಸಹ ಹಾಯಲಾಗುತ್ತದೆ. ದೇವಾಲಯದ ಹಿಂದೆ ಭಕ್ತರಿಗೆ ತಂಗುದಾಣದ ಜಲವ್ಯವಸ್ಥೆಗೆ ಬೋರ್‌ವೆಲ್, ಒರಳುಕಲ್ಲು, ಮಾಂಸತುಂಡರಿಸುವ ಕಟ್ಟೆಗೆಯ ವ್ಯವಸ್ಥೆಯೂ ಇದ್ದು, ದೂರದೂರುಗಳಿಂದ ಬರುವ ಭಕ್ತರು ತಮ್ಮ ಸೇವೆಗಳನ್ನು ಇಲ್ಲಿ ನೆರವೇರಿಸುತ್ತಾರೆ. ಈ ದೇವಾಲಯದ ತಮ್ಮಡಿಯ ಹೆಸರು.ಆರ್.ಮುತ್ತಯ್ಯ ಎಂದಿದೆ. ದೇವಾಲಯದ ಮೇಲೆ ನಾಲ್ಕು ಸಿಂಹಗಳಿದ್ದು, ಇಬ್ಬರು ಸ್ತ್ರೀಗಣದವರು, ಏಳು ಹೆಡೆಯ ಸರ್ಪದ ಮೇಲೆ ಕುಳಿತಿರುವ ಲಕ್ಷ್ಮೀಯನ್ನು ಸ್ವಾಗತಿಸುತ್ತಿದ್ದಾರೆ. ಎರಡು ಬದಿಗಳಲ್ಲಿ ಹುತ್ತದ ಚಿತ್ರಣಗಳಿವೆ. ಮತ್ತಷ್ಟು ಅಭಿವೃದ್ಧಿ ಪಥದಲ್ಲಿರುವ ಈ ದೇವಾಲಯದಲ್ಲಿಯೂ ಸಹ ಶನಿವಾರ ಹಾಗು ವಿಶೇಷ ದಿನಗಳಲ್ಲಿ ಪೂಜೆ ನಡೆಯುತ್ತದೆ. ಮುತ್ತತ್ತಿಯ ಜಾತ್ರಾ ವೇಳೆಯಲ್ಲಿ ಇಲ್ಲಿಗೂ ಸಹ ಭಕ್ತಾಧಿಗಳು ಆಗಮಿಸುತ್ತಾರೆ.

ಬೆಂಗಳೂರು ನಗರದ ಮಾಗಡಿರಸ್ತೆಯ ಕೊಟ್ಟಿಗೆಪಾಳ್ಯದ ಎನ್.ಪಿ.ಕೆ.ಆವರಣದಲ್ಲೊಂದು ಸರಳವಾದ ಶ್ರೀಮುತ್ತುರಾಯಸ್ವಾಮಿ ದೇವಾಲಯವಿದೆ. ಇದರ ಅಭಿವೃದ್ಧಿಗೆ ಒಂದು ಸಮಿತಿಯನ್ನು ರಚಿಸಲಾಗಿದೆ. ೧೦ x ೨೦ಅಡಿಗಳ ಅಳತೆಯ ಕಲ್ಲುಕಟ್ಟಡ ಇದಾಗಿದೆ. ಇಲ್ಲಿ ೧.೧/೨ ಅಡಿ ಎತ್ತರದ ಪೀಠದ ಮೇಲೆ ೧.೧/೨ ಅಡಿ ಎತ್ತರದ ಎಡಪಾರ್ಶ್ವಮುಖವುಳ್ಳ ಮುತ್ತತ್ತಿರಾಯನ ಶಿಲಾಮೂರ್ತಿಯಿದೆ. ಬಾಲದಲ್ಲಿ ಗಂಟೆಧಾರಣೆಯಾಗಿದೆ. ಈ ಮೂರ್ತಿಯ ಜೊತೆಗೆ ಶಿವಲಿಂಗ, ಗಣೇಶನ ಮೂರ್ತಿಗಳಿವೆ. ದೀಪಸ್ತಂಭ, ಪಾದಚಿತ್ರಣ, ಶಿವಲಿಂಗವನ್ನು ಸಹ ಇಲ್ಲಿ ಇರಿಸಲಾಗಿದ್ದು, ನವಗ್ರಹಗಳ ಗುಡಿಯು ಇದೆ. ಈ ದೇವಾಲಯದ ಅರ್ಚಕರು ಕುಣಿಗಲ್‌ನವರಾದ ಹನುಮಂತಯ್ಯನವರು. ಇನ್ನು ಅಭಿವೃದ್ಧಿಯನ್ನು ಕಾಣಬೇಕಾಗಿದೆ. ಈ ದೇವಾಲಯ ಆದರೂ ಇಲ್ಲೆಲ್ಲಾ ಮುತ್ತುರಾಯನ ಭಕ್ತಸಮೂಹವಿರುವುದು ಗಮನಾರ್ಹ ಅಂಶವಾಗಿದೆ.

ಇದೇ ಮಾಗಡಿ ರಸ್ತೆಯ ಸುಂಕದಕಟ್ಟೆಯ ಬಳಿ ಶ್ರೀಮುತ್ತುರಾಯಸ್ವಾಮಿ ದೇವಾಲಯವಿದೆ. ಕ್ರಿ.ಶ.೧೯೮೯ರ ಫೆಬ್ರವರಿ ೧೦ರಂದು ಆದಿಚುಂಚನಗಿರಿ ಮಠಾಧೀಶ್ವರಾದ ಮಹಾಪೂಜ್ಯ ಶ್ರೀ.ಶ್ರೀ.ಶ್ರೀ.ಬಾಲಗಂಗಾಧರನಾಥಸ್ವಾಮಿಜಿಯವರು ದೇವಾಲಯದ ಗೋಪುರ, ಕುಂಭಾಭಿಷೇಕ ಮತ್ತು ನವಗ್ರಹಗಳ ಪ್ರತಿಷ್ಠಾಪನೆಯನ್ನು ಮಾಡಿದ್ದಾರೆ. ಅಂದರೆ ಅದಕ್ಕಿಂತಲೂ ಮೊದಲು ಇಲ್ಲಿ ದೇವಾಲಯವಿದ್ದಿದು ಸ್ಪಷ್ಟವಾಗುತ್ತದೆ. ಜೊತೆಗೆ ಹಲವು ಭಕ್ತದಾನಿಗಳಿಂದ ಈ ದೇವಾಲಯದ ಕಟ್ಟಡದ ನಿರ್ಮಾಣ ಮತ್ತು ಅಭಿವೃದ್ಧಿಯನ್ನು ನಡೆಸಿಕೊಂಡು ಬರಲಾಗುತ್ತಿದೆ. ಈ ದೇವಾಲಯವು ಗರ್ಭಗುಡಿ, ಸುಖನಾಸಿ ಮತ್ತು ಮುಖಮಂಟಪಗಳನ್ನು ಹೊಂದಿದೆ. ಮುಖಮಂಟಪದ ಬಲಭಾಗದಲ್ಲಿ ನವಗ್ರಹಗಳಿವೆ. ಇಲ್ಲಿ ಎರಡು ಗರ್ಭಗುಡಿಗಳಿದ್ದು, ಒಂದರಲ್ಲಿ ೨.೧/೨ ಅಡಿ ಎತ್ತರದ ಮುತ್ತುರಾಯನ ಮೂರ್ತಿಯಿದೆ. ವೈಷ್ಣವ ಲಾಂಛನಗಳಾದ ಶಂಖ,ಚಕ್ರ ಮತ್ತು ನಾಮಗಳಿವೆ. ಎಡ ಭಾಗದ ಮತ್ತೊಂದು ಗರ್ಭಗುಡಿಯಲ್ಲಿ ಗಣಪತಿ ಮೂರ್ತಿಯಿದೆ. ದೇವಾಲಯದ ಎದುರು ಎತ್ತರದ ದೀಪಸ್ತಂಭವಿದ್ದು, ಆಂಜನೇಯನ ಚಿತ್ರಣ ಇಲ್ಲಿದೆ. ದೇವಾರಾರ್ಚನೆಯ ವಿಶೇಷ ಕಾರ್ಯಗಳನ್ನು ಆಗಿಂದಾಗ್ಗೆ ಈ ದೇವಾಲಯದಿಂದ ಆಚರಿಸುತ್ತಾರೆ.

## ೭.೧ ಚಿಕ್ಕಮುತ್ತತ್ತಿಯ ಮುತ್ತತ್ತಿರಾಯ

ಈ ಉಪಕ್ಷೇತ್ರಗಳೆಲ್ಲಾ ಭಿನ್ನವಾದದ್ದು ಅತ್ಯಂತ ಭಿನ್ನವೂ ಮತ್ತು ತನ್ನದೇ ಆದ ಒಂದು ಮಾರ್ಗವನ್ನು ಕಂಡುಕೊಳ್ಳುತ್ತಿರುವುದು. ಶವಿನಸಮುದ್ರದ ಬ್ಲಫ್ ಬಳಿ ಇರುವ ಚಿಕ್ಕಮುತ್ತತ್ತಿಯ ಮುತ್ತುರಾಯ ಆಗಿದ್ದಾನೆ. ಮಂಡ್ಯ ಜಿಲ್ಲೆಯಲ್ಲಿಯೇ ಬರುವ ಈ ದೇವಾಲಯವು ಕಾವೇರಿ ನದಿಯು ಈಶಾನ್ಯ ದಿಕ್ಕಿಗೆ ಹರಿಯುವ ಮಾವಿನತೋಪೊಂದರಲ್ಲಿ ಇದೆ. ವಿಶಾಲವಾದ ಪ್ರಾಕಾರವನ್ನು ಹೊಂದಿರುವ ಈ ದೇವಾಲಯವನ್ನು ಕ್ರಿ.ಶ.ಸುಮಾರು ೧೯೦೩ಕ್ಕೂ ಮೊದಲೆ ನಿರ್ಮಿಸಿರುವುದಾಗಿದೆ. ೧೯೦೩ರಲ್ಲಿ ಆಗಿನ ಮೈಸೂರು ಸಂಸ್ಥಾನದ ಸೂಪರಿಟೆಂಡ್ ವಿ.ಶೇಷಾದ್ರಿಅಯ್ಯರ್ ಅವರು ಇಲ್ಲಿನ ಗೋಪುರವನ್ನು ನಿರ್ಮಿಸಿದ್ದಾರೆ. ಈ ದೇವಾಲಯವು ಮುಖಮಂಟಪ, ಸುಖನಾಸಿ ಮತ್ತು ಗರ್ಭಗುಡಿಯನ್ನು ಹೊಂದಿರುವುದಾಗಿದೆ. ಗರ್ಭಗುಡಿಯಲ್ಲಿ ೨.೧/೨ಅಡಿ ಎತ್ತರದ ಚೌಕಾಕಾರದ ಕಂಬದಲ್ಲಿ ೧.೧/೪ಅಡಿ ಎತ್ತರದ ಮುತ್ತುರಾಯನ ಮೂರ್ತಿಯನ್ನು ಬಿಡಿಸಲಾಗಿದೆ. ಆರಂಭದಲ್ಲಿ ಮುತ್ತತ್ತಿ, ಪಾದ್ದಾರೆ, ಕಂಬದರಾಯ, ಚಿಕ್ಕಮುತ್ತತ್ತಿ, ಸೋಮನಕೆರೆಗಳಲ್ಲೆಲ್ಲಾ ಮರದಿಂದ ಕಡೆದಿರುವ ಮುತ್ತತ್ತಿರಾಯನ ಮೂರ್ತಿಗಳೇ ಇದ್ದವು ಎಂಬುದು ಗಮನಾರ್ಹ. ಎಡಪಾರ್ಶ್ವ ಮುಖಿಯಾದ ಮೂರ್ತಿಯ ಬಾಲದಲ್ಲಿ ಗಂಟೆಯಧಾರಣೆ ಇದು ವ್ಯಾಸಪ್ರತಿಷ್ಠಾ ಸೂಚನೆ ನೀಡುತ್ತಿದೆ. ದೇವಾಲಯದ ಮುಖ್ಯಗೋಪುರ ೩೦ಅಡಿ ಎತ್ತರವಿದ್ದು, ೭ ಹಂತಗಳನ್ನು ಒಳಗೊಂಡು ವಿಷ್ಣು ಮತ್ತು ಸಿಂಹಗಳ ಚಿತ್ರಣಗಳಿವೆ ಮತ್ತು ತುತ್ತತುದಿಯಲ್ಲಿ ೯ ಕಳಶಗಳಿವೆ.

ಗರ್ಭಗುಡಿಯಲ್ಲಿನ ಗೋಪುರದ ಮೇಲೆ ಕೀರ್ತಿಮುಖ, ಸಿಂಹ, ದಶಾವತಾರದ ಚಿತ್ರಗಳಿವೆ. ಆಮಲಕ ಮತ್ತು ಕಳಶಗಳಿವೆ. ದೇವಾಲಯದ ಮೂರೂ ಪಾರ್ಶ್ವಗಳಲ್ಲಿ ತಂಗುದಾಣ ಹಾಗೂ ಒಂದು ಬಾವಿ ಇದೆ. ಪೌಳಿಯ ಬಲಭಾಗದ ಹೊರಗೋಡೆಯ ಮೇಲೆ ಪುಟ್ಟ ಬ್ಯಾಟರಾಯನ ಕಟ್ಟೆ ಇದೆ. ಇಲ್ಲಿ ಭಕ್ತಾದಿಗಳು ಸೇವೆಯನ್ನು ಮಾಡುವಾಗ ಕೊಡುವ ಕುರಿ, ಆಡು, ಕೋಳಿಗಳ ಬಲಿ ಈ ಬ್ಯಾಟರಾಯನಿಗೆ ಮಾತ್ರವೇ ಆಗಿದೆ. ಸಾತ್ವಿಕ ಆಹಾರದವನಾದ ಮುತ್ತುರಾಯನಿಗೆ ಪಂಚಾಮೃತ ಅರ್ಪಣೆ ಮಾತ್ರವೇ ಆಗಿದೆ. ಎಡಭಾಗದ ಪೌಳಿಯ ಹೊರಗೆ ಅರಳಿಕಟ್ಟೆಯ ಮೇಲೆ ೧.೧/೪ಅಡಿ ವ್ಯಾಸದ ಶಿವಲಿಂಗವೂ ಇದೆ. ಅಂದರೆ ಶೈವಮತದ ಆರಾಧನೆಯ ಪ್ರಾಚೀನತೆಯು ಸಹ ಇಲ್ಲಿದೆ. ದೇವಾಲಯದ ಮುಂದೆ ಎತ್ತರದ ದೀಪಸ್ತಂಭವಿದ್ದು ಇದರಲ್ಲಿ ಮುತ್ತುರಾಯನನ್ನು ಚಿತ್ರಿಸಲಾಗಿದೆ.

ಬಳಿಯಲ್ಲಿ ನಂದಿ ಮತ್ತು ವೀರಭದ್ರನ ಮೂರ್ತಿಯೇ ಅಲ್ಲದೆ, ಶಿವಲಿಂಗದ ಪೀಠವೂ ಇದೆ. ಬಳಿಯ ಮಳವಳ್ಳಿ ಪ್ರದೇಶದ ಶೇಕಡ ೮೦ರಷ್ಟು ಭಕ್ತರು ಇಲ್ಲಿನ ದೇವರಿಗೆ ನಡೆದುಕೊಳ್ಳುತ್ತಾರೆ. ಇವರಿಗೆ ಮುತ್ತತ್ತಿಯ ಮುತ್ತತ್ತಿರಾಯನಿಗೂ, ಚಿಕ್ಕಮುತ್ತತ್ತಿಯ ಮುತ್ತುರಾಯನಿಗೂ ಯಾವುದೇ ಬೇಧವಿಲ್ಲ. ಅನುಕೂಲವಾಗಿರುವ ಭಕ್ತರು ದೇವರಿಗೆ ವಸ್ತ್ರದಾನ, ನವಧಾನ್ಯದಾನ, ಅಕ್ಕಿಪಡಿ, ಕಾಣಿಕೆಗಳನ್ನು ನೀಡುತ್ತಾರೆ. ಇಲ್ಲಿಯೂ ಸಹ ಗೋಕುಲಾಷ್ಟಮಿಯ ಸಮಯದಲ್ಲಿ ಜಾತ್ರೆಯನ್ನು ಆಯೋಜಿಸಲಾಗುತ್ತದೆ. ಪೂಜೆಯ ಜೊತೆಗೆ ಹುಲಿವಾಹನಸೇವೆ ಇದನ್ನು ದೇವಾಲಯದ ಪ್ರಾಕಾರದೊಳಗೆ ಗುಡಿಯ ಸುತ್ತ ಸುತ್ತಿಸುತ್ತಾರೆ. ಕೊಂಡಹಾಯುವುದನ್ನು ರೂಢಿ ಮಾಡಿಕೊಂಡಿದ್ದಾರೆ. ಭಕ್ತರು ತಮ್ಮ ಮನೆಯ ಹಿರಿಯಮಗನಿಗೆ ಈ ದೇವರ ಹೆಸರನ್ನು ಇಡುತ್ತಾರೆ.

ಬಡಗನಾಡು ಬ್ರಾಹ್ಮಣ ಅರ್ಚಕರು ಇಲ್ಲಿ ಪೂಜಿಸುತ್ತಿದ್ದಾರೆ. ಸುಮಾರು ೮ ತಲೆಮಾರುಗಳಿಂದ ಇದರ ಪೂಜಾ ಕಾರ್ಯ ನಡೆಯುತ್ತಿದೆ. ಇವರು ಶಾಸ್ತ್ರೋಕ್ತವಾದ ರೀತಿಯಲ್ಲಿ ಪೂಜೆಯನ್ನು ಮಾಡುತ್ತಾರೆ. ಚಿಕ್ಕಮುತ್ತತ್ತಿ ಆಂಜನೇಯಸ್ವಾಮಿ ದೇವೋಭ್ಯನಮಃ ಎಂದು ದೇವರಿಗೆ ಅರ್ಘವನ್ನು ಕೊಡುತ್ತಾರೆ. ಬೆಳಕವಾಡಿಯವರಾದ ಇವರು ಶನಿವಾರ ಇಲ್ಲಿಗೆ ಬಂದು ಪೂಜಿಸುತ್ತಾರೆ. ಶ್ರಾವಣಮಾಸದಾದ್ಯಂತ ಶನಿವಾರ ಮತ್ತು ಭಾನುವಾರ ವಿಶೇಷ ಪೂಜೆ ಇರುತ್ತದೆ. ಕ್ರಿ.ಶ.೧೯೨೮ರಲ್ಲಿ ರಾಮಸ್ವಾಮಿ ಚೆಟ್ಟಿಯಾರ್‌ರವರು ದೇವರಿಗೆ ಒಂದು ಬೆಳ್ಳಿ ಕವಚವನ್ನು ಮಾಡಿಸಿಕೊಟ್ಟಿದ್ದಾರೆ. ಈ ವಿಶೇಷ ಪೂಜೆಯ ಸಂದರ್ಭದಲ್ಲಿ ಇದನ್ನು ದೇವರಿಗೆ ತೊಡಿಸುತ್ತಾರೆ. ಅಂದಿನ ಇದರ ವೆಚ್ಚ ಕೇವಲ ೫೦ ಪೈಸೆಗಳು ಮಾತ್ರ. ಕವಚದ ಮ್ಯಾಲೆ ೧-೬-೧೯೨೮ಎಂದು ನಮೂದಿಸಿದ್ದಾರೆ. ಈ ದೇವಾಲಯಕ್ಕೆ ತಮಿಳುನಾಡಿನಿಂದಲೂ ಹಲವಾರು ಭಕ್ತರು ಬರುತ್ತಾರೆ.

ಈ ಪ್ರದೇಶದಲ್ಲಿ ಭಕ್ತರಿಂದ ಸರಳವಾಗಿ 'ಮುತ್ತತ್ತಿ'ಯಿಂದ ಪ್ರೇರಿತವಾಗಿ ಮುತ್ತತ್ತಿರಾಯನ ಗುಡಿ ನಿರ್ಮಾಣವಾಗಿದ್ದರೂ ಸಹ ಇಲ್ಲೂ ಸಹ ಪಂಡಿತ ನಿಷ್ಪತ್ತಿಯ ಐತಿಹ್ಯ ಕೆಲಸ ಮಾಡಿದೆ. 'ಚಿಕ್ಕಮುತ್ತತ್ತಿ' ಎಂಬ ಹೆಸರು ಬರಲು ಕಾರಣ. ಮತ್ತೆ ರಾಮಾಯಣದ ಪ್ರಕಾರ ಇದು ಅಸಂಬದ್ಧವಾಗಿದೆಯಾದರೂ ಪಂಡಿತರ ಜಾಣತನ ಇಲ್ಲಿ ಕೆಲಸ ಮಾಡಿದೆ. ಚಿಕ್ಕಮುತ್ತತ್ತಿ ಬಳಿಯ ಜವಗ್ನಳ್ಳಿ ಗುಡ್ಡಗಳು ಎಂಬ ೩ ಗುಡ್ಡಗಳಿವೆ.

ಈ ಮೂರು ಗುಡ್ಡಗಳನ್ನು ಶ್ರೀರಾಮನು ವನವಾಸದ ವೇಳೆಯಲ್ಲಿ ತನ್ನ ತಂದೆಗೆ ಕಾವೇರಿ ನದಿಯ ದಂಡೆಯಲ್ಲಿ ಸ್ನಾನ ಪೂಜೆ ಶ್ರಾದ್ಧಗಳನ್ನು ಮಾಡುವಾಗ ಪಿಂಡಗಳನ್ನಾಗಿ ಇರಿಸಿದನಂತೆ. ಆದುದರಿಂದ ಇವುಗಳಿಗೆ ಪ್ರೇತಪರ್ವತವೆಂಬ ಹೆಸರು ಬಂದಿದೆ. ರಾಕ್ಷಸರು ಇದನ್ನು ನಾಶಪಡಿಸಿದರೆ ತಂದೆಯವರ ಶ್ರಾದ್ಧಕ್ಕೆ ಅಪಚಾರವಾಗುತ್ತದೆ ಎಂದು ಇವುಗಳನ್ನು ಕಲ್ಲಾಗಿ ಮಾಡಿದನಂತೆ.

ಸೀತಾಪಹರಣದ ವೇಳೆಯಲ್ಲಿ ರಾವಣನಿಂದ ಸಮ್ಮತಿ ಪಡೆದು ಈ ಪ್ರೇತಪರ್ವತಗಳ ಬಳಿಯಿರುವ ಈಶಾನ್ಯದಿಕ್ಕಿಗೆ ಹರಿಯುವ ಕಾವೇರಿ ನದಿಯಲ್ಲಿ ಸ್ನಾನ ಮಾಡುವಾಗ ಸೀತೆಯ ಮುಗುತಿ ಇಲ್ಲಿನ ನದಿಯಲ್ಲಿ ಬಿದ್ದು ಹೋಯಿತಂತೆ. ರಾಮಬಂಟನಾದ ಹನುಮಂತನನ್ನು ನೆನೆಯಲು ಚಿಕ್ಕ ಮಗುವಿನ ರೂಪದಲ್ಲಿ ಬಂದು ನದಿಗೆ ಬಾಲಬಿಟ್ಟು ಬಾಲದಿಂದ ಮೂಗುತಿಯನ್ನು ಎತ್ತಿಕೊಟ್ಟನಂತೆ. ಆದುದರಿಂದ ಸೀತೆಯು 'ಚಿಕ್ಕಮುತ್ತತ್ತಿ'ಎಂದು ಸ್ಥಳಕ್ಕೆ ಹೆಸರಿತ್ತು, ಚಿಕ್ಕಮುತ್ತತ್ತಿರಾಯ ಎಂದು ನೆಲಸುವಂತೆ ಆದೇಶ ನೀಡುತ್ತಾಳೆ. ಈ ಐತಿಹ್ಯದ ಸತ್ಯ ನಗಣ್ಯವಾದರೂ ಮುತ್ತತ್ತಿರಾಯನ ಆರಾಧನೆ ಇಲ್ಲೆಲ್ಲಾ ಪಸರಿಸಲು ಕಾರಣವಾಗಿದೆ. ಇಲ್ಲಿಯು ದೊಡ್ಡಮುತ್ತತ್ತಿಯಲ್ಲಿಯಂತೆಯೇ ಮಣೇವುಸೇವೆಯನ್ನು ಶುಭದಿನಗಳಲ್ಲಿ ನಡೆಸಲಾಗುತ್ತದೆ. ಇಲ್ಲಿನ ಸುತ್ತಮುತ್ತಲ ಭಕ್ತಾದಿಗಳು ಮುತ್ತತ್ತಿಯಲ್ಲಿ ನಡೆಯುವ ಜಾತ್ರೆಯಲ್ಲಿ ಪಾಲ್ಗೊಳ್ಳುತ್ತಾರೆ.

## ೭.೨ ದೊಡ್ಡ ಆಲಹಳ್ಳಿ ಬಳಿಯ ಬೇಟೆವರಹಳ್ಳಿಯ ಮುತ್ತತ್ತಿರಾಯ

ದೊಡ್ಡ ಆಲಹಳ್ಳಿಯಿಂದ ಮುಳ್ಳಳ್ಳಿಗೆ ಹೋಗುವ ಮಾರ್ಗದಲ್ಲಿ ಬರುವ ಬೇಟೆವರಹಳ್ಳಿ ಬಳಿ ಸುತ್ತಮುತ್ತಲ ಭಕ್ತಾಧಿಗಳೆಲ್ಲಾ ಸೇರಿ ಮುತ್ತುರಾಯನ ಗುಡಿ ಮಾಡಿಕೊಂಡಿದ್ದಾರೆ. ವಿಶಾಲವಾದ ನೆಲಬಂಡೆಯ ಮೇಲೆ ಚಪಡಿ ಕಲ್ಲುಗಳು ಹಾಗೂ ತುಂಡುಕಲ್ಲಿನಿಂದ ಈ ಗುಡಿಯನ್ನು ನಿರ್ಮಿಸಲಾಗಿದೆ. ಮಧ್ಯದಲ್ಲಿ ಗರ್ಭಗುಡಿಯ ಭಾಗವಿದ್ದು ಅಗಲದ ಎರಡೂ ಪಾರ್ಶ್ವಗಳಲ್ಲೂ ಸ್ಥಳ ಬಿಡಲಾಗಿದೆ. ೮ ತುಂಡು ಕಲ್ಲುಗಳ ನಡುವೆ ೧.೧/೪ಅಡಿ ಎತ್ತರದ ಮುತ್ತತ್ತಿರಾಯನ ಶಿಲಾವಿಗ್ರಹವಿದೆ. ಮುತ್ತತ್ತಿ ಜಾತ್ರೆಯ ನಂತರ ೧೫ ದಿನಗಳಾದ ಮೇಲೆ ಇಲ್ಲಿ ಜಾತ್ರೆಯನ್ನು ಆಯೋಜಿಸಲಾಗುತ್ತದೆ. ಆಗ ಅಲ್ಲಿನಂತೆಯೇ ಕಾಯಿಹೊಡೆಯುವ, ಹಾಲರಬಿ ಹೊಡೆಯುವ ಸೇವೆಗಳು ನಡೆಯುತ್ತವೆ. ಬಳಿಯ ತೋಪಿನಲ್ಲಿ ಭಕ್ತರು ಅಡುಗೆ ಮಾಡಲು ಸೌಲಭ್ಯವಿದ್ದು, ಇಲ್ಲಿಯೇ ಕುರಿ, ಮೇಕೆ ಮತ್ತು ಕೋಳಿಗಳ ಬಲಿ ನೀಡಲಾಗುತ್ತದೆ. ಇಲ್ಲಿಯೂ ಸಹ ಮಾಂಸದ ಎಡೆಯನ್ನು ಬೇಟೆರಾಯನಿಗೆ ಇಡಲಾಗುತ್ತದೆ. ಅಂದರೆ ಎಲ್ಲೆಲ್ಲಿ ಮುತ್ತತ್ತಿರಾಯನಿರುವನೋ ಅಲ್ಲೇಲ್ಲ ಬೇಟೆರಾಯನು ಇರುತ್ತಾನೆ. ಅರಣ್ಯದ ಭಾಗದಲ್ಲಿ ನೆಲೆಸಿರುವ ದೇವರಿಗೆ ಬೇಟೆಯಲ್ಲಿನ ಪಾಲು ಲಭಿಸುವ ರೂಪವಾಗಿದೆ. ಶನಿವಾರಗಳಲ್ಲಿ ಅಪಾರ ಸಂಖ್ಯೆ ಭಕ್ತರು ಇಲ್ಲಿ ಬಿಡುಬಿಟ್ಟು ತಮ್ಮ ಪೂಜೆ ಹಾಗೂ ಸೇವೆಗಳನ್ನು ನೆರವೇರಿಸಿಕೊಳ್ಳುತ್ತಾರೆ.

## ೭.೩ ಹೊನ್ನಗಳ್ಳಿ ಬಳಿಯ ಕಡೆಗುಡ್ಡೆ ಮುತ್ತಪ್ಪ

ರಾಮನಗರ ಜಿಲ್ಲೆ ಕನಕಪುರ ತಾಲ್ಲೂಕು ಸಾತನೂರು ಹೋಬಳಿಗೆ ಸೇರುವ ಹೊನ್ನಗಳ್ಳಿ ಬಳಿಯ 'ಕಡೆಗುಡ್ಡೆ ಮುತ್ತಪ್ಪ' ಎಂಬ ದೇವಾಲಯವು ಹೊನ್ನಗಳ್ಳಿಯಿಂದ ೨ ಕಿ.ಮಿ.ದೂರದಲ್ಲಿದೆ. ದೂಪದ ಮರದ ಬಳಿಯಿರುವ ಕಟ್ಟೆಯ ಪೂರ್ವ ದಿಕ್ಕಿಗೆ ಮುಖ ಮಾಡಿರುವಂತೆ ದೇವಾಲಯವಿದೆ. ೧೦೦ ಅಡಿ ಉದ್ದ, ೫೦ ಅಡಿ ಅಗಲದ ಹೆಂಚು ಮತ್ತು ಇಟ್ಟಿಗೆಯಿಂದ ಈ ದೇವಾಲಯವನ್ನು ನಿರ್ಮಿಸಲಾಗಿದೆ. ೧೦-೪-೧೯೬೮ರಂದು ಗಾರೆಯನ್ನು ಲೇಪಿಸಿರುವ ಬರಹವಿರುವುದನ್ನು ನೋಡಿದರೆ ಅದಕ್ಕೂ ಮೊದಲಿನಿಂದಲೂ ಇಲ್ಲಿ ಗುಡಿಯಿದ್ದಿರುವುದು ತಿಳಿಯುತ್ತದೆ. ಗರ್ಭಗುಡಿ, ಹಜಾರ ಮಾತ್ರ ಈ ಗುಡಿಯಲ್ಲಿವೆ. ಹಜಾರದಲ್ಲಿನ ಇಕ್ಕೆಲದ ಗೋಡೆಗಳಲ್ಲಿ ಹತ್ತು ಹತ್ತು ದೀಪದ ಗೂಡುಗಳಿವೆ. ಕಂಬದ ತೊಲೆಗಳ ಆಸರೆ ಈ ಹಜಾರಕ್ಕೆ ಇದೆ. ಗರ್ಭಗುಡಿಯಲ್ಲಿ ೨ ಅಡಿ ಉದ್ದ ಮುತ್ತುರಾಯನ ಶಿಲಾವಿಗ್ರಹವಿದೆ. ಎಡಪಾರ್ಶ್ವಮುಖಿ ಮತ್ತು ಬಲದಲ್ಲಿ ಗಂಟೆಯಿದೆ. ಗೊಲ್ಲಜನಾಂಗದವರು ಇಲ್ಲಿ ತಮ್ಮಡಿಗಳಾಗಿದ್ದಾರೆ. ಶನಿವಾರದಂದು ಅಪಾರ ಸಂಖ್ಯೆಯಲ್ಲಿ ಬರುವ ಮಹಿಳಾ ಭಕ್ತಾದಿಗಳಿಗಾಗಿ ದೇವರ ಬಳಿ ಪೂಜೆ ನಡೆಸುತ್ತಾರೆ.

ಇಲ್ಲಿಯೂ ಸಹ ಮುತ್ತತ್ತಿಯ ಜಾತ್ರೆಯ ಬಳಿಕ ಜಾತ್ರೆ ಆಯೋಜಿಸಲಾಗುತ್ತದೆ. ವಾಹನ ಉತ್ಸವ ಇಲ್ಲಿರುವುದಿಲ್ಲ. ಬದಲಾಗಿ ಹಲಸೂರು ನಾಯಕನಹಳ್ಳಿ, ಬಾಳೆಹೊನ್ನಿಗ ಮತ್ತು ಮಳವಳ್ಳಿಯ ಮಾದಿಗ ಪುರುಷರಿಂದ ಕಾಯಿ ಮತ್ತು ಹಾಲರಬಿ ಹೊಡೆಯುವ ಸೇವೆಗಳು ಇರುತ್ತವೆ. ಇಲ್ಲಿಯೂ ಭಕ್ತರು ತಮ್ಮ ಪ್ರಾಣಿಬಲಿ ಸೇವೆ ಮಾಡಲು ಸ್ಥಳಾವಕಾಶವಿದ್ದು, ಬಳಿಯಲ್ಲಿನ ನೀರಿನ ಹೊಂಡದ ಜಲವನ್ನು ಉಪಯೋಗಿಸುತ್ತಾರೆ. ತಮ್ಮಡಿಯು ಪೂಜೆಗೆ ಮುನ್ನ ಈ ಹೊಂಡದ ಜಲದಲ್ಲಿ ಮಿಂದು ಜಲವನ್ನು ದೇವರಿಗೂ ತಂದು ಮಜ್ಜನಸೇವೆ ಮಾಡುತ್ತಾನೆ. ಇನ್ನು ಸಾಕಷ್ಟು ಅಭಿವೃದ್ಧಿ ಕಾಣಬೇಕಾಗಿದೆ ಈ ದೇವಾಲಯ.ಮೇಲೆ ಉಲ್ಲೇಖಿಸಿರುವ ಉಪಕ್ಷೇತ್ರಗಳು ಮುತ್ತತ್ತಿರಾಯನ ಆರಾಧನೆಯನ್ನು ಹೇಗೆ ವಿವಿದೆಡೆಗಳಲ್ಲಿ ಪ್ರಸಾರ ಮಾಡಿವೆ ಎಂಬ ನಿದರ್ಶನಗಳಾಗಿವೆ. ಒಂದು ಪ್ರಧಾನ ದೇವಾಲಯಕ್ಕೆ ಉಪಕ್ಷೇತ್ರಗಳು ಹೇಗೆ ಉಗಮಿಸಿ ಬೆಳೆಯುತ್ತವೆ ಎಂಬುದಾಗಿದೆ. ಮುತ್ತತ್ತಿಗೆ ಸಂಬಂಧಿಸಿದ ಐತಿಹ್ಯ ಪ್ರಸಿದ್ಧಿಗೆ ಬಂದ ಮೇಲೆ ಎಲ್ಲಾ ಕ್ಷೇತ್ರಗಳಲ್ಲಿಯೂ ಮುತ್ತತ್ತಿರಾಯ ಎಂಬುದರ ಬದಲಾಗಿ ಮುತ್ತುರಾಯ, ಮುತ್ರಾಯ, ಎಂಬ ಹೆಸರೇ ಪ್ರಸಿದ್ಧಿಗೆ ಬಂದಿದೆ.

## ಅಡಿಟಿಪ್ಪಣಿಗಳು

೧. ಸು.ರಂಗಸ್ವಾಮಿ ; ಕರ್ನಾಟಕದ ದೇವಾಲಯಗಳು, ಹಂಸಧ್ವನಿ ಪ್ರಕಾಶನ, ಪುಟ-೧೧೮, ೧೯೯೬

೨. ಮುತ್ತುರಾಜು ; ಬೆಂಗಳೂರು ನಗರ ಮತ್ತು ರಾಮನಗರ ಜಿಲ್ಲೆಯ ಕೆಲವು ನವಶೋಧಿತ ಪ್ರಾಚ್ಯಾವಶೇಷಗಳು, ಇತಿಹಾಸ ದರ್ಶನ, ಸಂಪುಟ-೨೩, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ಪುಟ-೭, ೨೦೦೮

# ಅಧ್ಯಾಯ–೮

## ಮುತ್ತತ್ತಿಯ ಆಧುನಿಕ ಮಿಶ್ರಸಂಸ್ಕೃತಿ

ಮುತ್ತತ್ತಿ ಸ್ಥಳವು ದನದ ದೊಡ್ಡಿಯ ಪರಿಸರದಿಂದ ಬೆಳೆದು ಬಂದರೂ ದೇವಾಲಯ ಪ್ರಸಿದ್ಧಿಗೆ ಬಂದಂತೆ ಇಲ್ಲಿ ಹೆಚ್ಚು ಜನರು ನೆಲೆಸುವಿಕೆ ಪ್ರಾರಂಭವಾಯಿತು. ಕೇವಲ ಬೆರಳಣಿಕೆಯಷ್ಟಿದ್ದ ಜನಸಂಖ್ಯೆ ಹೆಚ್ಚಳವಾಯಿತು. ಗಿರಿಜನರಾದ ಸೋಲಿಗರು ಹಾಗೂ ವ್ಯಾಪಾರಿವರ್ಗದವರು ಇಲ್ಲಿಯೇ ನೆಲೆನಿಲ್ಲುವಂತಾಯಿತು. ಉತ್ತಮ ದೇವಾಲಯದ ನಿರ್ಮಾಣದಿಂದಾಗಿ ರಾಜ್ಯದ ಎಲ್ಲ ವರ್ಗದವರ ಗಮನ ಇತ್ತ ಹರಿಯತೊಡಗಿತು. ಬಸವನಬೆಟ್ಟವು ಕಾಯ್ದಿಟ್ಟ ಅರಣ್ಯಪ್ರದೇಶವೆಂದು ಘೋಷಿಸಿದ ಮೇಲೆ ಅರಣ್ಯ ಇಲಾಖೆಯವರು ಇಲ್ಲಿ ಕಾರ್ಯಸ್ಥಾನವನ್ನು ತೆರೆದರು. ಬಳಿಯಲ್ಲಿರುವ ಫಿಶ್ ಕ್ಯಾಂಪಿಗಾಗಿ ಬರುವ ಪ್ರವಾಸಿಗರು ಇಲ್ಲಿಗೆ ಭೇಟಿ ನೀಡುವಂತಾಯಿತು. ಗಿರಿಜನ ವಾಹಿನಿಯು ಯಾವುದೇ ಅಬ್ಬರವಿಲ್ಲದೆ ಇಲ್ಲಿ ಜೀವನವನ್ನು ನಡೆಸಿಕೊಂಡು ಬರುತ್ತಿದೆ. ವ್ಯಾಪಾರಿ ವರ್ಗದವರು ಸಹಜವಾಗಿಯೇ ತಮ್ಮ ವ್ಯವಹಾರಭರಿತ ನಡತೆಯಿಂದ ಬದುಕು ಸಾಗಿಸುತ್ತಿದ್ದಾರೆ. ಸದಾ ಪ್ರವಾಸಿಗರು ಮತ್ತು ಭಕ್ತರಿಂದ ಮುತ್ತತ್ತಿ ಸ್ಥಳವು ತುಂಬಿರುತ್ತವೆ. ಅಲ್ಲದೆ ಶಬರಿಮಲೆಯ ಅಯ್ಯಪ್ಪಸ್ವಾಮಿಗೆ ಯಾತ್ರೆ ಕೈಗೊಳ್ಳುವಂತೆ ಮುತ್ತತ್ತಿರಾಯನಿಗೆ ಮಾರುತಿಮಾಲೆ ಎಂಬ ಸಂಪ್ರದಾಯವೊಂದು ಆರಂಭವಾಗಿದೆ. ಭಕ್ತಜನರು ಈ ಮೂಲಕವು ಇಲ್ಲಿಗೆ ಬರುತ್ತಿದ್ದಾರೆ.

## ೮.೧ ವ್ಯಾಪಾರಿ ವರ್ಗ

ಮುತ್ತತ್ತಿಯಲ್ಲಿನ ರಮ್ಯತಾಣ ಮತ್ತು ದೇವಾಲಯವು ಪ್ರಸಿದ್ಧಿಗೆ ಬಂದಂತೆ ಇಲ್ಲಿನ ವ್ಯಾಪಾರವು ಸಹ ಬಿರುಸಿನಿಂದ ನಡೆಯಲು ಪ್ರಾರಂಭಿಸಿತು. ಮುಖ್ಯರಸ್ತೆಯಲ್ಲಿರುವ ಹಲಗೂರುವಿನಿಂದ ಎಲ್ಲ ವಸ್ತುಗಳನ್ನು ಪ್ರವಾಸಿಗರು ಹಾಗೂ ಭಕ್ತಾದಿಗಳು ತರುವುದು ದುಸಾಧ್ಯವಾಯಿತು. ಸಹಜವಾಗಿಯೇ ಬೇಸಿಗೆ ಕಾಲದಲ್ಲಿ ತಂಪು ಪಾನೀಯಗಳ ಅವಶ್ಯಕತೆ, ಬೇಡಿಕೆಗಳು ಹೆಚ್ಚ ತೊಡಗಿತು. ಮದ್ಯಪಾನ ಮಾಡುವವರು ಇಲ್ಲಿನ ವ್ಯಾಪಾರಿಗಳನ್ನೇ ಅವಲಂಬಿಸಬೇಕಾಯಿತು. ಸುತ್ತಮುತ್ತಲಿನ ಹಳ್ಳಿಗಳಿಂದ ವ್ಯಾಪಾರ ಮಾಡಲು ಜನರು ಬಂದು ನೆಲೆಸಿ ಅಂಗಡಿಗಳನ್ನು ತೆರೆಯಲಾರಂಭಿಸಿದರು. ದೇವಾಲಯದ ಮುಂದಿನ ಮುಖ್ಯರಸ್ತೆಯ ಎರಡೂ ಕಡೆಯೂ ಅಂಗಡಿಗಳು, ಮನೆಗಳು, ವಸತಿನಿಲಯಗಳು ತೆರೆಯಲ್ಪಟ್ಟವು. ಅಂಗಡಿಗಳಲ್ಲಿ ವ್ಯಾಪಾರವು ಉತ್ತಮವಾಗಿ ಸಾಗತೊಡಗಿತು. ಸಣ್ಣಪ್ರಮಾಣದ ಹೋಟೆಲ್‌ಗಳು ತೆರೆಯಲ್ಪಟ್ಟು ಪ್ರವಾಸಿಗರಿಗೆ ಆಹಾರ ಲಭಿಸುತವಂತಾಯಿತು. ವ್ಯಾಪಾರಿ ವರ್ಗದವರು ಸಾಕಷ್ಟು ಹಣ ಮಾಡಿಕೊಂಡು ಸಿರಿವಂತರಾದರು. ದೇವಾಲಯದ ತಮ್ಮಡಿಯೇ ಅಲ್ಲದೆ ಅವರ ಕುಟುಂಬದವರೂ ಸಹ ವ್ಯಾಪಾರದ ಅಂಗಡಿಯನ್ನು ತೆರೆದರು. ಅಂಗಡಿಗಳಲ್ಲಿ ಟಿ.ವಿ, ಫ್ರಿಡ್ಜಗಳನ್ನು ಇಡುವಂತಾಯಿತು. ಅಡಿಗೆ ಮಾಡಲು ಸಾಂಪ್ರದಾಯಿಕ ಸೌದೆ ಬಳಸುವುದನ್ನು ಬಿಟ್ಟು ೨೨ ಕಿ.ಮೀ.ದೂರದ ಹಲಗೂರಿನಿಂದ ಗ್ಯಾಸ್ ಪಡೆದು ತಂದು ಅಡುಗೆ ಮಾಡಲಾರಂಭಿಸಿದರು. ಇತ್ತೀಚಿಗೆ ಅಪಾರವಾದ ಮುತ್ತತ್ತಿರಾಯನನ್ನು ಕುರಿತ ಸಿ.ಡಿ.ಕ್ಯಾಸೆಟ್ ಹಾಗೂ ಭಾವಚಿತ್ರಗಳ ಮಾರಾಟ ಹೆಚ್ಚಾಗಿರುವುದರಿಂದ ಪ್ರತಿ ಅಂಗಡಿಗಳಲ್ಲಿಯೂ ಇವುಗಳ ಮಾರಾಟ ನಡೆಯುತ್ತಿದೆ. ಶ್ರಾವಣ ಶನಿವಾರ ಹಾಗೂ ಜಾತ್ರೆಯ ದಿನಗಳಲ್ಲಿ ಮತ್ತಷ್ಟು ಬಿರುಸಿನಿಂದ ವ್ಯಾಪಾರ ಸಾಗುತ್ತದೆ.

ಇವರು ಎಲ್ಲಾ ಪದಾರ್ಥಗಳನ್ನು ಹಲಗೂರಿನಿಂದ ತಂದು ಮಾರುತ್ತಾರೆ. ಸಾರಿಗೆಸೌಲಭ್ಯ ಹಾಗೂ ಉತ್ತಮ ರಸ್ತೆಯಿಂದಾಗಿ ಮಾರುವ ಪದಾರ್ಥಗಳನ್ನು ತರಲು ಕಷ್ಟವೇನು ಆಗುವುದಿಲ್ಲ. ಸೋಲಿಗರು ತಂದು ಕೊಡುವ ದೂಪ, ಜೇನುತುಪ್ಪ ಹಾಗೂ ಸೌಧೆಗಳನ್ನು ಇಟ್ಟುಕೊಂಡು ಮಾರುತ್ತಾರೆ. ಒಕ್ಕಲಿಗರು, ಕುರುಬರ ಸಂಖ್ಯೆಯೇ ಹೆಚ್ಚು.

ಇಷ್ಟೇಲ್ಲಾ ವ್ಯಾಪಾರಕ್ಕೂ ಕಾರಣ ಆ ಮುತ್ತತ್ತಿರಾಯ ಎಂದು ನಂಬಿದ್ದಾರೆ. ಇವರು ಶನಿವಾರಗಳಂದು ಕಥೆ ಓದಿಸುವುದು, ಮುತ್ತತ್ತಿರಾಯನನ್ನು ಪೂಜಿಸುವುದನ್ನು ರೂಢಿ ಮಾಡಿಕೊಂಡಿದ್ದಾರೆ. ಕೆಲವರು ವಸತಿನಿಲಯಗಳನ್ನು ನಿರ್ಮಿಸಿ ಅದರಲ್ಲಿ ಆಧುನಿಕ ಐಷಾರಾಮಿ ಹಾಸಿಗೆಗಳ ವ್ಯವಸ್ಥೆಯನ್ನೂ ಮಾಡಿ ಉತ್ತಮ ಹಣಸಂಪಾದನೆಯನ್ನು ಮಾಡಿಕೊಳ್ಳುತ್ತಿದ್ದಾರೆ. ಮದ್ಯಪಾನದ ಮಾರಾಟ ಭರಾಟೆಯಿಂದ ನಡೆಯುತ್ತದೆ. ಇದರಿಂದ ಕೆಲವೊಮ್ಮೆ ಅಪರಾಧಗಳೂ ಜರಗುವುದುಂಟು. ಹಿಂದೆ ಎಲ್ಲ ಮಾರುವ ಪದಾರ್ಥಗಳನ್ನು ಹಲಗೂರಿನಿಂದ ಕತ್ತೆಯ ಮೇಲೆ ಹಾಕಿಕೊಂಡು ಬರುತ್ತಿದ್ದರು. ಈಗ ಆ ಕಷ್ಟ ಸಾಧ್ಯದ ಕೆಲಸದ ಅಗತ್ಯವಿಲ್ಲ. ನಗರ ಪ್ರದೇಶಗಳಿಂದ ಉಂಟಾಗುವ ಜಂಜಾಟದಿಂದ ದೂರ ಇದ್ದು ಅಲ್ಪ ಬದಲಾವಣೆ ಬಯಸುವ ಜನರು ರಮ್ಯವು, ಜಲ ಅನುಕೂಲವು ಇರುವ ಈ ಸ್ಥಳಕ್ಕೆ ಬರಲು ಬಯಸುವುದುಂಟು. ಅಲ್ಲದೇ ಶಾಲಾಕಾಲೇಜುಗಳಿಂದ ಇಲ್ಲಿಗೆ ಪ್ರವಾಸವನ್ನು ಹಮ್ಮಿಕೊಳ್ಳುವುದುಂಟು. ಇದರಿಂದ ವ್ಯಾಪಾರಿವರ್ಗದವರು ಮಾರುವ ವಸ್ತುಗಳು ಭರಾಟೆಯಿಂದ ಬಿಕರಿಯಾಗುತ್ತವೆ.

## ೮.೨ ಗಿರಿಜನವಾಹಿನಿ

ಗಿರಿಜನ ವರ್ಗಕ್ಕೆ ಸೇರಿರುವ ಕಾಡುಸೋಲಿಗರು ಇಲ್ಲಿ ಬಂದು ನೆಲೆಸಿದ್ದಾರೆ. ಇವರಿಗಾಗಿ ದೇವಾಲಯದ ಹಿಂಭಾಗದ ಬೆಟ್ಟದ ತಪ್ಪಲಿನಲ್ಲಿ ಕಾಲೋನಿಯೊಂದನ್ನು ಮಾಡಿಕೊಡಲಾಗಿದೆ. ಇವರು ಮುತ್ತತ್ರಾಯನ ಕಾಲೋನಿ ಎಂದು ಕರೆಯುತ್ತಾರೆ. ೨೦೦೧ರ ಜನಗಣತಿಯ ಪ್ರಕಾರ ೬೫ಮನೆಗಳು ಇಲ್ಲಿದ್ದು, ಗಂಡಸರು ೧೪೭, ಹೆಂಗಸರು ೧೫೩ ಒಟ್ಟು ೩೦೦ ಎಂದಿರುವುದರಿಂದ ಇವರದೇ ಇಲ್ಲಿ ಸಿಂಹಪಾಲು ಆಗಿದೆ. ಮುತ್ತತ್ತಿಯ ಜೊತೆ ಜೊತೆಯಲ್ಲಿಯೇ ಬದುಕಿ ಬೆಳೆದುಕೊಂಡು ಬಂದ ಇವರು ಗುಂಗುರು ಕೂದಲಿನ ಕಪ್ಪುವರ್ಣದಿಂದ ಕೂಡಿದ್ದಾರೆ. ಕಾಡಿನಿಂದ ದೂಪ, ಜೇನುತುಪ್ಪ ಸೌಧೆಗಳನ್ನು ತಂದು ಇಲ್ಲಿನ ವ್ಯಾಪಾರಿಗಳಿಗೆ ಮಾರಿ ಜೀವನ ಸಾಗಿಸುತ್ತಾರೆ. ಮುತ್ತತ್ತಿಯ ಜನಪದ ಗೀತೆಗಳಲ್ಲಿ ಇವರನ್ನು ಉಲ್ಲೇಖಿಸಲಾಗಿದೆ. ಅದು ಬಿಟ್ಟರೆ ಇಲ್ಲಿನ ಮುತ್ತತ್ತಿರಾಯ ದೇವಾಲಯದ ಸೇವಾಕಾರ್ಯಗಳಲ್ಲಿ ಇವರ ನಿರ್ದಿಷ್ಟ ಪಾತ್ರ ಕಡಿಮೆಯೇ ಆಗಿದೆ. ಪರಿವರ್ತನೆಯ ಹಾದಿಯಲ್ಲಿದ್ದು ಕೆಲವರು ಸುಶಿಕ್ಷಿತರೂ ಆಗಿದ್ದಾರೆ. ಆದರೆ ಮುತ್ತತ್ತಿರಾಯನಿಗೆ ನಡೆದುಕೊಳ್ಳುತ್ತಾರೆ. ಜಾತ್ರೆಯ ವೇಳೆಯಲ್ಲಿ ಸಡಗರದಿಂದ ಭಾಗವಹಿಸುತ್ತಾರೆ.

ತಮ್ಮದೇ ಆದ ಹೆಣ್ಣುದೇವತೆಯೊಂದನ್ನು ಇವರು ಪೂಜಿಸುತ್ತಾರೆ. ಅದಕ್ಕೆ 'ಕೊಂಡದಮ್ಮ' ಎಂದು ಕರೆಯುತ್ತಾರೆ. ಮುತ್ತತ್ತಿಯಿಂದ ತಿರುಗಣೆ ಮಡುವಿಗೆ ಹೋಗುವ ಮಾರ್ಗದಲ್ಲಿ ಬೆಟ್ಟದ ತಪ್ಪಲಿನ ರಸ್ತೆಯ ಬದಿಯಲ್ಲಿ ಕೊಂಡದಮ್ಮನ ಗುಡಿಯೊಂದನ್ನು ಮಾಡಿಕೊಂಡಿದ್ದಾರೆ. ಪುಟ್ಟ ದೊಡ್ಡ ಕಲ್ಲುರಾಶಿಗಳ ಮಧ್ಯದಲ್ಲಿ ೩ ಮೆಟ್ಟಿಲುಗಳುಳ್ಳ ಒಳಕೊಂಡದಾಕೃತಿಯ ವೇದಿಕೆಯ ಮೇಲೆ ೧೧ ಪುಟ್ಟ ಪುಟ್ಟ ಕಲ್ಲುಗಳಿವೆ. ಇವೆಲ್ಲಾ ವಿವಿಧ ದೇವರುಗಳು ಎಂದು ನಂಬಿದ್ದಾರೆ. ದೇವಿಯೊಬ್ಬಳ ಒಡೆದಿರುವ ಪಾದದ ಬೆರಳುಳ್ಳ ಶಿಲಾಪ್ರತಿಮೆಯನ್ನು ಇಲ್ಲಿ ಊಳಲಾಗಿದೆ. ಕಲ್ಲುರಾಶಿಯ ಕೊಂಡದಮ್ಮನಿಗೆ ಚಪ್ಪರದ ಅಲಂಕಾರವನ್ನು ಮಾಡಲಾಗಿದೆ. ಬಲಗಡೆಗೆ ೩೦ ಅಡಿ ಉದ್ದ ೨ ಅಡಿ ಅಗಲದ ಕೊಂಡವಿದೆ. ವರ್ಷಕೊಮ್ಮೆ ಕೊಂಡ ಹಾಯುವ ಪದ್ಧತಿಯನ್ನು ರೂಢಿಸಿಕೊಂಡಿದ್ದಾರೆ.

ಬಹುಹಿಂದೆ ಇವರು ಬಿಳಿಗಿರಿರಂಗಿನ ಬೆಟ್ಟದ ಕಡೆಯಿಂದ ವಲಸೆಬಂದಿದ್ದು ಇವರಲ್ಲಿ ಸೋಲಿಗರಕುಣಿತವೆಂಬ ಕುಣಿತವೊಂದಿದೆ. ಈ ಕುಣಿತವನ್ನು ಕ್ಯಾತೇದೇವರ ಹಬ್ಬದಲ್ಲಿ ಮಾಡುತ್ತಾರೆ. ಈ ಹಬ್ಬವನ್ನು ಶಿವರಾತ್ರಿ ಹಬ್ಬದ ಹಿಂದುಮುಂದಿನ ತಿಂಗಳಲ್ಲಿ ಆಚರಿಸುತ್ತಾರೆ. ಈ ಸೋಲಿಗರಿಗೆ ಕ್ಯಾತೇದೇವರು ಮುಖ್ಯ ಆರಾಧ್ಯದೈವ. ಆಗಿದ್ದರೂ ಜಡೆಸ್ವಾಮಿ, ಕಾರಪ, ಹುಲೀರಪ್ಪ, ಬಿಲ್ಲಯ್ಯ ಮಹದೇಶ್ವರ, ರಂಗಸ್ವಾಮಿ ಮುಂತಾದ ದೇವರುಗಳನ್ನೂ ತಮ್ಮ ತಮ್ಮ ಮನೆತನಗಳಿಗೆ ಬಂದ ಹಾಗೆ ಪೂಜಿಸುತ್ತಾರೆ. ಇವರ ಕುಣಿತದಲ್ಲಿ ೨೦ರಿಂದ ೨೫ ಜನರವರೆಗೂ ಸೇರಿರುತ್ತಾರೆ. ಪೂರ್ವಾಭ್ಯಾಸವು ನಡೆದಿರುತ್ತದೆ. ಕಲಾವಿದರೆಲ್ಲ ಸೇರಿ ವೃತ್ತಾಕಾರವಾಗಿ ನಿಂತು ನಾನಾಭಂಗಿಗಳಲ್ಲಿ ಕುಣಿಯುತ್ತಾರೆ. ಇವರ ಕುಣಿತಕ್ಕೆ ವಿಶೇಷವಾದ ವೇಷಭೂಷಣಗಳೇನೂ ಇರುವುದಿಲ್ಲ. ನಿತ್ಯ ಉಡುಪಿನಲ್ಲೆ ಪ್ರದರ್ಶನ ನೀಡುತ್ತಾರೆ. ನಿಕ್ಕರು ಅಥವಾ ಪಂಚೆ, ಬನೀನು ಇಲ್ಲವೇ ಷರಟು ಧರಿಸಿರುತ್ತಾರೆ. ಕೆಲವು ಸಮಯದಲ್ಲಿ ಬರೀ ಚಡ್ಡಿ ಹಾಕಿಕೊಂಡು ಮೈಗೆ ಸೊಪ್ಪನ್ನು ಕಟ್ಟಿಕೊಂಡು ಕುಣಿಯುತ್ತಾರೆ. ಕೊಡಂಗಿ ವೇಷದವನೊಬ್ಬ ಇರುತ್ತಾನೆ. ಇವನು ಮುಖಕ್ಕೆಲ್ಲಾ ಕಪ್ಪುಮಸಿಯನ್ನು ಬಳಿದುಕೊಂಡು ಕಾಲಿಗೆಗೆಜ್ಜೆ ಕಟ್ಟಿಕೊಂಡಿರುತ್ತಾನೆ. ನಂತರ 'ತಂಬಡಿ'ಯೊಬ್ಬ ದೇವರನ್ನು ತಲೆ ಮೇಲೆ ಹೊತ್ತುಕೊಳ್ಳುತ್ತಾನೆ. ಇವನ ಮೈಮೇಲೆ ಕ್ಯಾತೇದೇವರು ಬರುತ್ತದೆ. ಎಲ್ಲರೂ ತಮ್ಮ ಕಷ್ಟಸುಖಗಳನ್ನು ಹೇಳಿಕೊಳ್ಳುತ್ತಾರೆ. ನಂತರ ಹರಕೆ ಕಟ್ಟುವುದು ನಡೆದು, ನಂತರ ಭೋಜನ ನಡೆಯುತ್ತದೆ. ಈ ಕುಣಿತವನ್ನು ಸಹ ಕೊಂಡದಮ್ಮನ ಬಳಿಯೇ ನಡೆಸಲಾಗುತ್ತದೆ. ವಿವಿಧ ಬಗೆಯ ಶಿಲೆಗಳನ್ನು ಪ್ರತ್ಯೇಕ ದೇವರೆಂದು ಗುರುತಿಸುತ್ತಾರೆ.

## ೮.೩ ನಗರ ಜಾನಪದ

"ನಗರ ಜಾನಪದ'ವೆಂಬುವ urban folklore ಎಂಬ ಇಂಗ್ಲೀಷ್ ಪದಕ್ಕೆ ಸಂವಾದಿಯಾಗಿ ಬಳಸುತ್ತಿರುವ ಪದವಾಗಿದೆ ಈ ಪರಿಕಲ್ಪನೆ ಮೂಲತಃ ಪಾಶ್ಚಾತ್ಯ ದೇಶದ್ದು, ಇಂಡಿಯಾನ ವಿಶ್ವವಿದ್ಯಾಲಯದ ಜಾನಪದ ಪ್ರಾಧ್ಯಾಪಕ ರಿಚಾರ್ಡ ಎಂ.ಡಾರ್ಸನ್ ಅವರು American Folklore ಈ ಗ್ರಂಥದಲ್ಲಿ ಬರೆದ 'ಆಧುನಿಕ ಜಾನಪದ'ಎನ್ನುವ ಲೇಖನದಲ್ಲಿ ಮೊದಲ ಬಾರಿಗೆ 'ನಗರ ಜಾನಪದ'ವನ್ನು ಕುರಿತು ಬರೆದರು[೧]"

"ಭಾರತದಂತಹ ಗ್ರಾಮೀಣ ಮೂಲದ ದೇಶದ ಜಾನಪದದಲ್ಲಿ ನಗರ ಜಾನಪದ ಎನ್ನುವ ವರ್ಗೀಕರಣ ಸಾಧ್ಯವೇ? ಬೇಕೆ? ಎನ್ನುವುದು ಬಹಳ ಮುಖ್ಯವಾದ ವಿಷಯ. ಸಾಮಾಜಿಕವಾಗಿ ಸಾಂಸ್ಕೃತಿಕವಾಗಿ ಭಾರತ ಅಮೇರಿಕಕ್ಕಿಂತ ತೀರಾ ಭಿನ್ನವಾದ ದೇಶ. ಭಾರತದ ನಗರಗಳು ಆಧುನಿಕ ನಾಗರಿಕತೆಯ ಸತ್ವವನ್ನು ಹೊರನೋಟಕ್ಕೆ ಮೈಗೂಡಿಸಿಕೊಂಡಿವೆಯೇ ಹೊರತು ಅಲ್ಲಿನ ಜನಪದ ಸಮಷ್ಟಿ ಮನಸ್ಸಿನಲ್ಲಿ ಗ್ರಾಮೀಣ ಜಾನಪದದ ಸ್ಪಂದನವೇ ಇರುತ್ತದೆ. ಅಲ್ಲಿ ರೂಪುಗೊಳ್ಳುವ ಜಾನಪದದ ಭಾಷಿಕ ಅಭಿವ್ಯಕ್ತಿಯಲ್ಲಿ ಹಾಗೂ ಹೊರಮೈಯಲ್ಲಿ ನಾಗರೀಕತೆಯ ಚಹರೆ ಕಾಣಿಸಿಕೊಳ್ಳುತ್ತದೆ. ನಗರದಲ್ಲಿ ಹುಟ್ಟಿಕೊಳ್ಳುವ ಜಾನಪದವು ಪರಂಪರೆಯಿಂದಲೇ ಸ್ಫೂರ್ತಿ ಪಡೆದುಕೊಳ್ಳುತ್ತವೆ. ಹೀಗಾಗಿ ಬದಲಾಗುತ್ತಿರುವ ಆಧುನಿಕ ಕಾಲದ ನಗರ ಸಂಸ್ಕೃತಿಯಿಂದ ಸಂಪನ್ನಗೊಳ್ಳುವ ಜಾನಪದವನ್ನು ನಾವು ನಗರ ಜಾನಪದವೆಂದು ಪುನರ್ ನಿರ್ವಚಿಸಿಕೊಳ್ಳಬಹುದು.[೨]"

ಭಾರತವು ಹಳ್ಳಿಗಳ ನಾಡು, ಭಾರತದ ನಗರ ಜಾನಪದದಂತೆ ಕರ್ನಾಟಕದ ನಗರ ಜಾನಪದವು ಸಹ ಇದಕ್ಕೆ ಹೊರತಾಗಿಲ್ಲ. ಸೌಲಭ್ಯಾಕಾಂಕ್ಷಿಯಾದ ಮಾನವ ಹಳ್ಳಿಯಿಂದ ನಗರಗಳಿಗೆ ನಾನಾಕಾರಣಗಳಿಗಾಗಿ ವಲಸೆ ಬರುತ್ತಾನೆ. ಅವುಗಳಲ್ಲಿ ಮುಖ್ಯವಾಗಿ ಆರ್ಥಿಕ ಕಾರಣಗಳು, ಭೌಗೋಳಿಕ ಕಾರಣಗಳು, ಶೈಕ್ಷಣಿಕ ಕಾರಣಗಳು, ಸಾಮಾಜಿಕ ಕಾರಣಗಳು ಇತ್ಯಾದಿ. ಹೀಗೆ ವಲಸೆ ಬಂದವರು ಇಲ್ಲಿ ತಮ್ಮ ಮೂಲ ಜೀವನವಾದ ಗ್ರಾಮೀಣ ಬದುಕನ್ನು ಮರೆಯುವುದಿಲ್ಲ. ಮುಂದುವರೆಸಿಕೊಂಡು ಹೋಗುತ್ತಾರೆ.

ಇದನ್ನೇ ನಾವು ಇತ್ತೀಚಿಗೆ ನಗರ ಜಾನಪದವೆಂದು ಪರಿಗಣಿಸಿರುವುದು. ಭಾಷೆಯ ಉಚ್ಚಾರಣೆಯಲ್ಲಿ ಬದಲಾಗಿರಬಹುದು. ಆದರೆ ಆಚಾರ, ವಿಚಾರ, ಸಂಪ್ರದಾಯ, ಪದ್ಧತಿ, ಕಲೆ, ಧರ್ಮ ಮುಂತಾದವುಗಳು ಗ್ರಾಮೀಣ ಮೂಲದವೇ ಆಗಿರುತ್ತವೆ.

ಗ್ರಾಮೀಣ ಪರಿಸರದಿಂದ ಬಂದು ನಗರದಲ್ಲಿ ನೆಲೆಸಿರುವ ನಾಗರೀಕರು ತಾವು ತಮ್ಮ ಹಳ್ಳಿಗಳಲ್ಲಿ ಪೂಜಿಸುತ್ತಿದ್ದ ದೇವ, ದೇವತೆಗಳನ್ನು ಮರೆಯುವುದಿಲ್ಲ. ಇದ್ದಲ್ಲಿಯೇ ಈ ದೈವಗಳ ಗುಡಿಗಳನ್ನು ನಿರ್ಮಿಸಿ ಪೂಜಿಸಿ ತಮ್ಮ ಮೂಲ ಗ್ರಾಮೀಣ ಸಂಸ್ಕೃತಿಯನ್ನು ಉಳಿಸಿ ಬೆಳಸಿಕೊಂಡು ಹೋಗುತ್ತಾರೆ. ದಕ್ಷಿಣಕರ್ನಾಟಕದ ನಗರಗಳಲ್ಲಿ ನೂರಾರು, ತಿರುಪತಿ ತಿಮ್ಮಪ್ಪ, ಆಂಜನೇಯ, ಮಾಹದೇಶ್ವರ, ನಂಜುಂಡ, ರಂಗನಾಥ, ಮೈಲಾರಲಿಂಗ, ಕಬ್ಬಾಳಮ್ಮ, ಮದ್ದೂರಮ್ಮ, ಚೌಡಮ್ಮ, ಪಟ್ಟಲದಮ್ಮ ಇತ್ಯಾದಿ ದೈವಗಳ ಆರಾಧನೆ ಕಾಣಬಹುದು.

ಮುತ್ತತ್ತಿಯ ಮುತ್ತತ್ತಿರಾಯನ ಆರಾಧನೆಯು ಇದಕ್ಕೆ ಹೊರತಾಗಿಲ್ಲ. ಮುತ್ತತ್ತಿಯ ಪರಿಸರದಲ್ಲಿ ನೆಲೆಸಿ ಪೂಜಿಸುತ್ತಿದ್ದು ನಾನಾಕಾರಣಗಳಿಂದ ನಗರಗಳಿಗೆ ಬಂದು ನೆಲೆಸಿದ ಮೇಲೆ ತಮ್ಮ ಬದುಕನ್ನು ಮುನ್ನಡೆಸುತ್ತಿರುವ ಮುತ್ತತ್ತಿರಾಯನನ್ನು ಮರೆಯುವುದಿಲ್ಲ. ಇಲ್ಲಿಂದ ವರ್ಷಕೊಮ್ಮೆಯಾದರೂ ಮುತ್ತತ್ತಿಯ ಮುತ್ತತ್ತಿರಾಯನ ಬಳಿಗೆ ಹೋಗಿ, ಕುರಿ, ಮೇಕೆ ಅಥವಾ ಕೋಳಿಯ ಬಲಿ ನೀಡಿ 'ಸೇವೆ' ಮಾಡಿ ಬರುವುದುಂಟು.

ಇವರ ಮನೆಗಳಲ್ಲಿ ಶನಿವಾರ ಬಂತೆಂದರೆ ಇದು ಮುತ್ತತ್ತಿರಾಯನ ಪವಿತ್ರದಿನ. ಆ ದಿನ ಮನೆಯನ್ನು ಸ್ವಚ್ಛಗೊಳಿಸಿ ಸ್ನಾನ ಮಾಡಿ ದೇವರ ಚಿತ್ರಕ್ಕೆ ಪೂಜಿಸುತ್ತಾರೆ. ಒಂದು ಕಾಣಿಕೆ ಹುಂಡಿಯನ್ನು ದೇವರ ಬಳಿ ಇಟ್ಟಿದ್ದು ನಾಣ್ಯಗಳನ್ನು ಅದರಲ್ಲಿ ಹಾಕಿ ತಾವು ಮುತ್ತತ್ತಿಗೆ ಹೋದಾಗ ಮುತ್ತತ್ತಿರಾಯನ ಕಾಣಿಕೆಯ ಹುಂಡಿಗೆ ಹಾಕುತ್ತಾರೆ. ನಗರದಲ್ಲಿನ ಹಳ್ಳಿಯ ಪರಿಸರದಲ್ಲಿ ವಾಸಮಾಡುತ್ತಾ ವಿಶಾಲ ಸ್ಥಳವನ್ನು ಹೊಂದಿರುವವರು, ಮುತ್ತತ್ತಿರಾಯನ ಸೇವೆಗಾಗಿ, ಕುರಿ ಇಲ್ಲವೇ ಮೇಕೆ ಅಥವಾ ಕೋಳಿಯನ್ನು ಬಿಟ್ಟು ಬೆಳೆಸುವುದು ಉಂಟು. ತಮಗೆ ಕಷ್ಟನಷ್ಟಗಳು ಉಂಟಾದಾಗ ಮುತ್ತತ್ತಿರಾಯನನ್ನು ಪೂಜಿಸಿ ಅರಿಶಿನ ಬಟ್ಟೆಯಲ್ಲಿ ನಾಣ್ಯವನ್ನು ಕಟ್ಟಿಬಿಗಿದು ಮೀಸಲು ಬಿಡುವುದು ಸಹ ಇದೆ.

ಮನದಾಸೆ ಈಡೇರಲೆಂದು ಹಲವು ಬಗೆಯ ಹರಕೆಗಳನ್ನು ಹೊರುವುದು ಉಂಟು. ಮುತ್ತತ್ತಿಯಲ್ಲಿ ನಡೆಯುವ ಗೋಕುಲಾಷ್ಟಮಿ ಸಂದರ್ಭದ ಜಾತ್ರೆಯಲ್ಲಿ ಪಾಲುಗೊಳ್ಳುವುದು ಇರುತ್ತದೆ. ತಮ್ಮ ಬಂಧುಗಳ ಸರ ವಿವಾಹಗಳನ್ನು ಮುತ್ತತ್ತಿಯಲ್ಲಿ ನಡೆಸುವುದು ಇದೆ. ತಮಗೆ ಒಳ್ಳೆಯದಾದಾಗ ದೇವರಿಗೆ ಉತ್ತಮ ವಸ್ತುಗಳಾದ ಬೆಳ್ಳಿಯ ಉತ್ಸವಮೂರ್ತಿ, ಕವಚಗಳನ್ನೂ ಮಾಡಿಕೊಡುವುದುಂಟು. ತಮ್ಮ ಮನೆಯಲ್ಲಿ ಯಾರಿಗಾದರೂ ಮಾನಸಿಕ ಸ್ವಸ್ಥ್ಯ ಸರಿ ಇಲ್ಲದಿದ್ದರೆ ದೆವ್ವ, ಭೂತಗಳಿಂದ ಮುಕ್ತಿ ಪಡೆಯಲೆಂದು ಮುತ್ತತ್ತಿರಾಯನ ಮೊರೆ ಹೋಗುವುದುಂಟು. ಮುತ್ತತ್ತಿ ದೇವಾಲಯಕ್ಕೆ ಅಕ್ಕಿದಾನ, ವಸ್ತ್ರದಾನಗಳನ್ನು ಮಾಡುವುದರ ಮೂಲಕ ಕಿರುಕಾಣಿಕೆ ನೀಡುವುದು.

ಮುತ್ತತ್ತಿರಾಯನ ವಿವಿಧ ಬಗೆಯ ಚಿತ್ರಗಳು ಹಾಗೂ ಮೂರ್ತಿಗಳನ್ನು ಮನೆಯಲ್ಲಿಟ್ಟುಕೊಂಡು ಪೂಜಿಸುವುದಲ್ಲದೆ, ಆಗಾಗ ಮನೆಯ ಶುಭಕಾರ್ಯವಾದ ಹೆಣ್ಣುಮಕ್ಕಳು ಮೈನೆರೆದಾಗ, ಮಕ್ಕಳು ಜನಿಸಿದಾಗ, ವ್ಯಕ್ತಿಮಡಿದು ತಿಥಿ ಅಥವಾ ಶ್ರಾದ್ಧ ಮಾಡುವಾಗ ದಾಸಪ್ಪನನ್ನು ಕರೆಸಿ ಮುತ್ತತ್ತಿರಾಯನನ್ನು ಪೂಜಿಸುತ್ತಾರೆ. ತಮ್ಮ ಅಂಗಡಿ, ಮನೆಗಳಿಗೆ ಮುತ್ತತ್ತಿರಾಯನ ಹೆಸರನ್ನು ಇಡುವುದಲ್ಲದೆ, ತಮ್ಮ ವಾಹನಗಳಿಗೂ, ಮನೆಯ ಬಳಿಯ ವೃತ್ತ, ಬಡಾವಣೆ, ಅಡ್ಡರಸ್ತೆಗಳಿಗೆ ಮುತ್ತತ್ತಿರಾಯನ ಹೆಸರುಗಳನ್ನು ಇಟ್ಟಿರುತ್ತಾರೆ.

ಹುಟ್ಟಿದ ಮಗುವಿನ ಮೊದಲ ಹೆಸರನ್ನು ಮುತ್ತತ್ತಿರಾಯನಿಗೆ ಸಂಬಂಧಿಸಿದಂತೆ ಇರಿಸಿ ನಂತರ ನಗರ ಸಂಸ್ಕೃತಿಗೆ ಅನುಗುಣವಾಗಿ ಬೇರೆಯದಾಗಿ ಇಡುತ್ತಾರೆ. ಮಗುವಿನ ಮೊದಲಿನ ಕೂದಲನ್ನು ಮುತ್ತತ್ತಿಗೆ ಹೋಗಿ ತೆಗೆಸುತ್ತಾರೆ. ಮುತ್ತತ್ತಿಯ ಜನಪದ ಐತಿಹ್ಯವನ್ನೇ ಇಲ್ಲೆಲ್ಲ ಪ್ರಸಾರ ಮಾಡುತ್ತಾರೆ. ಅಲ್ಲದೇ, ಇಲ್ಲೆಲ್ಲಾ ಮುತ್ತತ್ತಿರಾಯನ ದೇವಾಲಯಗಳನ್ನು ನಿರ್ಮಿಸಿಕೊಂಡು ಸದಾಕಾಲವೂ ಪೂಜೆ ಮಾಡಲು ಅನುವು ಮಾಡಿಕೊಳ್ಳುತ್ತಾರೆ. ನಗರಗಳಲ್ಲಿ ಹಲವಾರು ಮುತ್ತತ್ತಿರಾಯನ ದೇವಾಲಯಗಳನ್ನು ಕಾಣಬಹುದು. ಮುತ್ತತ್ತಿಯಲ್ಲಿ ನಡೆಯುವ ಎಲ್ಲ ಪ್ರಕಾರದ ಪೂಜಾವಿಧಿ, ಜಾತ್ರೆ ಇಲ್ಲಿಯೂ ನಡೆಯುತ್ತದೆ ಎಂದಲ್ಲ. ಆದರೂ ಶನಿವಾರ, ಶ್ರಾವಣಶನಿವಾರಗಳಲ್ಲಿ ವಿಶೇಷಪೂಜೆ ನಡೆಸಲಾಗುತ್ತದೆ. "ಮುತ್ತತ್ತಿರಾಯ ಕೃಪಾಪೋಷಿತ ನಾಟಕ ಮಂಡಳಿ" ಎಂಬ ಮಂಡಳಿಯ ವ್ಯಾಪ್ತಿಯಲ್ಲಿ ನಾಟಕಗಳನ್ನು ಆಡಲಾಗುತ್ತದೆ. ಸಿದ್ಧಾಪ್ಪಾಜಿ ಕುರಿತ ಕ್ಯಾಸೆಟ್‌ಗಳಲ್ಲಿ ಮುತ್ತತ್ತಿರಾಯನ ದೃಶ್ಯಗಳು ಬಂದಿದ್ದು ಮುತ್ತತ್ತಿರಾಯನ ಮಹಿಮೆ ಪ್ರಸಾರವಾಗಲು ಕಾರಣವಾಗಿದೆ.

ಮುತ್ತತ್ತಿಯ ಸುತ್ತ ಇರುವ ಐದು ಜಿಲ್ಲೆಗಳ ಕೇಂದ್ರಗಳು ಮುತ್ತತ್ತಿಯಿಂದ ಸುಮಾರು ೧೨೦ಕಿ.ಮೀ.ದೂರದ ಅಂತರದಲ್ಲಿದ್ದು ಸುಲಭವಾಗಿ ಈ ಐದು ಕೇಂದ್ರಗಳಾದ ಬೆಂಗಳೂರು, ರಾಮನಗರ, ಮಂಡ್ಯ, ಮೈಸೂರು, ಚಾಮರಾಜನಗರಗಳಿಂದ ತಲುಪಬಹುದಾಗಿದೆ. ಕನ್ನಡ ಚಲನಚಿತ್ರನಟರಾದ ಈ ದೇವರ ವರಪ್ರಸಾದದಿಂದ ಜನಿಸಿ ನಗರದಲ್ಲಿ ನೆಲೆಕಂಡುಕೊಂಡವರೇ ಆಗಿದ್ದಾರೆ. ಶ್ರೀ.ಎಚ್.ಎಸ್.ಶಿವಪ್ರಕಾಶರವರು ಬರೆದಿರುವ ಮಂಟೇಸ್ವಾಮಿ ಕಥಾ ಪ್ರಸಂಗ ನಾಟಕ ನಗರದಲ್ಲಿ ಆಗಾಗ ಪ್ರದರ್ಶನ ಏರ್ಪಟ್ಟು ಮುತ್ತತ್ತಿರಾಯನ ಸಂಗತಿಗಳು ನಗರದ ಅನ್ಯ ನಾಗರೀಕರಿಗೆ ತಿಳಿಯುವಂತೆ ಆಗುತ್ತದೆ. ಮುತ್ತತ್ತಿಯ ರಮ್ಯ ಮತ್ತು ಮುದಕೊಡುವ ಪ್ರದೇಶವಾದುದರಿಂದ ಎಲ್.ಟಿ.ಟಿ.ಇ.ಯ ರಾಜೀವ್‌ಗಾಂಧಿ ಹಂತಕರು ಇಲ್ಲಿ ಬಂದು ಆಶ್ರಯ ಪಡೆದುಕೊಂಡು ನಂತರ ಪೋಲಿಸ್ ಬಲೆಗೆ ಬಿದ್ದರು. ನಗರದ ಮುತ್ತತ್ತಿರಾಯನ ಭಕ್ತರು ತಾವು ಮಾಡುವ ಶುಭಕಾರ್ಯಗಳ ಕುರಿತು ಒಪ್ಪಿಗೆ ರೂಪದಲ್ಲಿ ಹೂ ಬೇಡಲು ಮುತ್ತತ್ತಿಗೆ ಧಾವಿಸಿ ಬರುವುದುಂಟು. ನಗರದ ಆಧುನಿಕ ತಾಂತ್ರಿಕತೆಯಿಂದಾಗಿ ಮುತ್ತತ್ತಿರಾಯನಿಗೆ ಸಂಬಂಧಿಸಿದ ಗೀತೆಗಳು ಕ್ಯಾಸೆಟ್ ಹಾಗೂ ಸಿ.ಡಿ.ರೂಪದಲ್ಲಿ ಭರಾಟೆಯಿಂದ ತಯಾರಾಗಿ ಮಾರಾಟವಾಗುತ್ತಿವೆ. ಭಾವಚಿತ್ರಗಳಲ್ಲಿ ಡಿಜಿಟಲ್ ವ್ಯವಸ್ಥೆ ಇದ್ದು ಅತ್ಯಂತ ಆಕರ್ಷಕವಾದ ಚಿತ್ರಗಳು ಮೂಡಿ ಮಾರಾಟಕ್ಕೆ ಲಭ್ಯವಿದೆ. ನಗರಗಳಿಂದ ಆಧುನಿಕ ತಂಪು ಪಾನೀಯಗಳು ಇಲ್ಲಿಗೆ ಸರಬರಾಜು ಆಗಿ ಮಾರಲ್ಪಡುತ್ತವೆ.

ಮುತ್ತತ್ತಿಯು ಅರಣ್ಯದ ಸುಂದರತಾಣ, ಹಿತವಾದ ನದಿಯಿಂದಾಗಿ ಹಲವಾರು ಚಲನಚಿತ್ರಗಳ ಚಿತ್ರೀಕರಣಗಳು ಇಲ್ಲಿ ನಡೆದು ನಗರ ಜನತೆಗೆ ಬಸವನಬೆಟ್ಟ ಪರಿಸರದ ಪರಿಚಯವಾಗುತ್ತಿದೆ. ನಗರ ಭಕ್ತರು ಆಗಾಗ ಮುತ್ತತ್ತಿರಾಯನಿಗಾಗಿ ಬೀದಿಗಳಲ್ಲಿ ದಾಸಯ್ಯರಿಂದ ಮಣೇವುಸೇವೆಗಳನ್ನು ನಡೆಸುವುದುಂಟು. ನಗರದ ಭಕ್ತರ ಮನೆಯ ಮುಂದೆ ಪ್ರತಿ ಶನಿವಾರ ಬರುವ ದಾಸಯ್ಯಗಳು ಮುತ್ತತ್ತಿರಾಯನಿಗೆ ಸಂಬಂಧಿತ ಗೋವಿಂದಗಳನ್ನು ಇಡುತ್ತಾರೆ. ಡಾ॥ರಾಜಕುಮಾರ್‌ರವರ ಹೆಸರು ಮುತ್ತುರಾಜು ಎಂಬುದಾಗಿದ್ದು, ಈಗ ಈ ಹೆಸರಿನಿಂದ ಬೆಂಗಳೂರಿನ ಬನಶಂಕರಿ ೩ನೇ ಹಂತದ ಬಳಿಯ ಮುಖ್ಯರಸ್ತೆಯೊಂದಕ್ಕೆ ಡಾ॥ಮುತ್ತುರಾಜ್ ರಸ್ತೆ, ಡಾ॥ಮುತ್ತುರಾಜ್ ಅಡ್ಡರಸ್ತೆ, ಡಾ॥ಮುತ್ತುರಾಜ್ ಆಟೋ ಚಾಲಕರ ಬಳಗ ಎಂದು ಇಡಲಾಗಿದೆ. ಅನ್ಯ ನಗರ ನಾಗರೀಕರಿಗೆ ದೂರದ ಮುತ್ತತ್ತಿ ಮತ್ತು ಮುತ್ತತ್ತಿರಾಯನ ಪರಿಚಯವೆಂದರೆ ಅದು ಡಾ॥ರಾಜ್‌ಕುಮಾರ್‌ರವರ ಮೊದಲಿನ ಹೆಸರಾದ ಮುತ್ತುರಾಜ್‌ನಿಂದಾಗಿಯೇ ಆಗಿದೆ.

# ಅಡಿ ಟಿಪ್ಪಣಿಗಳು

೧. ಜಾನಪದ ಕೈಪಿಡಿ ; ಕನ್ನಡ ಪುಸ್ತಕ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ಪುಟ-೨೮೦, ೧೯೯೮

೨. ಅದೇ ಪುಟ-೨೮೦, ೨೮೧

# ಸಮಾರೋಪ

'ದೊಡ್ಡ ಮುತ್ತತ್ತಿ' ಎಂದು ಸ್ಥಳೀಯವಾಗಿ ಕರೆಯಲ್ಪಡುವ 'ಮುತ್ತತ್ತಿ'ಗೆ ಕರ್ನಾಟಕದ ಸಾಂಸ್ಕೃತಿಕ ಪರಂಪರೆಯಲ್ಲಿ ಗಣನೀಯ ಸ್ಥಾನವಿದೆ. ಈ ಸ್ಥಳ ಪ್ರಖ್ಯಾತಿಗೆ ಬರಲು ಮುಖ್ಯವಾಗಿ ಮೂರು ಕಾರಣಗಳಾಗಿವೆ.

೧. ಇಲ್ಲಿನ ಪ್ರಾಕೃತಿಕ ಚೆಲುವು, ೨.ಮೂಡಲು ಮುತ್ತಯ್ಯ ಎಂದು ಕರೆಯುವ 'ಮುತ್ತತ್ತಿರಾಯ'ನ ದೇವಾಲಯ, ೩.ವರ್ಷದ ಎಲ್ಲಾ ಕಾಲಗಳಲ್ಲೂ ತುಂಬಿ ರಭಸವಾಗಿ ಹರಿಯುವ ಮನೋಹರ ಕಾವೇರಿ ನದಿ,

ಈ ನದಿಯ ಜಲಸಂಪತ್ತು ಆಯಕಟ್ಟಿನ ಸ್ಥಳವಾದ ಮುತ್ತತ್ತಿಯ ಪರಿಸರದಲ್ಲಿ ಸಂಸ್ಕೃತಿ ರೂಪುಗೊಳ್ಳಲು ಕಾರಣವಾಗಿದೆ.ಬಹುತೇಕ ಪ್ರಾಚೀನ ಸಂಸ್ಕೃತಿಗಳೆಲ್ಲಾ ಉಗಮಿಸಿ ಬೆಳೆದು ಬಂದಿರುವುದು ನದಿ ತೀರಗಳಲ್ಲಿಯೇ ಆಗಿವೆ. ಅಂತೆಯೇ ಮುತ್ತತ್ತಿಯಲ್ಲಿಯೂ ಸಹ. ಪ್ರಾಗೈತಿಹಾಸಿಕ ಕಾಲದಿಂದಲೂ ಸಂಸ್ಕೃತಿ ರೂಪ ಪಡೆದು ಬೆಳೆದು ಬಂದಿದೆ. ಸೂಕ್ಷ್ಮ ಶಿಲಾಯುಗ (ಕ್ರಿ.ಪೂ.ಸು.೧೦,೦೦೦)ದ ಶಿಲಾ ಅವಶೇಷಗಳು ಇಲ್ಲಿ ಲಭ್ಯವಾಗಿದ್ದು ಎರಡನೇಯ ಅಧ್ಯಾಯದಲ್ಲಿ ವಿವರಿಸಲಾಗಿದೆ. ಆದರೆ ಪ್ರಾಗೈತಿಹಾಸಿಕ ಕಾಲದ ಆರಂಭಕಾಲವಾದ ಆದಿಶಿಲಾಯುಗ (ಕ್ರಿ.ಪೂ.೫೦,೦೦೦ದಿಂದ ಕ್ರಿ.ಪೂ.೧೦,೦೦೦)ದ ಅವಶೇಷಗಳ ಆಧಾರಗಳು ಇನ್ನೂ ಲಭ್ಯವಾಗಿಲ್ಲ. ಸೂಕ್ಷ್ಮಶಿಲಾಯುಗದಿಂದ ನಿರಂತರವಾಗಿ ಇತಿಹಾಸ ಕಾಲದ ಇಂದಿನವರೆಗೂ ವೈವಿಧ್ಯಮಯವಾದ ಸಾಂಸ್ಕೃತಿಕ ಬದುಕಿನ ಆಧಾರಗಳು ಲಭ್ಯವಾಗಿವೆ.

ಈ ಪ್ರದೇಶದ ಇತಿಹಾಸವೆಂದರೆ ಪ್ರಸ್ತುತ ವಿಭಾಗಗೊಂಡಿರುವ ಮಂಡ್ಯ, ಮೈಸೂರು, ಚಾಮರಾಜನಗರ, ರಾಮನಗರ, ಬೆಂಗಳೂರು ಗ್ರಾಮಂತರ ಮತ್ತು ನಗರ ಜಿಲ್ಲೆಗಳ ಇತಿಹಾಸವೇ ಆಗಿವೆ. ಮೌರ್ಯರ ಕಾಲ (ಕ್ರಿ.ಪೂ.ಸುಮಾರು ೪ನೆಯ ಶತಮಾನ)ದ ಬಳಕೆಯಲ್ಲಿದ್ದ ಬ್ರಾಹ್ಮಿಲಿಪಿಯ ಅಕ್ಷರಗಳಾದ ಘ,ಕೊ,ಅ, ಅಕ್ಷರಗಳನ್ನು ಹೋಲುವ ಲಿಪಿಗಳು ಇಲ್ಲಿನ ಸೂಳೆಕಲ್ಮಠದ ಗುಹಾಚಿತ್ರಗಳ ಜೊತೆಗೆ ಇವೆ. ಆದರೂ ಮೌರ್ಯವಂಶದ ಆಳ್ವಿಕೆ ಇಲ್ಲಿಯವರೆಗೆ ಇತ್ತು ಎಂದು ಹೇಳಲು ಹೆಚ್ಚಿನ ಆಧಾರಗಳು ಇಲ್ಲವಾಗಿವೆ. ಆದರೆ ಈ ವೇಳೆಯಲ್ಲಿ ಸ್ಥಳೀಯ ರಾಜರ ಒಡೆತನ ಇದ್ದಿರಬೇಕು. ಅದು ಬೆಳಕಿಗೆ ಬರಬೇಕಾಗಿದೆ.

ಶಾತವಾಹನ ಮತ್ತು ರೋಮನ್ ಕಾಲದ ಅವಶೇಷಗಳು ಮೈಸೂರು ಜಿಲ್ಲೆಯ ತಲಕಾಡು, ಬೆಂಗಳೂರು ನಗರದ ಜಾಲಹಳ್ಳಿಗಳಲ್ಲಿ ದೊರೆತಿರುವುದರಿಂದ ಶಾತವಾಹನರ ಪ್ರಭಾವ ಈ ಪ್ರದೇಶದ ಮೇಲೆ ಇತ್ತು ಎಂದು ತಿಳಿಯಬಹುದಾಗಿದೆ. ಕದಂಬ, ಗಂಗ, ಚಾಲುಕ್ಯ, ರಾಷ್ಟ್ರಕೂಟ, ನೊಳಂಬ, ಚೋಳ, ಹೊಯ್ಸಳ, ವಿಜಯನಗರ ಹಾಗೂ ಮೈಸೂರು ಅರಸರು, ಉಮ್ಮತ್ತೂರು ಹಾಗೂ ಚನ್ನಪಟ್ಟಣ ಪಾಳೆಯಗಾರರು, ಹೈದರಾಲಿ, ಟಿಪ್ಪುಸುಲ್ತಾನ್‌ರು ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿ ಮುತ್ತತ್ತಿಯ ಗ್ರಾಮೀಣ ಸಂಸ್ಕೃತಿಯ ವಿಕಾಸಕ್ಕೆ ಕಾರಣರಾಗಿದ್ದಾರೆ. ಚೋಳ, ಹೊಯ್ಸಳರು ಕಾಲಕ್ಕಾಗಲೇ ಮಳವಳ್ಳಿ ಪಟ್ಟಣದ ಪ್ರದೇಶವು ಪ್ರಮುಖ ವಾಣಿಜ್ಯ ಕೇಂದ್ರವಾಗಿ ಬ್ರಿಟಿಷರಿಗೂ, ಟಿಪ್ಪುವಿಗೂ ನಡೆದ ಒಂದು ಯುದ್ಧದಿಂದ ಈ ಕೇಂದ್ರವು ಬಹುಮಟ್ಟಿಗೆ ಹಾಳಾಯಿತು. ಯುದ್ಧದ ಪ್ರಭಾವವು ಆರ್ಥಿಕ, ಸಾಂಸ್ಕೃತಿಕ ಭಾಗಗಳ ಮೇಲೂ ಆಗಿ ಹಿಂಜರಿತ ಕಂಡುಬಂದಿತು.

'ಮುತ್ತತ್ತಿ' ಪರಿಸರದಲ್ಲಿ ವೀರಗಲ್ಲು, ಮಾಸ್ತಿಕಲ್ಲುಗಳು ವಿಫುಲವಾಗಿ ಲಭಿಸಿವೆ. ವೀರಗಲ್ಲುಗಳಲ್ಲಿ ಕನ್ನಡ ಗ್ರಂಥಲಿಪಿಯ ಶಾಸನಗಳೂ ಸಹ ಲಭ್ಯವಾಗಿವೆ. ಕ್ರಿ.ಶ.ಸುಮಾರು ೮ನೇ ಶತಮಾನದಿಂದ ಕ್ರಿ.ಶ.ಸುಮಾರು ೧೬ನೇ ಶತಮಾನದವರೆಗಿನ ಅನೇಕ ವೀರಗಲ್ಲುಗಳು ದೊರೆತಿವೆ. ಮುತ್ತತ್ತಿಯಲ್ಲಿನ ಮೊಸಳೆಕಾಳಗ ಮತ್ತು ಕರಡಿ ಜೊತೆಗಿನ ಹೋರಾಟದ ವೀರಗಲ್ಲುಗಳ ಲಭ್ಯತೆಯಿಂದಾಗಿ ವೀರಗಲ್ಲುಗಳ ಅಧ್ಯಯನ ವಿಭಾಗಗಳಿಗೆ ಮತ್ತೇರಡು ವಿಭಾಗಗಳು ಸೇರ್ಪಡೆಯಾದಂತಾಗಿದೆ. ದಳವಾಯಿ ಕೋಡಿಹಳ್ಳಿ, ಹಲಗೂರಿನ ಹರಿಹರ, ಅಲಸೂರು, ಕಾಡಹಳ್ಳಿಗಳು ವೀರಗಲ್ಲುಗಳ ಕೇಂದ್ರವೇ ಆಗಿದೆ. ಹರಿಹರ ಗ್ರಾಮವು ವೀರಗಲ್ಲುಗಳ ಜೊತೆಗೆ ತ್ಯಾಗ, ಬಲಿದಾನದ ತವರು ಆಗಿತ್ತು ಎಂಬುದಕ್ಕೆ ಸಾಕ್ಷಿಯಾಗಿ ಅಲ್ಲಿನ ·ಮಾಸ್ತಿಕಲ್ಲುಗಳು, ಮಾಸ್ತಿದಿಬ್ಬ, ಜನಪದ ಸಾಹಿತ್ಯ ಸಾಕ್ಷಿಗಳನ್ನು ನೋಡಬಹುದಾಗಿದೆ. ಜೊತೆಗೆ ಈ ಸ್ಥಳವು ಪ್ರಾಗೈತಿಹಾಸಿಕ, ಐತಿಹಾಸಿಕ ಅಲ್ಲದೇ ಶಾಕ್ತ, ಶೈವ, ಜೈನ, ವೈಷ್ಣವ ಧರ್ಮದ ನೆಲೆಯಾಗಿ ಮುತ್ತತ್ತಿಗೆ ಅತ್ಯಂತ ನಿಕಟವಾದ ಸ್ಥಳವಾಗಿದೆ ಎಂಬುದು ಗಮನಾರ್ಹವಾದ ಅಂಶವಾಗಿದೆ. ವಿಜಯನಗರದ ಅರಸರ ಕಾಲದಲ್ಲಿ ಈ ಭಾಗವನ್ನು ಘನಪತಿರಾಯ ಮತ್ತು ಇತರ ಪಾಳೇಗಾರರು ಆಳಿರುವ ಆಧಾರಗಳು ಸಹ ಲಭ್ಯವಾಗಿದೆ.

ಮುತ್ತತ್ತಿ ವೀರಗಲ್ಲಿನ ಮತ್ತು ಭೀಮೇಶ್ವರಿಯ ಗ್ರಂಥಲಿಪಿಯ ಶಾಸನಗಳು ಓದಲಾರದಷ್ಟು ತ್ರುಟಿತವಾಗಿವೆ. ಹರಿಹರ ಗ್ರಾಮ, ದಳವಾಯಿ ಕೋಡಿಹಳ್ಳಿ, ಕಂಬದರಾಯನಗುಡಿಯ ಬಳಿ ಚೋಳ ಹೊಯ್ಸಳ ಮತ್ತು ವಿಜಯನಗರದರಸರ ಕಾಲದ ಶಿಲಾಶಾಸನಗಳು ಕಂಡು ಬಂದಿವೆ. ಮುತ್ತತ್ತಿಗೆ ಸಂಬಂಧಿಸಿದಂತೆ ಒಂದು ತಾಮ್ರಶಾಸನವು ಮಾತ್ರವೇ ಲಭ್ಯವಾಗಿದ್ದು ಮುತ್ತತ್ತಿ ಮತ್ತು ದೇವಾಲಯದ ಉಗಮ, ಬೆಳವಣಿಗೆ ಕುರಿತು ಮಹತ್ವದ ಮಾಹಿತಿಗಳನ್ನು ಒದಗಿಸಿಕೊಟ್ಟಿದೆ. ಮುತ್ತತ್ತಿಗೆ ಸಂಬಂಧಿಸಿದಂತೆ ಅಲಸೂರಿನ ಮಾದಿಗ ಭಕ್ತರ ಬಳಿ ಓಲೆಗರಿಗಳಿವೆ ಎಂದು ಪ್ರತೀತಿ ಇದ್ದರೂ ಅವರಿಂದ ಹೊರತೆಗೆಯುವುದು ಕಷ್ಟಸಾಧ್ಯವೇ ಆಗಿದೆ. ಆದರೂ ಅವೆಲ್ಲ ತ್ರುಟಿತವಾಗಿದೆ ಎಂಬ ಪ್ರತೀತಿಯು ಇದೆ.

ಮುತ್ತತ್ತಿಯ ಜಾನಪದ ಕುರಿತು ವಿಫುಲ ವಿಷಯಗಳು ಲಭ್ಯವಾಗಿವೆ. ಜನಪದ ಐತಿಹ್ಯ, ನಿರುಕ್ತಿ, ಕಲೆ, ಗೀತೆ, ಆರಾಧನಾವಿಧಾನ, ಸಂಪ್ರದಾಯ, ಪದ್ಧತಿ, ಆಚರಣೆ, ರೂಢಿ, ಬಲಿ, ಜಾತ್ರೆಗಳೆಲ್ಲ ಈ ವಲಯದಲ್ಲಿ ವೈವಿಧ್ಯಮಯವಾಗಿ ಬೆಳೆದುಬಂದು ಈ ಅಧ್ಯಯನದ ಭಾಗಗಳಾಗಿ ಬಳಕೆಯಾಗಿದೆ. ಮಂಟೇಸ್ವಾಮಿ ಜನಪದ ಮಹಾಕಾವ್ಯಗಳಲ್ಲಿ ಮುತ್ತತ್ತಿ ಮತ್ತು ಮುತ್ತತ್ತಿರಾಯನ ಕುರಿತು ವಿಪುಲ ವಿಷಯಗಳು ದೊರಕಿವೆ. ಮುತ್ತತ್ತಿರಾಯನಿಗೂ, ಸಿದ್ಧಾಪ್ಪಾಜಿಗೂ ಬೆಸೆದುಬಂದಿರುವ ಸಂಬಂಧ, ಗೆಳೆತನಗಳ ಕುರಿತು ಅಮೂಲ್ಯ ಮಾಹಿತಿಗಳು ಲಭ್ಯವಾಗಿವೆ. ಆಧುನಿಕ ಬದುಕಿನ ಪ್ರಭಾವದಿಂದ ನಶಿಸಿಹೋಗುತ್ತಿರುವ ಮುತ್ತತ್ತಿಯ ಜನಪದ ಗೀತೆಗಳಲ್ಲಿ ಈ ಉಳಿದಿರುವುದನ್ನು ಮಾತ್ರವೇ ಇಲ್ಲಿ ಧ್ವನಿಮುದ್ರಿಸಿಕೊಂಡು ದಾಖಲಿಸಲಾಗಿದೆ. ಈ ಗೀತೆಗಳು ಸ್ವರೂಪದಲ್ಲಿ ಅನ್ಯದೈವಗಳ ಜನಪದ ಗೀತೆಗಳ ಪ್ರಭಾವವನ್ನು ಪಡೆದಿದ್ದರೂ ಸಹ ಇಲ್ಲಿನ ಪ್ರಾದೇಶಿಕ ಚಿತ್ರಣ, ದೈವ ಮತ್ತು ಭಕ್ತರ ಸಂಬಂಧ ಮುತ್ತತ್ತಿರಾಯನ ಸಾಹಸ, ಜಾತ್ರೆ, ಸಸ್ಯ, ಪ್ರಾಣಿ, ಆರಾಧನಾವಿಧಾನ, ಹರಕೆ, ಸಂಪ್ರದಾಯ, ನದಿಯ ವರ್ಣನೆಯ ಕುರಿತ ಅನೇಕ ಮಾಹಿತಿಗಳನ್ನು ಒದಗಿಸಿಕೊಡುತ್ತವೆ. ಇಲ್ಲಿನ ಕಾವೇರಿನದಿಯ ವರ್ಣನೆಯನ್ನಂತು ಈ ಗೀತೆಗಳು ಮನೋಜ್ಞವಾಗಿ ವರ್ಣಿಸುತ್ತವೆ. ಈ ಗೀತೆಗಳ ಸಾಲುಗಳನ್ನು ಅನ್ಯ ದೇವತೆಯ ಗೀತೆಗಳಿಗೂ ಸಹ ಎರವಲಾಗಿ ಪಡೆಯಲಾಗಿದೆ. ಏಕೆಂದರೆ ಗ್ರಾಮೀಣ ದೇವತೆಗಳಾದ ಕಬ್ಬಾಳಮ್ಮ, ಮದ್ದೂರಮ್ಮ, ಬೆಟ್ಟದಮ್ಮ, ಕಾಳಮ್ಮ, ಗ್ರಾಮದೇವತೆಗಳಿಗೂ ಮುತ್ತತ್ತಿರಾಯನಿಗೂ ಸಹೋದರ–ಸಹೋದರಿ ಸಂಬಂಧವಿದೆ ಎಂಬ ಜನ ಪ್ರತೀತಿಯಾಗಿದೆ.

ಮುತ್ತತ್ತಿಯ ಮುತ್ತತ್ತಿರಾಯನಿಗೂ ಸಹ ಸಂಪ್ರದಾಯ, ಪದ್ಧತಿ, ಆಚರಣೆ ನಡೆದುಕೊಂಡು ಬರುತ್ತಿದ್ದು, ಮುತ್ತತ್ತಿಯ ಸಂಸ್ಕೃತಿ ಪ್ರವಹಿಸಲು ಸಹಾಯಕವಾಗಿದೆ. ಬಲಿ, ಸೇವೆ, ಮಣೇವು, ದಾಸಯ್ಯಸಂಪ್ರದಾಯ, ಉರುಳುಸೇವೆ, ಕರಿಯಣ್ಣ, ಕೆಂಚಣ್ಣ, ದೊಡ್ಡದೇವರಪೂಜೆ, ಹುಲಿವಾಹನ ಸೇವೆ ಮಾಡಿಸುವುದು, ಪಾದರಕ್ಷೆ ಅರ್ಪಣೆ ಇವೆಲ್ಲ ಇಲ್ಲಿನ ಪ್ರಾದೇಶಿಕತೆಗೆ ಅನುಗುಣವಾಗಿ ನಡೆಯುವಂತಹುಗಳಾಗಿವೆ. ಸೀಮಿತದ ಈ ಪ್ರದೇಶದಲ್ಲಿ ಅಲ್ಪಪ್ರಮಾಣದಲ್ಲಿ ನಡೆಯುವ ಮುತ್ತತ್ತಿಯ ಜಾತ್ರೆ ವಿಶಿಷ್ಟ ಬಗೆಯದ್ದಾಗಿದ್ದು, ಕನ್ನಡ ಜಾನಪದ ವಲಯದಲ್ಲಿ ಗಮನಾರ್ಹ ಸ್ಥಾನ ಪಡೆದುಕೊಳ್ಳಬೇಕಾಗಿದೆ. ಜಾತ್ರೆಯ ಅಂಗವಾಗಿ ನಡೆಯುವ ವಿವಿಧ ಸೇವೆಗಳು, ಸುಲಭ ಮತ್ತು ಸರಳ ಪರಿಕರಗಳಿಂದ ನಡೆಸುವಂತಹುಗಳಾಗಿವೆ ಹಾಗೂ ಆಕರ್ಷಕವೂ, ಕುತೂಹಲಭರಿತವು ಆದ ಧಾರ್ಮಿಕ ಸೇವೆಗಳಾಗಿವೆ.

ಮುತ್ತತ್ತಿ ಹಾಗೂ ಮುತ್ತತ್ತಿರಾಯನ ದೇವಾಲಯ ಮಾತ್ರವೇ ಒಂಟಿಯಾಗಿ ಬೆಳೆಯಲು ಸಾಧ್ಯವಿಲ್ಲ. ಗ್ರಾಮೀಣ ಸಂಸ್ಕೃತಿ, ಸಹಕಾರ ಮತ್ತು ಸಹಬಾಳ್ವೆಯ ಮೇಲೆ ನೆಲೆನಿಂತಿದೆ. ಈಗಾಗಿ ಮುತ್ತತ್ತಿ ಹಾಗೂ ದೇವಾಲಯ ತಮ್ಮ ಸರಹದ್ದಿನ ಮುಖ್ಯ ಕ್ಷೇತ್ರಗಳ ಜೊತೆಗೆ ಸಾಂಸ್ಕೃತಿಕ, ಆರ್ಥಿಕ ಸಂಬಂಧಗಳನ್ನು ಹೊಂದಿವೆ. ತಾಳವಾಡಿ, ಭೀಮೇಶ್ವರಿ, ತಿರುಗಣೆ ಮಡುವು, ಹನುಮನಗುಂಡು, ವಡೆಕಟ್ಟೆ ಮುದ್ದಮ್ಮ, ಪಾದ್ದಾರೆ, ಕಂಬದರಾಯನಗುಡಿ, ವೀರಭದ್ರನ ಒಡ್ಡು, ಸೋಮನಕೆರೆಗುಡಿ, ನಾಗನಮಡುವು. ಕೋಳೂಕೋಟೆ ಇವುಗಳೆಲ್ಲ ಮುತ್ತತ್ತಿಯ ಮಾರ್ಗದಲ್ಲಿದ್ದು, ಮುತ್ತತ್ತಿರಾಯನ ಭಕ್ತರು ತಮ್ಮ ಭಕ್ತಿಗಳನ್ನು ಈ ಕ್ಷೇತ್ರಗಳ ಮೇಲೂ ವ್ಯಕ್ತಪಡಿಸುತ್ತಿದ್ದಾರೆ. ಮುತ್ತತ್ತಿ ಮತ್ತು ದೇವಾಲಯದ ವಿಕಾಸಕ್ಕೆ ಈ ಕ್ಷೇತ್ರಗಳೆಲ್ಲ ಪರೋಕ್ಷವಾಗಿ ನೆರವು ನೀಡುತ್ತಿದೆ. ಆಧುನಿಕ ಸಾರಿಗೆ ಸಂಪರ್ಕದಿಂದಾಗಿ ಭಕ್ತರ ಸಂಪರ್ಕ ಇತ್ತೀಚೆಗೆ ಕ್ಷೀಣಿಸುತ್ತಿದೆ. ಎಂತಲೇ ಹೇಳಬಹುದು. ವೀರಭದ್ರನ ಒಡ್ಡುವಿನಲ್ಲಿದ್ದ ವೀರಭದ್ರಮೂರ್ತಿ ಮತ್ತು ಹನುಮನಗುಂಡ ಎಂಬ ಐತಿಹ್ಯ ಉಳ್ಳ ಬೃಹತ್ತಾಕಾರದ ಕಲ್ಲುಗುಂಡು ಇಂದು ಕಾಣಸಿಗುವುದಿಲ್ಲ. ವೀರಭದ್ರನ ಮೂರ್ತಿ ಸ್ಥಳಾಂತರವಾಗಿದ್ದರೆ, ಹನುಮನ ಗುಂಡು ಎಂಬ ಈ ಐತಿಹ್ಯದ ಗುಂಡು ನುಚ್ಚುನೂರಾಗಿದೆ. ಇದೊಂದು ಧಾರ್ಮಿಕ, ಸಾಂಸ್ಕೃತಿಕ, ಪೆಟ್ಟು ಎಂದೇ ಪರಿಗಣಿಸಬೇಕು.

ಮುತ್ತತ್ತಿರಾಯನ ದೇವಾಲಯದ ಉಗಮ ಕಕ್ಕೆಸೊಪ್ಪಿನ ಗುಡಿಸಲಿನಲ್ಲಿ ಪ್ರಾರಂಭವಾಗಿ ಕಕ್ಕೆಯ ಸೊಪ್ಪಿನ ಮರದಲ್ಲಿ ಕಡೆದ ಒಂದೂವರೆ ಅಡಿ ಎತ್ತರದ ಮೂರ್ತಿಯೇ ಆಗಿತ್ತು. ನಂತರ ಕಕ್ಕೆಸೊಪ್ಪಿನ ಬದಲಾಗಿ ಹುಲ್ಲಿನಹೊದಿಕೆ ಮಾಡಲಾಗುತ್ತಿತ್ತು. ಈ ವೇಳೆಯಲ್ಲಿಯೇ ದೇವಾಲಯಕ್ಕೆ ಗ್ರಾಮೀಣ ಸಮಾಜದ ಎಲ್ಲಾ ವರ್ಗದವರ ಸೇವೆಗಳು ಪ್ರಾರಂಭವಾಗಿರುವುದು, ಕೊರಮರು ದೇವರ ಪ್ರಭಾವಳಿಯ ಹಿಂದಿನ ಅಲಂಕಾರಕ್ಕಾಗಿ ಬಿದಿರಿನ ತಡಿಕೆ, ಗಿಲಕೆ, ಬೀಸಣಿಗೆ, ಮತ್ತಿತರ ಆಲಂಕಾರಿಕ ವಸ್ತುಗಳು, ಬುಟ್ಟಿ, ಕುಕ್ಕೆಹೆಡಿಗೆ, ಮೊರ ಮುಂತಾದವುಗಳನ್ನು ಮಾಡಿಕೊಟ್ಟರೆ, ಹೂವಾಡಿಗರು, ಹೂವಿನ ಸರಬರಾಜು, ಮಡಿವಾಳರು ವಸ್ತ್ರಗಳ ಶುಭ್ರತೆ, ಹೊಲೆಯರು ಓಲಗ, ಮಾದಿಗರು ತಮಟೆ, ಪಾದರಕ್ಷೆ, ನಾಯಿಂದರು ಮುಡಿ ತೆಗೆಯುವುದು, ಲಂಬಾಣಿಗರು ತೆಂಗಿನಕಾಯಿ ಮತ್ತು ನಾರುಗಳನ್ನು ತರುವುದು. ದಾಸಪ್ಪಗಳು ವೈಷ್ಣವ ಧರ್ಮಕ್ಕನುಗುಣವಾಗಿ ಪೂಜಿಸುವುದು, ಇತರ ಇಚ್ಚೆಯುಳ್ಳ ಭಕ್ತರು ದೇವರ ಬಳಿ ಇರುವ ಕರಿಯಣ್ಣ, ಕೆಂಚಣ್ಣ, ದೊಡ್ಡದೇವರು ಹಾಗೂ ಹುಲಿವಾಹನ ಮಾಡಿಸಿ ಕೊಡುವುದು. ಒಕ್ಕಲಿಗರಾದ ಗೌಡರ ಮನೆಯಿಂದ ಹಾಲು ತರುವುದಲ್ಲದೇ ದೇವಾಲಯ ಮತ್ತು ಜಾತ್ರೆಗಳ ಮೇಲ್ವಿಚಾರಣೆ ನಡೆಸುವ ವಿವಿಧ ಶ್ರಮವಿಭಜನೆಯ ಕಾರ್ಯಗಳು ಪ್ರಾರಂಭವಾದವು. ಮಾದಿಗರಿಂದ ತಮ್ಮಡಿಗಳಿಗೆ ಈ ವೇಳೆಯಲ್ಲಿಯೇ ದೇವಾಲಯದ ಪೂಜೆಯ ಹಕ್ಕುಗಳ ಪೂರ್ಣ ಹಸ್ತಾಂತರವಾಗಿರುವುದು. ಈ ದೇವಾಲಯ ನಿರ್ಮಾಣಕ್ಕೆ ಕಾರಣರಾದ ಮಾದಿಗರಿಗೆ ಜಾತ್ರೆಯಲ್ಲಿ ಸೂಕ್ತಸ್ಥಾನಮಾನ ನೀಡಲಾಗಿದೆ. ಇವರನ್ನು ಅಂದು ದೇವಾಲಯದಲ್ಲಿ ಹೂವಿನಹಾರ ಹಾಕಿ ಗೌರವಿಸಲಾಗುತ್ತದೆ. ಗೋಕುಲಾಷ್ಟಮಿಯು ವೈಷ್ಣವ ಪಂಥದ ಪ್ರಮುಖ ದಿನವಾದುದರಿಂದ ಜಾತ್ರೆ ಮತ್ತು ಇತರ ಶುಭದಿನಗಳ ಪೂಜೆಯ ವೇಳೆಗಳು ದೇವಾಲಯದಲ್ಲಿ ವೈದಿಕ ಬ್ರಾಹ್ಮಣರಿಗೆ ಮೀಸಲು ಆಗುವಂತೆ ಮಾಡಲಾಗಿದೆ. ಈ ಅರ್ಚಕರ ನಾಲ್ಕು ತಲೆಮಾರಿನವರು ಜಾತ್ರೆಯಲ್ಲಿಯೇ ಅಲ್ಲದೇ ನೂತನ ದೇವಾಲಯದ ಉದ್ಘಾಟನೆ, ವಿಗ್ರಹಪ್ರತಿಷ್ಠಾಪನೆ, ಗೋಪುರ ನಿರ್ಮಾಣ, ಕಳಸ ಪ್ರತಿಷ್ಠಾಪನೆಯ ಸಮಯಗಳಲ್ಲಿ ಶಾಸ್ತ್ರೋಕ್ತವಾಗಿ ಭಾಗವಹಿಸಿ ಪೂಜೆ ಸಲ್ಲಿಸುತ್ತಾರೆ.

ಅರವತ್ತರಿಂದ ಎಪ್ಪತ್ತನೆಯ ದಶಕದಲ್ಲಿ ದೇವಾಲಯದ ತೊಲೆ, ಕಂಬಗಳು, ತಗಡಿನಶೀಟ್‌ಗಳ ನಿರ್ಮಾಣವನ್ನು ಕಂಡುಕೊಂಡಿತು. ಆದರೂ ಗರ್ಭಗುಡಿಯಲ್ಲಿ ಮಾತ್ರ ಮೂಲದಾಗಿರುವ ಕಕ್ಕೆಮರದ ಮೂರ್ತಿಯನ್ನೇ ಉಳಿಸಿಕೊಳ್ಳಲಾಯಿತು. ಆ ವೇಳೆಯಲ್ಲಿನ ಮರದ ಕಂಬಗಳಲ್ಲಿ ಅಲಂಕಾರವಾಗಿ ಕೆತ್ತಿದ ಹೂವು, ಬಳ್ಳಿ ಹಾಗೂ ಜ್ಯಾಮಿತಿ ಆಕಾರದ ಚಿತ್ರಗಳು ಕಲಾತ್ಮಕತೆಯಿಂದ ಕೂಡಿದ್ದವುಗಳಾಗಿದ್ದವು.

ದೇವಾಲಯದ ಅಭಿವೃದ್ಧಿಗೆ ಸ್ಥಳೀಯ ಸಮಿತಿಗಳು ರಚಿತವಾಗಿದ್ದು, ಭೂಹಳ್ಳಿಯ ಶ್ರೀ.ಕೆಂಚೇಗೌಡರು ಎಂಬ ವಯೋವೃದ್ಧರು ಕನ್ವೀರರಾಗಿ ಮಾಡಿರುವ ಸೇವೆ ಪ್ರಶಂಸಾರ್ಹವಾಗಿದೆ. ಕಾಡಹಳ್ಳಿಯ ಶ್ರೀ.ಶಿವಲಿಂಗೇಗೌಡ, ಮಂಡ್ಯ ಜಿಲ್ಲೆಯ ವಿಶೇಷ ಜಿಲ್ಲಾಧಿಕಾರಿ ಶ್ರೀ.ಬಿ.ಎಲ್.ಲಕ್ಕೇಗೌಡರ ಶ್ರಮದಿಂದಾಗಿ ಕ್ರಿ.ಶ.೧೯೮೬ರ ವೇಳೆಗೆ ದೇವಾಲಯಕ್ಕೊಂದು ಉತ್ತಮ ಕಲ್ಲಿನ ಕಟ್ಟಡ ಲಭಿಸಿದುದೇ ಅಲ್ಲದೇ ಶಿವಾರಪಟ್ಟಣದಿಂದ ಮಾಡಿಸಿದ ೩ ಅಡಿಗಳ ಮುತ್ತತ್ತಿರಾಯನ ಶಿಲಾವಿಗ್ರಹದ ಗರ್ಭಗುಡಿಯ ವಿಗ್ರಹ ಲಭ್ಯವಾಯಿತು.

ಮುತ್ತತ್ತಿರಾಯನು ಪ್ರಸಿದ್ಧಿಗೆ ಬಂದ ಮೇಲೆ ಭಕ್ತರು ತಾವು ವಾಸಿಸುವ ಸ್ಥಳಗಳ ಬಳಿಯೇ ಮುತ್ತತ್ತಿರಾಯನ ದೇವಾಲಯದ ಕಟ್ಟಿ ಪೂಜಿಸಿಕೊಳ್ಳುತ್ತಿದ್ದಾರೆ. ಆಂಜನೇಯನಗುಡಿ ರಚನೆಯಾದರೂ ಜನತೆ ಅದನ್ನು ಮುತ್ತತ್ತಿರಾಯ ಎಂತಲೇ ಕರೆಯುತ್ತಾರೆ. ಹಾಸನ ಜಿಲ್ಲೆಯ ಗಂಡಸಿಯಲ್ಲಿಯೂ ಸಹ ಆಂಜನೇಯನಿಗೆ ಮುತ್ತತ್ತಿರಾಯ ಎಂತಲೇ ಕರೆಯುತ್ತಾರೆ. ದಕ್ಷಿಣ ಕರ್ನಾಟಕದ ಪ್ರಮುಖ ಪಟ್ಟಣ, ನಗರಗಳಲ್ಲೂ ಈ ಉಪಕ್ಷೇತ್ರಗಳು ಹರಡಿದ್ದು ಉತ್ತಮವಾದ ಸಾಂಸ್ಕೃತಿಕ ಪ್ರಗತಿಯನ್ನು ಸಾಧಿಸುತ್ತಿವೆ. ಮುತ್ತತ್ತಿಯಲ್ಲಿ ವ್ಯಾಪಾರ ಮಾಡಲು ಹಲವಾರು ಗ್ರಾಮಗಳಿಂದ ಬಂದು ಜನತೆ ನೆಲೆಸಿದ್ದಾರೆ. ಆದರೂ ಇವರೆಲ್ ಮುತ್ತತ್ತಿರಾಯನಲ್ಲಿ ಭಕ್ತಿ, ಆರಾಧನೆಗಳನ್ನು ಇರಿಸಿಕೊಂಡಿದ್ದಾರೆ. ಬಹು ಹಿಂದೆಯೇ ಸೋಲಿಗರ ಕುಟುಂಬ ಸಮೂಹಗಳು ಇಲ್ಲಿಗೆ ಬಂದು ನೆಲೆಸಿ ಮುತ್ತತ್ತಿಯ ಆರ್ಥಿಕ ಸಾಂಸ್ಕೃತಿಕ ಪ್ರಗತಿಯಲ್ಲಿ ಪಾಲ್ಗೊಂಡಿವೆ. ಗ್ರಾಮೀಣ ಸಮಾಜದ ಜನತೆ ಚಲನಶೀಲ ಪ್ರವೃತ್ತಿವುಳ್ಳವರಾದುದರಿಂದ ರಾಜ್ಯದ ವಿವಿಧ ಪ್ರಮುಖ ನಗರಗಳಿಗೆ ವಲಸೆಹೋಗಿ ಅಲ್ಲಿ ತಮ್ಮ ಆರಾಧ್ಯದೈವವನ್ನು ಆರಾಧಿಸಿ ತಮ್ಮ ದೈವಕ್ಕೆ ನಡೆದುಕೊಳ್ಳುವ ಭಕ್ತಿ, ಪೂಜೆ, ಸೇವೆ, ಆಚಾರ, ಸಂಪ್ರದಾಯ, ಪದ್ಧತಿಗಳನ್ನು ಮುಂದುವರಿಸಿಕೊಂಡು ಬರುತ್ತಿದ್ದಾರೆ. ಮುತ್ತತ್ತಿ ಪರಿಸರದ ಗ್ರಾಮೀಣ ಭಕ್ತರೂ ಇದಕ್ಕೆ ಹೊರತಾಗಿರದೆ ಇದರಲ್ಲಿ ಪಾಲ್ಗೊಂಡಿದ್ದಾರೆ. ಮುತ್ತತ್ತಿಗೆ ಸಾಧ್ಯವಾದಗಲೆಲ್ಲ ಪ್ರತ್ಯಕ್ಷವಾಗಿಯೋ, ಪರೋಕ್ಷವಾಗಿಯೋ ಸಹಾಯ ಮತ್ತು ಸೇವೆಗಳನ್ನು ಮಾಡುತ್ತಿದ್ದಾರೆ. ಚಲನಚಿತ್ರ ನಟ ಡಾ॥ರಾಜ್‌ಕುಮಾರ್ ಈ ದೇವರ ವರದಿಂದಲೇ ಜನಿಸಿದವರಾದುದರಿಂದ ಇವರ ಹೆಸರಿನಿಂದ ಮುತ್ತತ್ತಿ ಮತ್ತು ಮುತ್ತತ್ತಿರಾಯನ ಕ್ಷೇತ್ರವೂ ಮತ್ತಷ್ಟು ಪ್ರಸಿದ್ಧಿಗೆ ಬಂದಿತು. ಮಾಜಿ ಪ್ರಧಾನಿ ರಾಜೀವ್ ಗಾಂಧಿ ಹಂತಕರು ತಮ್ಮ ಅಡಗುತಾಣವನ್ನಾಗಿ ಮುತ್ತತ್ತಿಯನ್ನು ಮಾಡಿಕೊಂಡ ಮೇಲೆ ಅಂತರಾಷ್ಟ್ರೀಯವಾಗಿ ಮುತ್ತತ್ತಿ ಪ್ರಸಿದ್ಧಿಗೆ ಬಂದಿತು. ಕಾವೇರಿನದಿ ದಡದ ಇದೇ ಸ್ಥಳದಲ್ಲಿಯೇ

ಮತ್ತೊಂದು ಮುತ್ತತ್ತಿರಾಯನ ದೇವಾಲಯ ಬೆಳಕಿಗೆ ಬರುತ್ತಿದೆ. ಆದರೂ ಆರಂಭದ ಮುತ್ತತ್ತಿರಾಯನನ್ನು ಭಕ್ತರು 'ಮೂಡಲ ಮುತ್ತತ್ತಿರಾಯ' ಎಂದು ಆರಾಧಿಸುತ್ತಾ ಬರುತ್ತಿದ್ದಾರೆ. ಇಲ್ಲಿಯೇ ಕಟೂರಯ್ಯ ಎಂಬ ಪುಟ್ಟ ಶಿವದೇಗುಲ, ಭೈರವದೇಗುಲಗಳು ಇದ್ದು, ಶೈವ ಮತ್ತು ವೈಷ್ಣವ ಧರ್ಮದ ಸಂಗಮಸ್ಥಾನವಾಗಿ ಮುತ್ತತ್ತಿಯ ಸಾಂಸ್ಕೃತಿಕತೆ ಮುನ್ನಡೆಯುತ್ತಿದೆ.

# ಅನುಬಂಧ–೧ ಭಾವಚಿತ್ರಗಳು



ಮುತ್ತತ್ತಿರಾಯನ ದೇವಾಲಯ, ಮುತ್ತತ್ತಿ



ಮುತ್ತತ್ತಿರಾಯ, ಮುತ್ತತ್ತಿ



ಮಾನವ-ಮೊಸಳೆ ಹೋರಾಟದ ವೀರಗಲ್ಲು ಮುತ್ತತ್ತಿ



ಮುತ್ತತ್ತಿ ಜಾತ್ರೆಯಲ್ಲಿ ಉತ್ಸವಮೂರ್ತಿ



ಮುತ್ತತ್ತಿ ಜಾತ್ರೆಯಲ್ಲಿ ಕಾಯಿ ಚಚ್ಚಲು ಸಿದ್ಧರಾಗಿರುವುದು



ಮುತ್ತತ್ತಿಯಲ್ಲಿ ಹಾಲರಬಿಯನ್ನು ಹೊಡೆಯುತ್ತಿರುವುದು

## ಅನುಬಂಧ–೨

# ಮುತ್ತತ್ತಿಯ ಜನಪದ ಗೀತೆಗಳು

### ಯಾರಿಗೆ ವಲದೇಯಾ

ಯಾರಿಗೆ ವಲದೇಯೊ ಮುತ್ತಯ್ಯಾ
ವಾನನ್‌ಗೆ ವಲದೇಯೋ ಸ್ವಾಮಿ
ಭಕ್ತರಿಗೊಲದೇಯೋ ॥ಪಲ್ಲವಿ॥ *

ಸ್ವಾಮನ್ ಕೆರೆಯಲ್ಲಿ ಏನುಮಲೆಯ ಬೋಗ
ಸ್ವಾಮಿ ಮುತ್ತಯ್ಯ ವಳೆಮಟ್ಟೆ **
ಸ್ವಾಮಿ ಮುತ್ತಯ್ಯ ವಳಮಟ್ಟ ಬರುವಾಗ
ಸಾಮುರಾಣಿ ಮಂಜು ಕವುದಾವೊ

ಬಾಳೆಬಳಂಗಾವೊ ಮಲೆಮಂಜಕವುದಾವೊ
ದೂಪಾದ ಮಂಜುಕವುದಾವೊ
ಪಾದ್ಗಾರೆ ಮೇಲೆ ಪಾದ ಊರಿಕೊಂಡು
ವಮ್ಮಗಲದ ಮ್ಯಾಲೆ ವರಿಕೊಂಡು

ವಮ್ಮಲಗದ ಮ್ಯಾಲೆ ವರಿಕೊಂಡು
ಚಿನ್ನದ ಕೊರಲ ಎಡದವರೆ
ಚಿನ್ನಾದ ಕೊರಳ ಏನಂತ ಎಡದವ್ರೆ
ಲೋಲಾದ ಪರಸೆ ಬರಲಿಲ್ಲಾ

ವಮ್ಮಗಲ ಬೆಟ್ಟಕೆ ಹೊದರೆನು ನಿನ್ನಮಕ್ಕಳು
ಆದರ್‌ಸ ಕಡಿದಾರೆ ಹಸಿದೊಣ್ಣೆ
ಆದರ್ಸ ಕಡಿದಾರೆ ಹಸಿದೊಣ್ಣೆ ನಿನ್ನ ಮಕ್ಕಳು
ತೊಳಚಿಯ ಮಾಲೆ ವನಮಾಲೆ

ತೊಳಚಿಯ ಮಾಲೆ ವನಮಾಲೆ ಸೈವಾಗಿ
ಮೊಸರು ವಡಿಯಾಕೆ ಅದವಾದೊ
ಕಾಯಿವಡಯೋರು ಯಾವ್ಯಾವ ಕುಲದೋರು
ಅಚ್ಚಮಾದುಗರು ಅಲಸೂರೂ

ಅಚ್ಚಮಾದುಗರು ಅಲಸೂರು ಮುತ್ತಯ್ಯಾ
ಅವ್ರೆಚ್ಚಾಳದಿಂದ ಬರುತಾರೆ
ಎಚ್ಚಳದಿಂದ ಬರುತಾರೆ ಮುತ್ತಯಾ
ಕಾಯೊಡ್ದು ಗುಡಿಗೆ ಹೊರಟಾರೆ

ಅಚ್ಚಮಾದಿಗರು ಅಲಸೂರು ಮುತ್ತಯ್ಯಾ
ತೊಡೆತಟ್ಟೆ ಕ್ಯಾಕ ವಡೆದವರೆ

* ಪ್ರತಿ ಪದ್ಯದ ಕೊನೆಯಲ್ಲಿ ಹಿಮ್ಮೇಳದವರು ಪಲ್ಲವಿಯನ್ನು ಹಾಡುತ್ತಾರೆ.

** ಪ್ರತಿ ಪದ್ಯದ ಮೂರನೇಯ ಸಾಲಾಗಿ ಎರಡನೆಯ ಸಾಲೇ ಪುನರಾವರ್ತನೆಯಾಗುತ್ತದೆ.

ಕಟಕಲ್ಲು ಮುತ್ತತ್ತಿ ಮೆಟ್ಟಗಲ್ಲು ಪಾದ್ಯಾರೆ
ಪಟ್ಟಣ ಮುತ್ತಯ್ನ ಮೆರಣೆಗೆ
ಪಟ್ನಮುತ್ತಯ್ನ ಮೆರಣೆಗೊಗೊವಾಗ
ಕೆಟ್ಟೆವೆಂದಾವೊ ವೂರಗಾಳಿ
ವಳಸಾಲ್ ಮುತ್ತಯ್ಯ ವಳಗೇನು ಮಾಡಿಯೊ
ಬಡಮಕ್ಕಳು ಬಂದು ಬಾಕಲಲ್ಲಿ
ಬಡಮಕ್ಕಳು ಬಂದು ಬಾಕಲಲಿನಿಂತವರೆ
ಮಾಲೆ ಪರಸಾದ ದಯಮಾಡೋ
ಮಾಲೆಕೇಳೊಕೆ ನೀನ್ಯಾರ ಮಗಳಮ್ಮಾ
ನಾನು ಮುತ್ತಯ್ನ ಸಿಸುಮಗಳು
ನಾನು ಮುತ್ತಯ್ನ ಸಿಸುಮಗಳು ಬಂದೀವ್ನಿ
ಮಾಲೆ ಪರಸಾದ ದಯಮಾಡೊ
ಮಾದಗರ ಮನೆಗೆ ಹೂವ ಬಿಟ್ಟೊಗವ್ನೆ
ನಾಕಾಣೆ ಮನೆಯ ಒಳಗಿದ್ದಿ
ನಾಕಾಣೆ ಮನೆಯ ಒಳಗಿದ್ದಿ ಮುತ್ತಯ್ಯ
ಮಾಲೆಬಿಟ್ಟವನೆ ಮಲಗೆಯಾ
ಮಾದಗೆರಿಗೆ ಓದಾರಾತ್ತಯ್ಯಾ
ಆದೂ ಬಿಟ್ಟವ್ನೆ ಗುಲಗಂಜಿ
ಆದು ಬಿಟ್ಟವ್ನೆ ಗುಲಗಂಜಿ ರುದ್ರಾಕ್ಷಿಯ
ಮನಗಿದ್ದಿ ಹೆಣ್ಣೆ ಬೆಲೆಹೇಳೆ
ಮದಗಿತಿನಾನಾದೆ ಮಾಣಿಕದ ಹರಳಾದೆ
ಮಾದರ್ಚನ್ನಯ್ನ ಮಗಳಾದೇ
ಮಾದರ್ಚನ್ನಯ್ನ ಮಗಳಾದೆ ಮುತ್ತಯ್ಯ
ಪಾದಬೇಡೊಕೆ ಸಿಸುವಾದೇ
ಕಕ್ಕೆಸೊಪ್ಪಿಂದ ವಾನನ ಬಿಗಿಸ್ಯಾವೆ
ಎಡಬಲಕೆ ಮಾಲೆ ಬುಡುಸಾರೆ
ಎಡಬಲಕೆ ಮಾಲೆ ಬುಡುಸಾವ್ರೆದಾಸೈಗೊಳು
ಬೀಸವ್ರೆ ಬೆಳ್ಳಿ ಚವರಾವ
ಬೀಸಾರೆ ಬೆಳ್ಳಿ ಚವಾರಾವೊ
ಹಾಸಾರೆವುಲಿಯ ಚರಮಾವಾ

### ಬಾರಿಯ ಬರಗ ಕಣೊ

ಬಾರಿಯ ಬರಗಾ ಕಣೊ
ನಮ್ಮುತ್ತೈಗ್ನೆ ಬೆಳ್ಳಿ ತಿರುಸೂಲಾ ಕಾಣೊ
ಹಣೆಯಲ್ಲಿ ಉಬತ್ತಿ ಕೊರಳಲ್ಲಿ ರುದ್ರಾಕ್ಷಿ
ಕೈಯ್ಯಲಿ ಕಂಸಾಳೆ ಕಾಣೊ॥ಪಲ್ಲವಿ॥ •

ತಂಪೊತ್ತಿನಲ್ಲಿ ಕೆಂಪೇರೂ ಬೀದೀಲಿ
ಕೆಂಪುಗಣಗಾಲ ಮುಡಕೊಂಡು
ಕೈಯಲಿ ಕಂಸಾಳೆ ಕಾಣೊ
ಕೆಂಪು ಗಣಗಾಲ ಮುಡಕೊಂಡು ಮುತ್ತಯ್ಯಾ
ತಂಪೊತ್ತಿನಲ್ಲಿ ಮೆರೆದಾನೂ
ಕೈಯಲಿ ಕಂಸಾಳೆ ಕಾಣೊ
ತಂಪೊತ್ತನಲ್ಲಿ ಮಯವಾಗೊ ಮುತ್ತಯ್ಯಾ
ಕೆಂಪೆರೂರಾತಿಯ ಬೆಳಗಾರು
ಕೈಯಲಿ ಕಂಸಾಳೆ ಕಣೊ
ಸರೊತ್ತಿನಲ್ಲಿ ಸರಗೂರ ಬೀದೀಲಿ
ಸುರವಾಡದೂವ ಮುಡಕೊಂಡು
ಕೈಯಲಿ ಕಂಸಾಳೆ ಕಾಣೊ
ಸುರವಾಡದೂವ ಮುಡಕೊಂಡುಮುತ್ತಯ್ಯಾ
ಸರೊತ್ತಿನಲ್ಲಿ ಮೆರಾದಾನು
ಕೈಯಲಿ ಕಂಸಾಳೆ ಕಾಣೊ
ಅಣ್ಣಾ ಮುತ್ತಯ್ನ ಹಣೆಯ ಮ್ಯಾಗಾಳನಾಮ
ಸಣ್ಣಾನೂಲೆಳೆಯ ತಗದಂಗೆ
ಕೈಯಲಿ ಕಂಸಾಳೆ ಕಾಣೊ
ಸೊಣ್ಣನೂಲೆಳೆಯ ತಗದಂಗೆ ಮುತ್ತಯ್ಯ
ಅಣ್ಣನಗೊತ್ತಿಲ್ಲವೆ ಅರನಾಮ
ಕೈಯಲಿ ಕಂಸಾಳೆ ಕಾಣೊ
ಅಪ್ಪಾ ಮುತ್ತೈನ ವಟ್ಟೆಮಾಗಳ ನಾಮ
ಬಟ್ಟೆನೂಲೆಳೆಯ ತಗದಂಗೆ
ಕೈಯಲಿ ಕಂಸಾಳೆ ಕಾಣೊ
ಬಟ್ಟೆನೂಲೆಳೆಯ ತಗದಂಗೆ ಮುತ್ತಯ್ಯ
ಅಪ್ಪನ್ಗೊತ್ತಿಲ್ಲವೆ ಅರನಾಮ .
ಕೈಯಲಿ ಕಂಸಾಳೆ ಕಾಣೊ
ಎಲ್ಲಿ ನೋಡಿದರೂ ನೆಲ್ಲಿಲ್ನಿರೇಇಲ್ಲಾ
ಎಲ್ಲಿ ತೆದ್ಯಯ್ಯಾ ಎಳೆನಾಮ
ಕೈಯಲಿ ಕಂಸಾಳೆ ಕಾಣೊ
ಎಲ್ಲಿ ತೇದಯ್ಯಾ ಎಳೆನಾಮ ಮುತ್ತಯ್ಯಾ
ಎಳನೀರಲ್ತೆದು ಧರಾಸಾವರೆ
ಕೈಯಲಿ ಕಂಸಾಳೆ ಕಾಣೊ
ಕಂಬಾ ಅರಿಯಾಕೆ ಎಡವಿಲ್ಲ ನಮ್ಮಬೀದಿ
ಕಂಬಾದ ಮೇಗಾಳ ಉಚ್ಚಾಮುತ್ತು

•ಪ್ರತಿ ಪದ್ಯದ ಕೊನೆಯಲ್ಲಿ ಹಿಮ್ಮೇಳದವರು ಪಲ್ಲವಿಯನ್ನು ಹಾಡುತ್ತಾರೆ.

ಕೈಯಲಿ ಕಂಸಾಳೆ ಕಣೊ
ಕಂಬದ ಮ್ಯಾಗಳಾ ಉಚ್ಚಮುತ್ತು ಮೆರೆಯೋಕೆ
ಅರವಿಲ್ಲಾ ನಮ್ಮಾ ರಾಜ ಬೀದಿ
ಕೈಯಲಿ ಕಂಸಾಳೆ ಕಾಣೊ
ಅಲಗೆ ಮ್ಯಾರ್‍ಯಾಕೆ ಅರವಿಲ್ಲ ನಮ್ಮ ಬೀದಿ
ಅಲಗೆ ಮ್ಯಾಗಳ ಉಚ್ಚಾಮುತ್ತು
ಕೈಯಲಿ ಕಂಸಾಳೆ ಕಾಣೊ
ಅಲಗೆ ಮ್ಯಾಗಳ ಉಚ್ಚಮುತ್ತು ಮೆರೆಯಾಕೆ
ಅರವಿಲ್ಲ ನಮ್ಮ ರಾಜ ಬೀದಿ
ಕೈಯಲಿ ಕಂಸಾಳೆ ಕಾಣೊ
ಮುತ್ತತ್ತಿಗೊಗುರುಗೆ ಒಂದಾದೊಉಲಿಕರಡಿ
ಅಪ್ಪಾ ಮುತ್ತಯ್ಯಾ ಗತೀ ಎಂದು
ಕೈಯಲಿ ಕಂಸಾಳೆ ಕಾಣೊ
ಅಪ್ಪಾಮುತ್ತೈಯ್ಯಾ ಗತಿಯೆಂದುವೊಗರುಗೆ
ಕೆಡದಿದ್ದ ಉಲಿ ಕೈಲಾವಾದೊ
ಕೈಯಲಿ ಕಂಸಾಳೆ ಕಾಣೊ
ಬೆಟ್ಟಾದಾಉಲಿಯ ಅಡ್ಡಾನಿಲಸಿಕೊಂಡು
ಬಟ್ಟಾಲುಹಾಲ ಕರೆಯೋನೆ
ಕೈಯಲಿ ಕಂಸಾಳೆ ಕಾಣೊ
ಜೊವೊಂಬಾನಾ ಕರೆಯೋನೆ ಮುತ್ತಯ್ಯಾ
ಗುರುಗುಟ್ಟಾವೊ ಉಲಿ ಕರಡಿ
ಕೈಯಲಿ ಕಂಸಾಳೆ ಕಾಣೊ
ಬೆಟ್ಟಾದಾ ಉಲಿಯ ಅಡ್ಡ ನಿಲಸಿಕೊಂಡು
ಬಟ್ಟಾಲೆಲಾಲ ಕರೆಯೋನೆ
ಕೈಯಲಿ ಕಂಸಾಳೆ ಕಾಣೊ
ಬಟ್ಟಲೆಲ್ಲಾಲಾ ಕರೆಯೊನೆ ಮುತ್ತಯ್ಯ
ವಟ್ಟೆ ವಳದಾವೊ ಬಿಸಲಿಗೆ
ಕೈಯಲಿ ಕಂಸಾಳೆ ಕಾಣೊ
ಎತ್ತಾಲಾರದ ಕಂಬ
ಎತ್ತು ನಿಲ್ಲುವರ್‍ಯಾರು ಅಂಗರಕೆ ಕಂಬಗರ್ಡಗಂಭ
ಕೈಯಲಿ ಕಂಸಾಳೆ ಕಾಣೊ
ಅಂಗಾರಕೆ ಕಂಬಾಗರ್ಡಗಂಭ ಮಾಯೆಯಲಿ
ಕಡದುಗೆದವರೆ ಕಲ್ಲಾಕಂಬ
ಕೈಯಲಿ ಕಂಸಾಲೆ ಕಣೊ

## ಹೊಗೋಣ ಜಾತರೆಗೆ

ಹೊಗೋಣ ನಾವು ಜಾತರಿಗೆ ಶಿವರಾತರಿಗೆ
ಸ್ವಾಮಿ ಮುತ್ತಯ್ನ ಪೂಜೆಗೆ
ನಾವು ಹೊಗೋಣ ಜಾತರಗೆ ॥ಪಲ್ಲವಿ॥

ಆವುಸುತ್ತೇಳ ಆವಿಗೆಯಾ ಮೆಟ್ಟೇಳೆ
ನಾರಿರೆಣ್ಣುಗೂಳು ನೆರಳೆಂದು
ನಾವು ಹೊಗೋಣ ಜಾತರಗೆ *

ನಾರಿರೆಣ್ಣುಗೊಳು ನೆರಳು ಕೇಳಾವೆಂದು
ಅರಣ್ಯದಲ್ಲಿ ನೆಲಗೊಂಡ
ನಾವು ಹೊಗೋಣ ಜಾತರಗೆ

ಒಪ್ಪಾಸದಸಾಲೆ ಚಮ್ಮಳೆಗೆ ಮೆಟ್ಟಿಳೆ
ವಿತ್ರೆರೆಣ್ಣುಗೊಳು ನೆರಳೆಂದು
ನಾವು ಹೋಗೋಣ ಜಾತರೆಗೆ

ಮಿತ್ರೆರೆಣ್ಣುಗೂಳ ನೆರಳಕೇಳ್ಯಾವೆಂದು
ಮೂಗುತ್ತದಮೇಲೆ ನೆಲಗೊಂಡಾ
ನಾವು ಹೊಗೋಣ ಜಾತರಗೆ

ಮುತ್ತತ್ತುರಾಯ ಸತುವಂತ ನನ್ನೊಡೆಯ
ಕಕ್ಕೆಸೊಪ್ಪೆಲ್ಲಿ ಮನೆಮಾಡಿ
ನಾವು ಹೊಗೋಣ ಜಾತರಗೆ

ಕಕ್ಕೆ ಸೊಪ್ಪೆಲ್ಲಿ ಮನೆಮಾಡಿ ಮುತ್ತಯ್ಯ
ಮಲೆಮಂಜರದೆಲ್ಲಿ ವರಾಗವರೆ
ನಾವು ಹೊಗೋಣ ಜಾತರಗೆ

ಕಟಕಲ್ಲು ಮುತ್ತತ್ತಿ ಮೆಟಗಲ್ಲು ಪಾದ್ದಾರೆ
ಪಟ್ಟಣದ ಮುತ್ತೈನ ಮೆರಣಿಗೆ
ನಾವು ಹೊಗೋಣ ಜಾತರೆಗೆ

ಪಟ್ಟಣಮುತ್ತಯ್ನ ಮೆರಣೆಗೊಗಾಲಗ .
ಕೆಟ್ಟೆನೆಂದಾವೊ ವರಗಾಳಿ
ನಾವು ಹೋಗೋಣ ಜಾತರೆಗೆ

ಪಾದ್ದಾರೆ ಮೇಲೆ ಪಾದಾಊರಿಕೊಂಡು
ಒಮ್ಮಲಗದ ಮೇಲೆ ಒರಿಕೊಂಡು
ನಾವು ಹೋಗೋಣ ಜಾತರೆಗೆ

ಪಾದ್ದಾರೆಯ ಮೇಲೆ, ಪರಿಸೆಪಾಳ್ಯದೋರು
ಅವರಿರೋ ಸಲುವಾಗಿ ಬರುತಾರೆ
ನಾವು ಹೋಗೋಣ ಜಾತೆರಿಗೆ

* ಪ್ರತಿ ಪದ್ಯದ ಕೊನೆಯಲ್ಲಿ ಹಿಮ್ಮೇಳದವರು ಪಲ್ಲವಿಯನ್ನು ಹಾಡುತ್ತಾರೆ.

ಅತ್ತಿಮರದ ಮ್ಯಾಲೆ ಅತ್ತನೋಡು ಮುತ್ತಯ್ಯ
ಪಾದ್ವಾರೆ ಮೇಲೆ ಪರಿಸೇಯ
ನಾವು ಹೋಗೋಣ ಜಾತರಿಗೆ

ಪಾದ್ವಾರೆ ಮ್ಯೇಲೆ ಪರಿಸಿ ಪಾಳ್ಯದೋರು
ಅವರಿರೊ ಸಲುವಾಗಿ ಬರುತಾರೆ
ನಾವು ಹೋಗೋಣ ಜಾತರಿಗೆ

ಅಲುಕರಸಿವ್ನಿ ಅರುವಾಣ ಬೆಳಗಿವಿನಿ
ಬಾಳೆಯ ಅಣ್ಣ ಎಡದಿವಿನಿ
ನಾವು ಹೋಗೋಣ ಜಾತರಿಗೆ

ಬಾಳೆಯಲಣ್ಣ ಎಡದಿವಿನಿ ಮುತ್ತಯ್ಯ
ಬಾಯಾರಿ ಬರುವ ಪರಿಸೆಗೆ
ನಾವು ಹೋಗೋಣ ಜಾತರಿಗೆ

ಎಲ್ಲಾ ದೇವರಗೂ ಹೆಂಡಾರ ಐಬೋಗಾ
ಹೆಂಡಾರಿಲ್ಲದ ಮುಂಡುಗಾರ
ನಾವು ಹೋಗೋಣ ಜಾತರಿಗೆ

ಹೆಂಡರಿಲ್ಲದ ಮುಂಡುಗಾರ ಮುತ್ತಯ್ಯಾ
ಗಂಡುಲಿಯ ಮ್ಯಾಲೆ ಮೆರದಾನು
ನಾವು ಹೋಗೋಣ ಜಾತರಿಗೆ

ಕಡಲೇಕಾಯ್ನಂಗೆ ಕಡದಿತ್ತು ನಿನ್ನ ಪರಸೆ
ಕಡುಜಾಣಕೇಳು ಉಚ್ಚಮುತ್ತು
ನಾವು ಹೋಗೋಣ ಜಾತರಿಗೆ

ಕಡುಜಾಣಕೇಳೊ ಉಚ್ಚಮುತ್ತು ನಿನ್ನ ಪರಸೆ
ಕಡೆದವು ಕಾವೇರಿ ವಳೆಗಂಟ
ನಾವು ಹೋಗೋಣ ಜಾತರಿಗೆ

ತುಂಬಿದು ಮುತ್ತತ್ತಿ ತುಳಕಿತ್ತು ಕಾವೇರಿ
ಗಂಡುಮತ್ತಿಯ ಮರನೇರಿ .
ನಾವು ಹೋಗೋಣ ಜಾತರಿಗೆ

ಗಂಡುಮತ್ತಿಯ ಮರನೇರಿ ಮುತ್ತಯ್ಯ
ಗಂಡುಲಿಯ ಮ್ಯಾಲೆ ಮೆರುದಾನು
ನಾವು ಹೋಗೋಣ ಜಾತರಿಗೆ

ನಾಗನಮಡನಾಂಗಿ ಹರಿದಿತ್ತು ನಿನ್ನ ಪರಸೆ
ಬುದವಂತ ಕೇಳು ಉಚ್ಚಮುತ್ತು
ನಾವು ಹೋಗೋಣ ಜಾತರಿಗೆ

ಬುದುವಂತ ಕೇಳೊ ಉಚ್ಚಮುತ್ತು ನಿನ್ನ ಪರಸೆ
ಹಬ್ಬಿದ ಕಾವೇರಿ ವಳೆಗಂಟ

ನಾವು ಹೋಗೋಣ ಜಾತರಿಗೆ

ತುಂಬಿದಮುತ್ತತಿ ತುಳಕಿತ್ತು ಕಾವೇರಿ
ಗಂಡುಮತ್ತೀಯ ಮರನೇರಿ
ನಾವು ಹೋಗೋಣ ಜಾತರಿಗೆ

ಗಂಡು ಮತ್ತೀಯ ಮರನೇರಿ ಮುತ್ತಯ್ಯ
ಗಂಡುಲಿಯ ಮ್ಯಾಲೆ ಮ್ಯಾರುದಾನು
ನಾವು ಹೋಗೋಣ ಜಾತರಿಗೆ

## ನಾಕಂಡೆ ನನ್ನಲ್ಲಿ ಮನೆದೇವರಾ

ನಾ ಕಂಡೆ ನನ್ನಲ್ಲಿ
ಮನೆದೇವರಾ
ನಮ್ಮ ಮನೆದೇವರಾ ॥ಪಲ್ಲವಿ॥

ಪಾಲಕೆ ಕಜ್ಜಾಯ ಬೆಳ್ಳಿಬಾಯಲ ಬೀಗ
ಹರಿಯೋ ವಳೆಯಲ್ಲಿ ಬರಲಾರೆ
ನಮ್ಮ ಮನೆದೇವರಾ •

ಹರಿಯೋ ವಳೆಯಲ್ಲಿ ಬರಲಾರೆ ಮುತ್ತಯ್ಯ
ಒಪ್ಪಿಸಿಕೊಳ್ಳೊ ಅರಕೇಯಾ
ನಮ್ಮಾ ಮನೆದೇವರಾ

ಅರಕೆ ಒಪ್ಪಾಕೆ ಚಿಕೊನು ನಾನಲ್ಲ
ಸುತ್ತಿಬಾ ಮಗಳೆ ಗುಡಿಬಳಸಿ
ನಮ್ಮ ಮನೆದೇವರ

ಸುತ್ತಿ ಬಾ ಮಗಳೆ ಗುಡಿಬಳಸಿ ಬಾ ಮಗಳೆ
ಪುತ್ರಸಂತಾನವ ಕೊಡವೆನು
ನಮ್ಮಾ ಮನೆದೇವರಾ

ಆಲರಬಿಕೋಡು ತ್ಯಾಲಿ ಭಾಗ್ಯವಕೋಡು
ಬಾಲನಕೊಡು ಮಾನೆ ಸ್ವಾಮಿ
ನಮ್ಮಾ ಮನೆದೇವರಾ

ಬಾಲಾನಕೊಡು ಮನೆಸ್ವಾಮಿ ಮುತ್ತಯ್ಯಾ
ಬಟ್ಟಾಲರಜವ ವಡದೇನೂ
ನಮ್ಮಾ ಮನೆದೇವರಾ

ಬಾಳಗೆ ಕಜ್ಜಾಯ ಬೆಳ್ಳಿ ಬಾಯಲಬೀಗ
ನಾಉಕ್ಕೊ ವಳೆಯಲ್ಲಿ ಬರಲಾರೆ
ನಮ್ಮಾ ಮನೆದೇವರ

• ಪ್ರತಿ ಪದ್ಯದ ಕೊನೆಯಲ್ಲಿ ಹಿಮ್ಮೇಳನದವರು ಪಲ್ಲವಿಯನ್ನು ಹಾಡುತ್ತಾರೆ.

ಉಕ್ಕೊ ವಳೆಯಲ್ಲಿ ಬರಲಾರೆ ಮುತ್ತಯ್ಯಾ
ಒಪ್ಪಿಸಿಕೊಳ್ಳೊ ಅರಕೆಯ
ನಮ್ಮಾ ಮನೆದೇವರಾ
ಹರಕೆ ಒಪ್ಪಾಕೆ ಚಿಕ್ಕೊನು ನಾನಲ್ಲ
ಸುತ್ತಿ ಬಾ ಮಗಳೆ ಗುಡಿಬಳಸಿ
ನಮ್ಮಾ ಮನೆದೇವರಾ
ಸುತ್ತಿ ಬಾ ಮಗಳೆ ಗುಡಿಬಳಸಿ ಬಾ ಮಗಳೆ
ಪುತ್ರ ಸಂತಾನವ ಕೊಡುವೆನು
ನಮ್ಮಾ ಮನೆದೇವರಾ
ಶಿಸುಭಾಗ್ಯವ ಕೊಡು ಒಪ್ಪಿದ ಭಾಗ್ಯವಕೊಡು
ಪುತ್ರನ ಕೋಡು ಮನೆಸ್ವಾಮಿ
ನಮ್ಮಾ ಮನೆದೇವರಾ
ಪುತ್ರಾನ ಕೋಡು ಮನೆಸ್ವಾಮಿ ಮುತ್ತಯ್ಯಾ
ಸುತ್ತಾಲರಜವ ವಡೆದೆನು
ನಮ್ಮಾ ಮನೆದೇವರಾ

**ಗುಂಜು ಮಲೆ ವಡೆಯಾ**

ಗುಂಜು ಮಲೆ ವಡೆಯಾ
ಗುರುಗುಂಜು ಮಲೆವಡೆಯಾ
ಚಂಡು ಮಲ್ಲಿಗೆಹೂವು ಬಂದೊ
ನಿನ್ನಗಂಜಿಕೆಯಾಕಯ್ಯಾ ॥ಪಲ್ಲವಿ॥
ಲೋಕಾ ತೋರಯ್ಯ ಸತುವಂತ ನನ್ನೊಡೆಯ
ಕಕ್ಕೆಸೊಪ್ಪಲ್ಲಿ ಮನೆಮಾಡಿ
ನಿನ್ನಗಂಜಿಕೆ ಯಾಕಯ್ಯಾ •
ಕಕ್ಕೆ ಸೊಪ್ಪಲ್ಲಿ ಮನೆಮಾಡಿ ಮುತ್ತಯ್ಯಾ
ಮಲೆಮಂಜರದಲ್ಲಿ ವರಗವರೆ
ನಿನ್ನಗಂಜಿಕೆ ಯಾಕಯ್ಯಾ
ಕಕ್ಕೆಸೊಪ್ಪಿಗೊಲದ ಕವಲುನಾಮಕೆವೊಲಿದಾ
ಕಾಡುಸೋಲಿಗರ ಮಗಳಿಗೆ
ನಿನಗಂಜಿಕೆ ಯಾಕಯ್ಯಾ
ಕಾಡು ಸೋಲಿಗರ ಮಗಳಿಗೆ ಮುತ್ತಯ್ಯ
ಕವಲು ನಾಮಕೆ ವಲಸದವನೆ
ನಿನಗಂಜಿಕೆಯಾಕಯ್ಯಾ

• ಪ್ರತಿ ಪದ್ಯದ ಕೊನೆಯಲ್ಲಿ ಹಿಮ್ಮೇಳದವರು ಪಲ್ಲವಿಯನ್ನು ಹಾಡುತ್ತಾರೆ.

ಎಲ್ಲಾ ದೇವರಿಗೂ ಹೆಂಡರ ಐಬೋಗ
ಹೆಂಡರಿಲ್ಲದಾ ಮುಂಡುಗಾರ
ನಿನಗಂಜಿಕೆ ಯಾಕಯ್ಯಾ

## ಮಾತಾಡು ಗಿಣಿಯೆ

ಮಾತಾಡು ಗಿಣಿಯೆ ನೀಲವೇಣಿಯೆ ಕಣ್ಣೀರಿನಾ ಕತೆಯಾ
ಅರಿತು ಬಾಳಲಿ ಲೋಕಾಜನರೆಲ್ಲಾ ಅಣ್ಣಾತಂಗಿ ಕತೆಯ ॥ಪಲ್ಲವಿ॥
ಮುತ್ತತ್ತಿರಾಯ ಸತುವಂತ ನನ್ನೊಡೆಯ ಗದ್ದಿಗೆ ಸುಂಗಾರವು
ಕಕ್ಕೆ ಸೊಪ್ಪೆಲ್ಲಿ ಮನೆ ಮಾಡಿ ಸ್ವಾಮಿಗೆ ಸುಂಗಾರವು •
ಕಕ್ಕೆಸೊಪ್ಪೆಲ್ಲಿ ಮನೆ ಮಾಡಿ ಮುತ್ತಯ್ಯ ಗದ್ದಿಗೆ ಸುಂಗಾರವು
ಮಲೆಮಂಜರದೆಲಿ ವರಗವರೆ ಸ್ವಾಮಿಗೆ ಸುಂಗಾರವು
ವಾಲಗವೆ ನಾರಿ ವಾನುಳ್ಳದೇವರಿಗೆ ಗದ್ದಿಗೆ ಸುಂಗಾರವು
ವಾನನ ಮ್ಯಾಲೆ ಮೆರಿಯೋನು ಸ್ವಾಮಿಗೆ ಸುಂಗಾರವು
ವಾನನಮ್ಯಾಲೆ ಮೆರೆಯೊ ಮುತ್ತಯ್ಯಾನ್ಗೆ ಗದ್ದಿಗೆ ಸುಂಗಾರವು
ವಾಲಗವೇ ನಾರಿ ಅನುಕಾಲ ಸ್ವಾಮಿಗೆ ಸುಂಗಾರವು
ಮಜ್ಜನಕ್ಕೊತ್ತಾಯ್ತು ಎದ್ದು ಬಾರೊ ಮುತ್ತಯ್ಯ ಗದ್ದಿಗೆ ಸುಂಗಾರವು
ಮಜ್ಜನದ ನೀರು ತಿಳನೀರು ಸ್ವಾಮಿಗೆ ಸುಂಗಾರವು
ವಾಲಗವೆ ನಾರಿ ವಾನುಳ್ಳ ದೇವರಿಗೆ ಗದ್ದಿಗೆ ಸುಂಗಾರವು
ವಾನನ ಮ್ಯಾಲೆ ಮ್ಯಾರಿಯೋನು ಸ್ವಾಮಿಗೆ ಸುಂಗಾರವು
ವಾನನ ಮ್ಯಾಲೆ ಮೆರೆಯೊ ಮುತ್ತಯ್ಯಾನ್ಗೆ ಗದ್ದಿಗೆ ಸುಂಗಾರವು
ವಾಲಗವೇ ನಾರಿ ಅನುಗಾಲ ಸ್ವಾಮಿಗೆ ಸುಂಗಾರವು
ಮಜ್ಜನವ ನಾರಿ ಮದನಗೋಪಾಲನ್ಗೆ ಗದ್ದಿಗೆ ಸುಂಗಾರವು
ಚಜ್ಜಿಗೆ ಮ್ಯಾಲೆ ಮೆರೆಯೋನು ಸ್ವಾಮಿಗೆ ಸುಂಗಾರವು
ಚಜ್ಜೆಯ ಮ್ಯಾಲೆ ಮೆರೆಯೊ ಮುತ್ತನ್ಗೆ ಗದ್ದಿಗೆ ಸುಂಗಾರವು
ಮಜ್ಜನವೆ ನಾರಿಗೆಅನೂಗಾಲ ಸ್ವಾಮಿಗೆ ಸುಂಗಾರವು
ಒಬ್ಬುನೆನಿಂತ ಅಡವಿಲಿಕಡದ್ನಲ್ಲ ಮುತ್ತಯ್ಯ ಗದ್ದಿಗೆ ಸುಂಗಾರವು
ಕಾಡುಮಲ್ಲಿಗೆಯ ಘಮಲಕ್ಕೆ ಸ್ವಾಮಿಗೆ ಸುಂಗಾರವೊ
ಅಡವಿಮ್ಯಾಲಾಲದಮರ ಗಿಡದಲ್ಲೊಗ್ಲರದೊಡ್ಡಿ ಗದ್ದಿಗೆ ಸುಂಗಾರವು
ಬೆಡಗಲೆಗೋವ ಕರೆದವ್ನೆ ಸ್ವಾಮಿಗೆ ಸುಂಗಾರವೊ
ಬೆಡಗ್ನಲ್ಲೆ ಗೋವ ಕಡರಯೋನೆ ಮುತ್ತಯ್ಯ ಗದ್ದಿಗೆ ಸುಂಗಾರವು
ಬೆಡಗು ಬ್ಯಾಡರಿಗೆ ತಿಳಿದಲ್ಲೊ ಸ್ವಾಮಿಗೆ ಸುಂಗಾರವು
ದೊಡ್ಡ ದೊಡ್ಡ ಕಮರಿ ಒಂದ್ನೆ ಕೆಳಗೆ ಮಾಡಿ ಗದ್ದಿಗೆ ಸುಂಗಾರವೂ
ಪಡೆಕೊಳ್ಳೆ ಬಾಸೆ ಬಲಾಗೈಲಿ ಸ್ವಾಮಿಗೆ ಸುಂಗಾರವು
ಪಡೆಕೊಳ್ಳೆ ಬಾಸೆ ಬಲಗೈಲಿ ಮುತ್ತೈನ ಗದ್ದಿಗೆ ಸುಂಗಾರವೂ
ಒಬ್ಬಾನೆ ಒದ ಉಲಿದ್ಬಾಟೆ ಸ್ವಾಮಿಗೆ ಸುಂಗಾರವೊ
ಹೊದಾರೆ ದೊಡ್ಡ ಕೊರಡೆತ್ತಿ ಕೊಂಡಾ ಗದ್ದಿಗೆ ಸುಂಗಾರವು
ನಾಲೆಯ ವಲಾ ತೊಳಾಕೊಂಡು ಸ್ವಾಮಿಗೆ ಸುಂಗಾರವು

ನಾಲೆಯ ಹೊಲ ತೊಳಕೊಂಡು ಮುತ್ತಯ್ಯ ಗದ್ದಿಗೆ ಸುಂಗಾರವೊ

ಹೊಗುತಾರೆ ಉಲಿಬೇಟೆ ಸ್ವಾಮಿಗೆ ಸುಂಗಾರವೊ

* ಈ ಆರು ಜನಪದ ಗೀತೆಗಳನ್ನು ದಿನಾಂಕ ; ೨೧-೫-೨೦೦೫ರಂದು ಕನಕಪುರ ತಾಲ್ಲೂಕು ಸಾತನೂರು ಹೋಬಳಿಯ ಹಲಸೂರಿನಲ್ಲಿ ಧ್ವನಿಮುದ್ರಣ ಮಾಡಿಕೊಳ್ಳಲಾಗಿದೆ. ಇವರೆಲ್ಲಾ ಮಾದಿಗ ಜಾತಿಯವರಾಗಿದ್ದು ಮುತ್ತತ್ತಿರಾಯನ ಒಕ್ಕಲಿನವರಾಗಿದ್ದಾರೆ. ಇವರ ವಿವರ

೧. ವೆಂಕಟಮ್ಮ ೪೦ ವಯಸ್ಸು
೨. ಮಂಗಮ್ಮ ೩೮ ವಯಸ್ಸು
೩. ಚಿಕ್ಕತಾಯಮ್ಮ ೩೫ ವಯಸ್ಸು
೪. ಚಲುವಮ್ಮ ೩೦ ವಯಸ್ಸು
೫. ನಾಗಮ್ಮ ೩೫ ವಯಸ್ಸು

## ತಿಂಗಾಳು ಮುಳುಗಿದವೊ

ತಿಂಗಾಳು ಮುಳುಗಿದವೊ ರಂಗೋಲೆ ಬೆಳಗಿದವೊ
ಸ್ವಾಮಿ ಮುತ್ತಯ್ನ ಪೂಜೆಗೆಂದು ಬಾಳೆಬಾಗಿದವೊ ॥ಪಲ್ಲವಿ॥
ಕಡಲೆಕಾಯ್ನಂಗೆ ಕಡೆದಿದ್ದೊ ನಿನ್ನ ಪರಸೆ
ಕಡಜಾಣ ಕೇಳೋ ಉಚ್ಚಮುತ್ತು ಬಾಳೆ ಬಾಗಿದವೊ *
ಕಡು ಜಾಣಾ ಕೇಳೋ ಉಚ್ಚಮುತ್ತು ನಿನ್ನ ಪರಸೆ
ಕಡಜಾಗದ ಮೇಲೆ ವಳೆಗಂಟೆ ಬಾಳೆ ಬಾಗಿದವೊ
ಮಗ್ಗಾಲ ಹುಲ್ಲನಂಗೆ ಹಬ್ಬಿದ್ದೊ ನಿನ್ನ ಪರಸೆ
ಬುದವಂತ ಕೇಳೊ ಉಚ್ಚಮುತ್ತು ಬಾಳೆ ಬಾಗಿದವೊ
ಬುದವಂತ ಕೇಳೊ ಉಚ್ಚಮುತ್ತ ನಿನ್ನ ಪರಸೆ
ಹಬ್ಬಿದ ಕಾವೇರಿ ವಳೆಗಂಟ ಬಾಳೆ ಬಾಗಿದವೊ
ಉಕ್ಕಿತ್ತು ಮುತ್ತತ್ತಿ ತುಳುಕಿತ್ತುಕಾವೇರಿ
ಗಂಡುಮತ್ತಿಯಾ ಮರನೇರಿ ಬಾಳೆ ಬಾಗಿದವೊ
ಗಂಡು ಮತ್ತಿ ಮರನೇರಿ ಮುತ್ತಯ್ಯ ·
ಗಂಡುಲಿಯ ಮ್ಯಾಲೆ ಮ್ಯಾರದನೊ ಬಾಳೆ ಬಾಗಿದವೊ
ಮುತ್ತತ್ತಿಗೊಗುರುಗೆ ಒಂದಾದೊ ಉಲಿ ಕರಡಿ
ಅಪ್ಪಾ ಮುತ್ತಯ್ಯ ಗತಿ ಎಂದು ಬಾಳೆ ಬಾಗಿದವೊ
ಅಪ್ಪಾ ಮುತ್ತಯ್ಯ ಗತಿ ಎಂದು ಹೊಗುರಗೆ
ಕೆಡದಿದ್ದ ಉಲಿ ಕೈಲವಾದೊ ಬಾಳೆ ಬಾಗಿದವೊ

*ಪ್ರತಿ ಪದ್ಯದ ಕೊನೆಯಲ್ಲಿ ಹಿಮ್ಮೇಳದವರು ಪಲ್ಲವಿಯನ್ನು ಹಾಡುತ್ತಾರೆ.

## ಮುತ್ತಯ್ಯ ಬಂದಾರೇ

ಮುತ್ತಯ್ಯ ಬಂದಾರೇ ಬರಕೈಲಿ ಬರಲಿಲ್ಲಾ
ಮುತ್ತುರತ್ನಾವ ವೊತ್ತಿಕೊಂಡು ॥ಪಲ್ಲವಿ॥
ಸತುವಂತ ನನ್ನೊಡಯಾ ಮುತ್ತತ್ತರಾಯ
ಕಕ್ಕೆಸೊಪ್ಪೆಲ್ಲಿ ಮನೆಮಾಡಿ *
ಮನೆ ಮಾಡಿ ಮುತ್ತಯ್ಯಾ ಕಕ್ಕೆ ಸೊಪ್ಪೆಲ್ಲಿ
ಮಲೆಮಂಜರದೆಲಿ ವರಗವರೆ
ಸುತ್ತಾ ಬೆಟ್ಟಾ ಕಾಣೊ ಮುತ್ತಯ್ಯ ಇರುವುದೂ
ಎತ್ತಾ ನೋಡಿದರೂ ಉಲಿಪಾದಾ
ಉಲಿ ಕರಡೀ ಕಾಟ ಎತ್ತಾ ನೊಡಿದರೂ
ಎತ್ತಾ ನೋಡಿದರೆ ಸುರವೊನ್ನ
ಕಬನಿಂದ ಬೆಳೆದಾವೊ ಹಬ್ಬಿದಿರು ತನ್ನ
ಒಬ್ರನುಗ್ಗಕ್ಕೆ ಎಡನಿಲ್ಲ
ಎಡನಿಲ್ಲ ಮುತ್ತಯ್ಯಾ ಒಬ್ಬರನುಗ್ಗೊಕೇ
ಒಬ್ಬುನೆ ನಿಂತ ಅಡವಿಲಿ
ಗಳನಿಂದ ಬೆಳೆದಾವೊ ಕಿರಬಿದಿರು ತನ್ನ
ಒಬ್ಬಾನುಗ್ಗಾಕೆ ಎಡೆಯಿಲ್ಲ
ಎಡೆನಿಲ್ಲ ಮುತ್ತಯ್ಯಾ ಇಬ್ಬರು ನುಗ್ಗೊಕೆ
ನೀವೊಬ್ಬುನೆ ನಿಂತ ಅಡವೀಲಿ

* ಪ್ರತಿ ಪದ್ಯದ ಕೊನೆಯಲ್ಲಿ ಹಿಮ್ಮೇಳದವರು ಪಲ್ಲವಿಯನ್ನು ಹಾಡುತ್ತಾರೆ.

## ತೇರು ಸುಂಗಾರ

ತೇರು ಸುಂಗಾರ ಕಳಸಬಂಗಾರ
ಉಲಿಯೇ ಸಿಂಗಾರ, ಉಲಿಯೇ ಸಿಂಗಾರ
ಗಿರಿಯಮ್ಯಾಲೆ ಮುತ್ತಯ್ನೆ ಸಾಕಾರ ॥ಪಲ್ಲವಿ॥
ಒಡಲೆಲಾಲದಮರ ಗಿಡವೆ ಗೊಲ್ಲರದೊಡ್ಡಿ
ಉಲಿಯ ಸಿಂಗಾರ
ಬೆಡಗ್ನಲ್ಲೆ ಗೋವ ಕಾರೆಯೋನೆ ಮುತ್ತಯ್ನ ಸಾಕಾರ *
ಬೆಡಮಲೆ ಗೋವ ಕರೆದನೆ ಮುತ್ತಯ್ಯ
ಉಲಿಯೇ ಸಿಂಗಾರ ಬೆಳಗಾಗೊದ್ರಲೊಗೆ ತೀಳಿದಾ ದೊ
ಮುತ್ತಯ್ನೆ ಸಾಕಾರ

* ಪ್ರತಿ ಪದ್ಯದ ಕೊನೆಯಲ್ಲಿ ಹಿಮ್ಮೇಳದವರು ಪಲ್ಲವಿಯನ್ನು ಹಾಡುತ್ತಾರೆ.

ಅಪ್ಪಾ ಮುತ್ತಯ್ಯಾ ವೊಟ್ಟೆ ಮ್ಯಾಗಳನಾಮ
ಉಲಿಯೇ ಸುಂಗಾರ ಬಟ್ಟನೂಲೆಳೆಯ ತಾಗದಾಂಗೆ
ಮುತ್ತಯ್ನ ಸಾಕಾರ

ಬಟ್ಟನೂಲೆಳೆಯ ತೆಗದಾಂಗೆ ಮುತ್ತಯ್ಯ
ಉಲಿಯೇ ಸುಂಗಾರ ಅಪ್ಪನಗೊಪ್ಪಿಲ್ಲವೆ ಅರನಾಮ
ಮುತ್ತಯ್ನ ಸಾಕಾರ

ಅಣ್ಣಮುತ್ತಯ್ಯ ಕೆನ್ನೆಮ್ಯಾಗಳ ನಾಮ
ಉಲಿಯೇ ಸುಂಗಾರ ಅಣ್ಣನಿಗೊಪ್ಪಿಲ್ಲವೆ ಅರನಾಮ
ಮುತ್ತಯ್ನ ಸಾಕಾರ

**ಹಾಡಿರಿ ರಾಗಗೊಳ**

ಹಾಡಿರಿ ರಾಗಗೊಳ ನುಡಿಸಿರಿ ತಾಳಗೊಳ
ಹಚ್ಚಿರಿ ದೀಪಗೊಳ ಹಾಕಿರಿ ದೂಪಗೊಳ
ಹಳ್ಳದ ವೊಲೆಯ ನೆಳ್ಳಲ್ ನಿಲಿಸಿಕೊಂಡು
ಬಳ್ಳಾದಲಾಲ ಕರೆಯೊನೆ ಕರೆಯೋನೆ *
ಬಳ್ಳಾದಲಾಲ ಕರೆಯೊನೆ ಮುತ್ತಯ್ಯ
ಬೆಳ್ಳಿವಳದಾವೂ ಬಿಸಲಿಗೆ ಬಿಸಲಿಗೆ
ಬೆಟ್ಟಾದ ವೊಲೆಯ ಅಡ್ಡನಿಲಸಿಕೊಂಡು
ಬಟ್ಟಲೆಲಾಲ ಕರೆಯೊನೆ ಕರೆಯೊನೆ
ಬಟ್ಟಲೆಲಾಲ ಕರೆಯೊನೆ ಮುತ್ತಯ್ಯ
ವಟ್ಟೆವಣಗಾವೂ
ಒಮ್ಮಗನ ಬೆಟ್ಟಾಕೆ ವೊದಾರು ನಿನ್ನ ಮಕ್ಕಳು
ಮಾದಾರು ಕಡುದಾರೆ ಹಸಿದೊಣ್ಣೆ ಹಸಿದೊಣ್ಣೆ
ಮಾದರು ಕಡುದಾರೆ ಹಸಿದೊಣ್ಣೆ ನಿನ್ನಮಕ್ಕಳು
ತೊಳಚಿಯ ಮಾಲೆ ವನಮಾಲೆ ವನಮಾಲೆ
ತೊಳಚಿಯ ಮಾಲೆ ವನಮಾಲೆ ಸರವಾಗಿ
ಮೊಸರು ವಡೆಯೋಕೆ ಹದವಾಗಿ ಹದವಾಗಿ
ಕಾಯಿ ವಡೆಯೋರು ಯಾವ್ಯಾವ ಕುಲದೋರು
ಅವರಚ್ಚ ಮಾದಿಗರು ಅಲಸೂರು ಅಲಸೂರು
ಅಚ್ಚ ಮಾದಿಗರು ಅಲಸೂರು ಮುತ್ತಯ್ಯ
ಅವರೆಚ್ಚಾಳದಿಂದಾ ಬರುತಾರೆ ಬರುತಾರೆ
ಎಚ್ಚಳದಿಂದ ಬರುತಾರೆ ಮುತ್ತಯ್ಯ
ಅವರು ತೊಡೆತಟ್ಟಿ ಕ್ಯಾಕ ವಡೆದಾರು ವಡೆದಾರು
ಸೀತಾಳಾಗಾಲ ಸೆಳಗಾಲ ಮುತ್ತಯ್ಯಾ
ತೋಪೊಳ್ಗೆ ಬಂದು ನೆಲಗೊಂಡ ನೆಲಗೊಂಡ

* ಪ್ರತಿ ಪದ್ಯದ ಕೊನೆಯಲ್ಲಿ ಹಿಮ್ಮೇಳದವರು ಪಲ್ಲವಿಯನ್ನು ಹಾಡುತ್ತಾರೆ.

ಕಾವೇರಿ ಮುತ್ತಾ ಕಾಲಲ್ಲೆಸೆವಾ ಚೆಂಡ
ಕಾವೇರಿದಾಟಿ ವಳೆದಾಟ ವಳೆದಾಟ
ಕಾವೇರಿದಾಟಿ ವಳಕೆಡಸೊ ಮುತ್ತಯ್ಯ
ನಿಂಬಿವಾಲಾಡಿ ಬಲುದೊಡ್ಡ ಬಲುದೊಡ್ಡ
ಕರಡಿ ಕಾಡದಾಲ್ ಉಲಿಯ ಹೊರಾಟ
ಮಂಡಾ ಮುಸವಾನ ಕುಣದಾಟ ಬಡದಾಟ
ಮಂಡಾ ಮುಸವಾನ ಕುಣದಾಟ ಮೆರದಾಟ
ಮಂಡಗಾರ ಮುತ್ತಯ್ನ ಗುಡಿಮುಂದೆ ಗುಡಿಮುಂದೆ
ಮಂಡುಗಾರ ಮುತ್ತಯ್ನ ಗುಡಿಯ ಬಾಕಲ ಮುಂದೆ
ಊದಿದರು ವಾಲಗವಾ ಒಡುತಾವೆ ಒಡುತಾವೆ
ಎಲ್ಲಿ ನೋಡಿದರೂ ನೆಲ್ಲಿಲ್ನಿರಿಲ್ಲಾ
ಎಲ್ಲಿ ತೇಯ್ದೆಲೊ ಎಳೆನಾಮ ಎಳೆನಾಮ
ಎಲ್ಲಿ ತೇಯ್ದೆಯೊ ಎಳನಾಮ ಮುತ್ತಯ್ಯ
ಎಳನೀರಲಿ ತೇದೂ ಧರಸಾವ್ರೆ ಧರಸಾವ್ರೆ
ವಳಸಾಲ ಮುತ್ತಯ್ಯಾ ನೀ ವಳಗೇನು ಮಾಡೆಯೋ
ಈ ಬಡಮಕ್ಕಳು ಬಂದೊ ಬಕಲೆಲಿ ಬಾಕಲೆಲಿ
ಬಡಮಕ್ಕಳು ಬಂದೊ ಬಾಕಲಲಿ ನಿಂತವ್ರೆ
ನಿನ್ನಮಾಲೆ ಪರಸಾದ ದಯಮಾಡೊ ದಯಮಾಡೊ
ಮಾಲೆ ಕೇಳೊಕೇ ನೀನ್ಯಾರ ಮಗಳಮ್ಮ
ನಾನಾಮುತ್ತಯ್ನ ಸಿಸುಮಗ್ಳು ಸಿಸು ಮಗಳು
ನಾನು ಮುತ್ತಯ್ನ ಸಿಸು ಮಗಳು ಬಂದಿವ್ನಿ
ನೀಮಾಲೆ ಪರಸಾದ ದಯಮಾಡೊ ದಯಮಾಡೊ

## ಎಪ್ಪತ್ತೇಳು ಮಲೆಯ

ಎಪ್ಪತ್ತೇಳು ಮಲೆಯ ಸೊಬಗಿನ ಸಿರಿಯಾ
ತಾವರೆ ಕೊಳದಂತೆ ಮುತ್ತಯ್ಯ ನಿನಗೆ
ಮೆರೆವ ಕೈಲಾಸವಂತೆ ಸ್ವಾಮಿ ॥ಮೆರೆವ ಕೈಲಾಸವಂತೆ॥ ಪಲ್ಲವಿ॥
ಒಕುಳಕಿ ಕಜ್ಜಾಯ ಬೆಳ್ಳಿ ಬಾಯಲ ಬೀಗ
ಹರಿವೊ ವಳೆಯಲ್ಲಿ ಬರಲಾರೆ
ಮೆರೆವ ಕೈಲಾಸವಂತೆ ಸ್ವಾಮಿ *, **

* ಪ್ರತಿ ಪದ್ಯದ ಅಂತ್ಯದಲ್ಲಿ ಹಿಮ್ಮೇಳದವರು ಪಲ್ಲವಿಯನ್ನು ಹಾಡುತ್ತಾರೆ.
** ಪ್ರತಿ ಪದ್ಯದ ೩ನೇ ಸಾಲನ್ನು ೪ನೇ ಸಾಲಾಗಿ ಪುನಾರಾವರ್ತಿಸಿ ಮೆರೆವ ಕೈಲಾಸದಂತೆ ಎಂದು ಹಾಡುತ್ತಾರೆ.

ಉಕ್ಕೊ ವಳೆಯಲಿ ಬರಲಾರೆ ಮುತ್ತಯ್ಯ
ಒಪ್ಪಿಸಿಕೊಳ್ಳೊ ಅರಕೆಯ
ಮೆರೆವ ಕೈಲಾಸವಂತೆ ಸ್ವಾಮಿ

ಅರಕೆ ಒಪ್ಪಾಕೆ ಚಿಕ್ಕೊನು ನಾನಲ್ಲ ಸುತಿ ಬಾ ಮಗಳೆ
ಪುತ್ರನಾ ತನವ ಕೊಡುವೆನು
ಮೆರೆವ ಕೈಲಾಸವಂತೆ ಸ್ವಾಮಿ

ಹಾಲರಬಿಕೊಳ್ಳೊ ನೀ ಭಾಗ್ಯವ ಕೊಡು
ಬಾಲಾನಕೊಡು ಮುತ್ತಯ್ಯಸ್ವಾಮಿ
ಮೆರೆವ ಕೈಲಾಸವಂತೆ

ಬಾಲನಕೊಡೊ ಮನೆಸ್ವಾಮಿ ಮುತ್ತಯ್ಯ
ಬಟ್ಟಾಲಾರಜವ ವಡೆವೆನು
ಮೆರೆವ ಕೈಲಾಸವಂತೆ ಸ್ವಾಮಿ

ಆಚೆ ಕರೆಯಲ್ಲಿ ಎದ್ದು ನಿಂತು ಮುತ್ತಯ್ಯಾ
ಸಿತಾಳಗಾಲ ಸೆಳಗಾಲ
ಮೆರೆವ ಕೈಲಾಸವಂತೆ ಸ್ವಾಮಿ

ಸೀತಾಳಗಾಲ ಸೆಳಗಾಲ ಮುತ್ತಯ್ಯಾ
ಉಕ್ಕೊಳೆಕಂಡು ನೆಲಾಗೊಂಡ
ಮೆರೆವ ಕೈಲಾಸವಂತೆ ಸ್ವಾಮಿ

ಎಲ್ಲಿ ನೋಡಿದರೂ ನೆಲ್ಲಿಲ್ನಿರೆಯಿಲ್ಲ
ಎಲ್ಲಿ ತೇದಯೊ ಎಳೇನಾಮ
ಮೆರೆವ ಕೈಲಾಸವಂತೆ ಸ್ವಾಮಿ

ಎಲ್ಲಿ ತೇದೆಯೋ ಎಳೆನಾಮ ಮುತ್ತಯ್ಯ
ಎಳನೀರಲಿತೇದೊ ಕರಪೂರ
ಮೆರೆವ ಕೈಲಾಸವಂತೆ

ಮುತ್ತತ್ತಿರಾಯ ಸತುವಂತ ನನ್ನೊಡೆಯ
ಕಕ್ಕೆಸೊಪ್ಪಲ್ಲಿ ಮನೆ ಮಾಡಿ
ಮೆರೆವ ಕೈಲಾಸವಂತೆ ಸ್ವಾಮಿ

ಕಕ್ಕೆ ಸೊಪ್ಪಲ್ಲಿ ಮನೆ ಮಾಡಿ ಮುತ್ತಯ್ಯ
ಮಲೆ ಮಂಜರದಲ್ಲಿ ವರಗವರೆ
ಮೆರೆವ ಕೈಲಾಸವಂತೆ ಸ್ವಾಮಿ

## ಆಲರಬಿ ಬಂದೊ

ಆಲರಬಿ ಬಂದೊ ನೂರೊಂದ್
ಆಲರಬಿ ಬಂದೊ ಆಲರಬಿ ಬಂದೊ
ಹೂವಿನದಂಡೆ ವಾಲಾಡಿಬಂದೋ ।ಪಲ್ಲವಿ।
ಮುತ್ತತ್ತಿ ಚಂದಾ ಮೂಡುಬಾಕಲು ಚಂದ
ಉಕ್ಕುಕ್ಕಿ ಬರೂ ವಳೆ ಚಂದ ಆಲರಬಿ ಬಂದೋ *
ಉಕ್ಕುಕ್ಕಿ ಬರುವ ವಳೆ ಚಂದ ಮುತ್ತಯ್ಯ
ವಪ್ಪತ್ನೆ ಪೂಜೆ ಬಲು ಚಂದ ಆಲರಬಿ ಬಂದೋ
ಪೂಜೆಗೊತ್ತಾಯ್ತೂ ಪೂಜಾರೆಲ್ಲಿಗವೂದಾ
ಚುಚುಮಲ್ಲಿಗೆ ವನಕೋದ ಆಲರಬಿ ಬಂದೋ
ಚೂಚುಮಲ್ಲಿಗೇ ವನಕೋದ ಮುತ್ತಯ್ಯಾ
ಅವನುಗ್ಗೊಗ ಕರವ ಮಾರತಾನೆ ಆಲರಬಿ ಬಂದೊ
ಅವುಸುತ್ತೇಳೆ ಆವೀಗೆ ಮಟ್ಟೇಳೆ
ನಾರಿರೆಣ್ಣುಗೊಳುನೆರಳೆಂದು ಆಲರಬಿ ಬಂದೊ
ತುಪ್ಪಕಲಸೆಳೆ ಚಿಮ್ಮಳಗೆ ಮೇಗೆಳೇ
ನಾರಿರೆಣ್ಣುಗೊಳುನೆರಳೆಂದು ಆಲರಬಿ ಬಂದೊ
ನಾರಿರೆಣ್ಣುಗೊಳು ನೆರಳಬೇಡವೆಂದು
ಅರಣ್ಯದಲ್ಲಿ ನೆಲೆಗೊಂಡ ಆಲರಬಿ ಬಂದೊ
ಕಾಡಲ್ಲಿರುವೊನ ನೋಡಿ ನೋಡುವ ಬನ್ನಿ
ಮೊಡದ ಬಿಸಲಿಗೆ ಬೇವರೊನ ಆಲರಬಿ ಬಂದೊ
ಮೊಡದ ಬಿಸಲಿಗೆ ಬೆವರೊಮುತ್ತಯ್ನ
ರೂಡಿ ಒಬ್ಬರಿಗೇ ತೀಳಿಯಾದು ಆಲರಬಿ ಬಂದೊ
ಕಕ್ಕೆ ಸೊಪ್ಪಿಗೊಲದ ಕವಲು ನಾಮಕೊಲದ
ಕಾಡು ಸೋಲಿಗರ ಮಗಳಿಗೆ ಆಲರಬಿ ಬಂದೊ
ಕಾಡು ಸೋಲಿಗರ ಮಗಳಿಗೆ ಮುತ್ತಯ್ಯಾ
ಕವಲು ನಾಮಕೆ ವಲದವನೆ ಆಲರಬಿ ಬಂದೊ

## ದೇವರೆ ಮಾತಾಡೊ *

ಕಾಯಿ ವೊಡೆಯೊರು ಯಾವ್ಯಾವ ಕುಲದೂವ್ರು
ಅಚ್ಚಮಾದಗರು ಅಲಸೂರು ದೇವರೆ ಮಾತಾಡೊ ಸ್ವಾಮಿ
ಅಚ್ಚಮಾದಗರು ಅಲಸೂರು ದೊರೆಕಾಣೊ
ಅವರೆಚ್ಚಾಳದಿಂದ ಮೆರೆದಾವ್ರು ದೇವರೆ ಮಾತಾಡೊ
ನಾಮತೇಯೋನ್ನ ಸ್ವಾಮಿ ನಾ ಕಂಡೆ ಹೊಳೆಯಲ್ಲಿ
ನಾನಾಮವ ತೇದೆ ಮೂರಾಗೊಲ್ಲ ದೇವರೆ ಮಾತಾಡೊ
ದೇವರೆ ಮಾತಾಡೊ

ಮುತ್ತತ್ತಿ ಚಂದಾ ಸ್ವಾಮಿ ಮುಡಲ ಬಾಕಲ ಚಂದಾ
ಉಕ್ಕುಕ್ಕಿ ಬರೂವ ವಳೆ ಚಂದ ದೇವರೆ ಮಾತಾಡೊ
ಉಕ್ಕಕ್ಕಿ ಬರುವ ಸ್ವಾಮಿ ವಳೆ ಚಂದ ಮುತ್ತಯ್ಯಾ
ನಿನ್ನೊಪ್ಪತ್ನ ಪೂಜೆ ಬಲುಚಂದ ದೇವರೆ ಮಾತಾಡೊ
ಉಕ್ಕೊವಳೆಯಲ್ಲಿ ಸ್ವಾಮಿ ಉರಿಯೊ ಪಂಜಿನಸ್ಯಾವೆ
ಅಚ್ಚಿನಬೆಲ್ಲ ರಸಬಾಳೆ ದೇವರೆ ಮಾತಾಡೊ
ಅಚ್ಚಿನಬೆಲ್ಲ ರಸಬಾಳೆ ಹಣ್ಣಿಗೆ ನಿನ್ನ ಭಕ್ತರು
ಬಾಯಾರಿ ಬರುತಾರೆ ದೇವರೆ ಮಾತಾಡೊ
ತಟ್ಟೆ ಬೆಳಗಿವ್ನಿ ಸ್ವಾಮಿ ಕಿತ್ತಲೆ ಹಣರಡಿವ್ನಿ
ತಿಟ್ಪತ್ತಿ ಬರುವ ಪರಸೆಗೆ ದೇವರೆ ಮಾತಾಡೊ

* ಈ ೮ ಜನಪದ ಗೀತೆಗಳನ್ನು ದಿನಾಂಕ : ೨೪-೫-೨೦೦೫ರಂದು ಕನಕಪುರ ತಾಲ್ಲೂಕಿನ ಹಲಸೂರಿನಲ್ಲಿ ಧ್ವನಿಮುದ್ರಿಸಿ ಕೊಳ್ಳಲಾಗಿದೆ. ಮಾದಿಗ ಜನಾಂಗದ ಮಹಿಳೆಯರಾದ

೧. ಮಂಗಮ್ಮ ವಯಸ್ಸು ೩೮
೨. ನಾಗಮ್ಮ ವಯಸ್ಸು ೩೫
೩. ಚಿಕ್ಕತಾಯಮ್ಮ ವಯಸ್ಸು ೩೫
೪. ಚೆಲುವಮ್ಮ ವಯಸ್ಸು ೩೦

ಇವರು ಹಾಡಿದ್ದಾರೆ.

## ಸ್ವಾಮಿ ಮುತ್ತಪ್ಪ ನಿಮಗೆ

ಸ್ವಾಮಿ ಮುತ್ತಪ್ಪ ನಿಮಗೆ ಚಿನ್ನಾದ ದೀಪಾಲೆ
ನನ್ನ ಗಂಧ ಕರ್ಪೂರ ಘಮಘಮ
ಮುತ್ತಪ್ನ ಬಳಿ ಒಳಗೆ
ಸ್ವಾಮಿ ಮುತ್ತಪ್ಪ ನಿಮಗೆ ತೊಳಚಿಯ ಹೂಮಾಲೆ
ನನ್ನ ಗಂಧ ಕರ್ಪೂರ ಘಮಘಮ
ಮುತ್ತಪ್ನ ಬಳಿ ಒಳಗೆ
ಕಪ್ಪು ಅನುಬೋದೆ ನನ್ನ ಕಸ್ತೂರಿ ಮೈನೋರ
ಮುಗುಮೂಗಾಳ್ ಮಾಡುವ ಮುತ್ತಪ್ನನ
ಕಪ್ಪು ಅನುಭೋದೆ ಧರೆಯಲ್ಲಿ
ಅರಗು ಹೊಲದಲ್ಲಿ ಮರುಗು ಕ್ಯೊಯ್ಕೊರೆ ಮರಗು ಗಮ್ಲುಕೆ
ಬೆವರೂರೆ ಮುತ್ತಪ್ಪ ನಿನ್ನ
ಪಡದೆಮ್ಮ ನಾರೋ ಧರೆಯಲಿ
ಹುತ್ತು ಹೊಲದಲ್ಲಿ ಪತ್ರಿಯ ಎತ್ತೊನೊ ಪತ್ರಗಮ್ಲುಕೆ
ಬೆವರೂನೆ ಮುತ್ತಪ್ಪ ನಿನ್ನ
ಎತ್ತಮ್ಮ ನಾರೋ ಧರೆಯಲಿ

ಆನಂದದಡವಿಲಿ ನಾನಿನ್ನ

ಕೂಗಿದೆ ಓ ಅನ್ನಬಾರದೆ
ನಾನಿನ್ನ ಕೂಗಿ ದಣಿದಿದ್ದಿ
ದಾಸವಾಳದೂವ ಕಾಸಿಗೆ ಹದಿನೈದು ದಾಸಯ್ಯಂಗೈದು ನಿನಗೈದು
ಮುತ್ತಪ್ಪ ನನ್ನ ಯಾಸಗಾರ
ಮುತ್ತಯ್ನ ಜಡೆಗೈದು
ದಾಸಯ್ಯಟ್ಟಿಲಿ ದೇಸವಾರದ ತೊಳಚಿ ದಯಯೆ ಮಗಳು
ಮುಡಿಬಾರೊ ತೊಳಚಮ್ಮ
ದೇಶವಾರದ ತೊಳಚಿಯಾ
ಬೆಟ್ಟದ ಚೆಲುವಯ್ನಗೆ ಬೆನ್ನಿಂದೆ
ವರನಂದಿ ಹಸಿರುನಿಲಾದ ಬಳೆಯೋಳೆ
ಹೆಸರೇಳು ಪುರುಷನಿ ಹೆಸರೇನೆಳಾಲಿ ದಸವಂತ ಚಲುವಯ
ತೇರನ ಮೇಲ್ ಹಾಡು
ಲೋಲ ಚಲುವಯ್ನಗೆ
ಹೆಸರೇಳು ವರನಂದಿ ಬೆವರೇಳು
ಕಾಯಿ ವಡಯೋರು ಯಾವ್ ಯಾವ್ ಕುಲದೋರು ಅಚ್ಚ ಮಾದಿಗರೂ
ಬಾಳೆವನಗ ಮುತ್ತಪ್ಪ ಅವರು
ಕಾಯೊಡೆದು ಕೈಯ್ಯ ಮುಗಿದಾರು
ಉತ್ತ ಹುಲಿ ಮಾಡಿ ಬೆಟ್ಟ
ಬಿದರಮಾಡಿ ಬಿದಿರೆಲೆ ಮೇಲೆ ಚದುರಂಗ ಆಡೋನೆ
ಚಾಚ್‌ಗಾರ ಮುತ್ತಪ್ಪ ದೈವಾಗು
ಆಲರವಿ ಬಂದೊ ನೂರೊಂದ್ ಆಲರವಿ ಬಂದೊ
ಆಲರವಿ ಮ್ಯಾಲೆ ಹೂವಿನ ದಂಡೆ ವಾಲಾಡಿ ಬಂದೊ
ನಾಮ ಇಕ್ಕಂಡು ಯಾರಂತನಾ ಅರಿಯಲಿ
ಆಲರವಿ ಬಂದೊ ನೂರೊಂದ್ ಆಲರವಿ ಬಂದೊ
ಯಾರಂತ ನಾನು ಅರಿಯಲಿ ತೋರಯ್ಯ
ನಿನ್ನ ನಿಜರೂಪ
ಮುತ್ತತ್ತಿ ಚಂದ ಮೂಡು ಬಾಕಲು ಚಂದ
ಉಕ್ಕಕ್ಕಿ ಬರುವ ವಳೆಚಂದ
ಆಲರವಿ ಬಂದೊ
ಉಕ್ಕುಕ್ಕಿ ಬರುವ ವಳೆ ಚಂದ ಮುತ್ತಪ್ಪ ನಿನ್ನ
ಒಪತ್ನ ಪೂಜೆ ಬಲು ಚಂದ
ಆಲರವಿ ಬಂದೊ
ತಟ್ಟೆ ತರಿಸಿರೋ ಪಟ್ಟೆ ಬಿಗಿಸಿರೋ
ವಾನದ ಮೇಲೆ ವಾಲಾಡೊ ಮುತ್ತಪ್ಪ
ನಿನ್ನ ವಾನ ಬಾಗಿರೋ ಕಮರಿಗೆ
ವಾನಾದ ಮೇಲೆ ವಾಲೊಡೋ

ಮುತ್ತಪ್ನ ವಾನಾ
ಬಾಗಿರೋ ಕಮರಿಗೆ
ಕಲಕಟ್ಟು ಮುತ್ತತ್ತಿ ಮೆಟ್ಟರೆ ಪಾದ್ದಾರೆ ನನ್ನ
ಕೆಂಪಿನ ಮುತ್ತಯ್ಯ
ಕೆರೆಯಲಿ ಬರುವಾಗ
ಕೊಂತಮ್ಮ ಜಪವ ಮಾಡ್ತಾಳೆ
ಅಣ್ಣ ಮಾತಾಡೊ
ಅಣ್ಣ ಮಾತಾಡೊ ಅಣ್ಣಯ್ಯ ಮಾತಾಡೊ
ಕೆಂಪಿನೂವಿನ ಸಂಪತ್ತುಗಾರ
ಅಣ್ಣಯ್ಯಾ ಮಾತಾಡೊ
ಎದ್ದು ಬನ್ನಿ ಮುತ್ತಪ್ಪ
ನಿಮಗೆಷ್ಟೊತ್ತು ಸುಖನಿದ್ರೆ
ಮಜ್ಜನ ಬಂದವೆ ಹುಲಿಹಿಂಡು ಮುತ್ತಪ್ಪ
ದರಿಸೇಳಿ ಮುತ್ತಪ್ಪ ನಿನ್ನ ಗೆಜ್ಜೆ ಬಂದವೆ
ಮರೆಯೇಳಿ ಮಜ್ಜನ ಬಂದವೆ
ಕನಸ್ನೆಲ್ಲಿ ಕಂಡಿ ನನ್ನ ಮನಸಿಗೆ ಬೇಕಾದೋರ ಮೆಣಸಿನಾ
ಕಾಯ್ನಂತೆ ಮನಸಾ ಮುತ್ತಪ್ಪ
ನಾ ಕನಸಲ್ಲಿ ಕೈಯ್ಯ ಮುಗಿದೇನು
ತಾಳು ಬೆಟ್ಟದಲ್ಲಿ
ತಾವರೆ ಮೊಗ್ಗುಟ್ಟಿ ತಾವರೆ ಮೊಗ್ಗು ತಾಲೆಗೆದರಿ
ಸ್ವಾಮಿ ಮುತ್ತಪ್ಪ
ತಾವರೆ ಮೊಗ್ಗು ತಲೆಗದರಿ ಮುತ್ತಪ್ಪ
ನಾನಿನಗೆದರಿ ಕೈಯ್ಯ ಮುಗಿದೇನು
ಸ್ವಾಮಿ ಮುತ್ತಪ್ಪ ನಿಮಗೆ
ಸ್ವಾಮಿ ಮುತ್ತಪ್ಪ ನಿಮಗೆ ತೊಳಚಿಯಾ ಹೂಮಾಲೆ
ನನ್ನ ಗಂಧ ಕರ್ಪೂರ ಘಮಘಮ
ಮುತ್ತಪ್ನ ಬಳಿ ಒಳಗೆ
ಚಿನ್ನದಂಗಡಿಲಿ ಏನೇನು ಯಾಪಾರ
ಏನು ಬೇಕಪ್ಪ ನಿಮಗೆ ಯಾಲಕ್ಕಿ ಕಂಬ
ಯಳವಾರ ಮುತ್ತಪ್ಪ ಮುಗ್ಗೆ ಬೇಕಪ್ಪ ನಿಮಗೆ
ಚಿನ್ನಾದ ತೇರನೋಡು ಮುತ್ತಪ್ನ ಬಣ್ಣದ
ಉಲಿಯ ನೋಡೂ ಚಿನ್ನಾನ ಸರ್ಪಾದ
ನೆರಳಲ್ಲಿ ಮಲಗಿರುವ ಮುದ್ದು ಮುತ್ತಪ್ನ ನೋಡೋ

### ಬಿಡಿಪದ್ಯಗಳು *

ಮುತ್ತತ್ತುರಾಯನಿಗೆ ಮುಗುಲು ಭರದ ಕುಂಟೆ
ಅರಗು ಎರಡೆತ್ತು ರವರದ್ನ ಕಟ್ಕೊಂಡು
ಜಾಣತಗದಾನೋ ಜವನಾವ
ದೂಪದೇರು ಬಂದು ತೊಪೆಲಿ ನಿಂದವರೆ
ನಮ್ಮ ದೂಪದಲೋಗಿ ನನ್ನ ಮುತ್ತಪ್ಪ ಕಂಡರೆ
ದೂಪದ ಗುತ್ತಿಗೆ ಹಿಡಿದವರೆ
ನಾಮದೇವರು ಬಂದು ತೋಪಲಿ ನಿಂತವರೆ
ನಾಮದಲಿ ಓಗಿ ಮುತ್ತಪ್ಪ ಕಂಡರೆ
ನಾಮದ ಗುತ್ತಿಗೆ ಹಿಡಿದವರೆ
ಗಂಟೆ ಸದ್ದ ಕೇಳಿ ಎಂಡುಗೌದ ನಾಓದೆ
ನಿ ಮಂಟಪದ ಹಿಂದೆ ಮರೆಯಾದಿ ಮುತ್ತಪ್ಪ
ನಿನಗಂಟೆ ಲಾಲೇಸಿ ನುಡಿದಾವೊ
ಕಾಳೆ ಸದ್ದ ಕೇಳಿ ಎಳುಗೌದಿ ನಾ ಓದಿ
ನಿನ್ನ ಮಾಳಿಗೆ ಹಿಂದೆ ಮುತ್ತಪ್ಪ
ಮಾಳಿಗೆ ಹಿಂದೆ
ಮರೆಯಾದಿ ಮುತ್ತಪ್ಪ ನಿನ್ನ ಕಾಳ ಲಾಲೇಸಿ
ನುಡಿದಾವೊ
ನಾಮ ತೆಯ್ಕೊನಾ ನಾ ಕಂಡೆ ವಳೆಯಲ್ಲಿ
ನಾಮದಲಜ್ಜೆ ಮುಳುಗಾನ
ನಾ ಕಂಡೆ ಮುತ್ತಪ್ಪನ ಹೊಳೆಯಲ್ಲಿ
ನಾಮ ಇಕ್ಕಂಡು ನಡು ಮನೆಲಿ
ಕೂತಿರ್ವನೆ ಯಾರಂತ ನಾನು ಅರಿಯಲಿ
ಸ್ವಾಮಿ ಮುತ್ತಪ್ಪ ತೋರಯ್ಯ ನಿನ್ನ ನಿಜರೂಪ
ಯಾರಂತ ನಾನು
ಅರಿಯಲಿ ಮುತ್ತಪ್ಪ
ತೋರಯ್ಯ ನಿನ್ನ ನಿಜರೂಪ

ಈ ಜನಪದ ಗೀತೆಗಳನ್ನು ಹಾಡಿದವರು ಮಳವಳ್ಳಿ ಜಿಲ್ಲೆಯ ದಳವಾಯಿ ಕೋಡಿಹಳ್ಳಿ ಗ್ರಾಮದ ಮಾದಮ್ಮ ಎಂಬ ಎ.ಕೆ.ಜನಾಂಗದವರು ವಯಸ್ಸು ೭೦ ವರ್ಷ. ಈ ಗೀತೆಗಳನ್ನು ದಿನಾಂಕ:೧೯-೬-೨೦೦೪. ಕಡೆಗುಡ್ಡೆ ಮುತ್ತಪ್ಪನ ದೇವಾಲಯ ಹೊನ್ನಗಳ್ಳಿ ಬಳಿ ಕನಕಪುರ ತಾಲ್ಲೂಕಿನಲ್ಲಿ ಧ್ವನಿಮುದ್ರಿಸಿಕೊಳ್ಳಲಾಯಿತು.

## ಹಾಲು ದಾನವೆ ಮಾಡಿದ

ಹಾಲು ದಾನವೆ ಮಾಡಿದ ಮುತ್ತಯ್ಯಾ
ವಾನಗರುಡವನೇರಿದ ॥ಪಲ್ಲವಿ॥
ಮುದ್ದು ಮುತ್ತಯ್ಯಾ ಇದ್ದಾನೆ ಗುಡಿಯಲ್ಲಿ
ಜಗ್ಗಿಸಿ ನೋಡಿ ಗುಡಿಯಲ್ಲಾ •
ಜಗ್ಗಿಸಿ ನೋಡಿ ಗುಡಿಯ ಜಾಲದ ಹರವ, ಮುದ್ದು
ಮನೆ ಏರವನೆ ಮನೇಸ್ವಾಮಿ
ಮುತ್ತತ್ತುಗೋಗುರಿಗೆ ಹೊತ್ತಲ್ಲಿ ಹುಟ್ಟಿತು
ಸ್ವಾಮಿನ ಕೆರೆಯ ಬಯಲೆಲ್ಲಿ
ಮುತ್ತತ್ತುಗೋಗುರಿಗೆ ಹೊತ್ತಲ್ಲಿ ಹುಟ್ಟಿತು
ಸ್ವಾಮಿನ ಕೆರೆಯ ಬಯಲೆಲ್ಲಿ
ಸ್ವಾಮಿನ ಕೆರೆಯ ಬಯಲಲ್ಲಿ ಮೂಡಿದ ಪರುಸೆ
ಕಾವೇರೊಳೆಗಂಟ ಎಡವಿಲ್ಲಾ
ಕಾವೇರೊಳೆಗಂಟಾ ಎಡವಿಲ್ಲಾ ಮುತ್ತಯ್ಯಾ ನಿನ್ಗ
ಕಾಯಿ ವಡೆಯೊರು ಗಡವಿಲ್ಲ
ಅರೆಯಲ್ನಡೆದಾರೆ ಅರಯಲ್ಲಿಗಿದಾರೆ
ಅವರ್ ಅರಲೊ ಮಲ್ಲಿಗೆಯ ಮುಡುದಾರೆ
ಅರೆಯ ಒಡೆದಾರೆ ಅರೆಯಲ್ನಿಂತಾವ್ರೆ
ಅರಳುಮಲ್ಲಿಗೆಯ ಮೂಡಿದಾರೆ
ಅರಳು ಮಲ್ಲಿಗೆಯ ಮುಡುದಾರೆ ಮುತ್ತಯ್ಯಾ
ಅವರರೆಯಲ್ಲಿ ಬಂದು ನೆಲಾಸಾರೆ
ಗುಂಡಲ್ನಡೆದಾರೆ ಗುಂಡನ್ನೆ ಸಿಗುದಾರೆ ಅವ್ರು
ದುಂಡುಮಲ್ಲಿಗೆಯ ಮುಡುದಾರೆ
ದುಂಡುಮಲ್ಲಿಗೆಯ ಮುಡುದಾರೆ ಮುತ್ತಯ್ಯಾ
ಅವರ್ಗುಂಡಲ್ಲೆ ಬಂದು ನೆಲಸಾರೆ
ಜ್ಯೊತಿ ಎತ್ತಿರಿರಿತಿಯಾದ ಮುತ್ತಯ್ಯನುಗೆ ಅವ್ರು
ಸೋತಿದ್ದ ಮಾತಗೆಲುತಾರೊ
ಸೋತಿದ್ದ ಮಾತಾ ಗೆಲಸೊ ಮುತ್ತಯ್ಯನುಗೆ ನನ್ನ
ಜೊತೆ ಎತ್ತಿ ಕೈಯ್ಯಾ ಮುಗಿದೆನೊ
ಕನಸಿಗ್ಬಂದಿದ್ದಾ ನನ್ನ ಮನಸಿಗ್ಬೇಕಾದೊಡೆಯಾ
ನಿನ್ನ ಕನಸಿಗ್ಬಂದಿದ್ದಾ ಮನೇಸ್ವಾಮಿ
ಕನಸಿಗೆ ಬಂದಿದ್ದ ಮನೆಸ್ವಾಮಿ ಮುತ್ತಯ್ಯಾ
ನಾನಿವನಿ ಮಗಳೆ ಬಯವಿಲ್ಲಾ
ಪಂಜರ ಮಗಳಾದೆ ನನ್ನಳು ಕೊರ ಸೊಸೆಯಾದೆ

• ಪ್ರತಿ ಪದ್ಯದ ಕೊನೆಯಲ್ಲಿ ಹಿಮ್ಮೇಳದವರು ಪಲ್ಲವಿಯನ್ನು ಹಾಡುತ್ತಾರೆ.

ನಿನ್ನ ಪಾದ ಬೇಡೊಕೆ ಸಿಸುವಾದೆ
ನಿನ್ನ ಪಾದ ಬೇಡೊಕೆ ಶಿಶುವಾದೆ ಮುತ್ತಯ್ಯ
ನಾನಿನ್ನಗಂಜಿ ನೀರ ಮುಗಿದೇನು
ಆಗದ ನೆರೆಯಲ್ಲಿ ನಾನ್ಯಾಗಿರಲೋ ಮುತ್ತಯ್ಯ
ಹಾಗಾಲಕಾಯನಂತ ಇಸದೋರು
ಹಾಗಲಕಾಯನಂತ ಇಸದೊರು ನೆರೆಯಲ್ಲಿ
ನೀನ್ಯಾಗೆ ನನಪಂತ ಗೆಲಸಿಯೊ
ಚಿಂತೆ ಬುಡುಮಗಳೆ ಸಂತಸದಲಿರು ಮಗಳೆ
ಎಂತವರ್ಗುಂಟು ಬಡಾತಾನ
ಬನ್ನಿ ಮನೆಸ್ವಾಮಿ ಕೊಳ್ಳಿ ಪಾದಕೆ ನೀರಾ
ಮಂದಲಗೆಯಾಗೆ ಮಡಿಯಾದ
ಮಂದಲಗೆಯಾಗೆ ಮಡಿಯಾದೆ ಮುತ್ತಯ್ಯಾ
ನೀಕೊಟ್ಟ ಶಿಶುವು ಕೊಡೆಮ್ಯಾಲೆ
ನೀವು ಕೊಟ್ಟ ಸಿಸುವ ಕೊಡೆಮ್ಯಾಲೆ ಹಾಕೊಂಡು
ನಿಮ್ಮ ಪಾದಕೆ ಪನ್ನೀರ ಎರದೇನು
ಹಗಲ ಕಂಡಿದುರೆ ನಿನ್ನ ಆರತಿಯ ಮಾಡೊನೆ
ಬಾ ಕುಲಗ್ ರಂಗೋಲೆ ಬುಡಬಲ್ಲೆ
ಬಾಕುಲಗ್ ರಂಗೋಲೆಯ ಬುಡುವನೆ ಮುತ್ತಯ್ಯಾ
ನೀವ್ ಬಂದದ್ನನಗೆ ಅರವಿಲ್ಲ
ಎಂಜೆಂಜಲು ಅಂತ ಅಂಜಬೇಡ ಮುತ್ತಯ್ಯ
ಎಂಜೆಂಜಲಗೆಲ್ಲ ಗಂಜೆಳಾವ
ಎಂಜೆಂಜಲುಗೆಲ್ಲ ಗಂಜಲವ ಇಟ್ಟವನಿ ನೀ
ವಂಜದೆ ನಮ್ಮನೆಗೆ ದಯಮಾಡೊ
ಕಲ್ಲುನಸದು ಕೇಳಿ ನಿಲುಸಾರೆ ಉಲಿಯನ್ನ
ಮುತ್ತಯ್ಯಾ ಅವರ್ ನಿಲಸಾರೆ
ಒಬೊಬ್ಬೆ ತಿಬ್ಬ ಒಬ್ಬೆ ಓಣಿಯ ತಿಬ್ಬ
ಇಬ್ಬಣಿ ಹುಲ್ಲಾ ತುಳಕೊಂಡು
ಇಬ್ಬಣಿ ಹುಲ್ಲಾ ತುಳಕೊಂಡು ಮುತ್ತಯ್ಯಾ
ಅವರು ಬರುತಾರೆ ಹುಲಿಬ್ಯಾಟೆ
ಕಂಚಿನ ಸಬುತ ಕೇಳು ಶನಿವಾರದಯ್ಯಾ
ಜಾಗಟೆ ನಾದ ಕೇಳೊ
ಕಟ್ಟುಕಲ್ಲು ಮುತ್ತತ್ತಿ ಮೆಟ್ಟುಕಲ್ಲು ಪಾದ್ದಾರೆ ನನ್ನ
ನನ್ನ ಪಟ್ಟಣ ಮುತ್ತಯ್ಯಾ ಒಳಮೆಟ್ಟಿ
ನಿನ್ನ ಪಟ್ಟಣ ಮುತ್ತಯ್ಯ ಹೊಳೆಮೆಟ್ಟಿ ಬರುವಾಗ
ಕೆಟ್ಟನೆಂದಾವೊ ವರಗಾಳಿ
ಮುದ್ದು ಮುತ್ತಯ್ಯಾ ಮುಗ್ಗಿನ ಶ್ಯಾಟಕೊಗಿ

ವಜ್ರ ಮಾಣಿಕವ ಕೊಯ್ಯಾದವ್ನೆ
ವಜ್ರ ಮಾಣಿಕದ ಕೈಗೊಂಬೆ ತಕ್ಕೊಂಡು ಹೊದನು ಮುತ್ತಯ್ಯ
ಮುಗ್ಗಿನ ತೋಟಕೆ
ಪೂಜೆಗೊತ್ತಾಯ್ತು ಪೂಜಾರೆಲ್ಲಿಗೋದ ಆ
ಚೂಚುಮಲ್ಲಿಗೆ ವನಕೋದ
ಚೂಚುಮಲ್ಲಿಗೆಯಾ ವನಕೊಂದ ಮುತ್ತಯ್ಯಾ
ನನ್ನ ಪೂಜೆಗೂವ ತರವಾಕೆ
ಬಂಡೆಗೊತ್ತಾಯ್ತು ತಂಬಡೆಲ್ಲಿಗೋದ
ಅವನ್ ದುಂಡುಮಲ್ಲಿಗೆ ವನಕೋದ
ದುಂಡುಮಲ್ಲಿಗೆಯ ವನಕೋದ ಮುತ್ತಯ್ಯ
ಅವನ್ನಂಡಗೆ ಮೊಗ್ಗ ತರೊವಾಕೆ
ಉಕ್ಕುಕ್ಕಿ ಬರುವ ವಳೆ ಚಂದ ಮುತ್ತಯ್ಯಾ
ನಿನ್ನೊಪತ್ತುನಪೂಜೆ ಬಲು ಚಂದ
ಸ್ವಾಮಿನ ಕೆರೆಯಲ್ಲಿ ಏನಮ್ಮ ಐಬೋಗ
ಸ್ವಾಮಿ ಮುತ್ತಯ್ನ ಒಳಮೆಟ್ಟಿ
ಸ್ವಾಮಿ ಮುತ್ತಯ್ಯ ಒಳಮೆಟ್ಟಿ ಬರುವಾಗ
ಸಾಮ್ರಾಣಿಮಂಜು ಕವುದಾವೊ
ಬೆಟ್ಟಾದ ಮೇಲೆ ಏನಮ್ಮ ಐಬೋಗ
ಗಾರೆ ಗರಡುಗಂಬ ಮ್ಯಾಲೆ ದೀಪ
ಗಾರೆ ಗರಡುಗಂಬ ನೆಲೆ ದೀಪ ಉರಿವಾಗ
ರಾತುನಮನೆಗೆ ಹಗಲಾದೊ
ತಂದೆ ನೀರಿಗೆ ನನ್ನ ಸಂಗಡ ಬರಲಿಲ್ಲ ನನ್ನೊಂದಿಗೆ
ಬಂದ ಮನೆ ಸ್ವಾಮಿ
ನನ್ನೊಂದಿಗೆ ಬಂದ ಮನೆಸ್ವಾಮಿ ಮುತ್ತಯ್ಯ
ನೀನಂಜಬೇಡ ಮಗಳೆ ಮಗೀನೀರಾ
ತಂದೆಗೆ ಮಗಳಾದೆ ಅಳುಕೋರ ಸೊಸೆಯಾದೆ ಮುತ್ತಯ್ಯ
ನಿಮ್ಮ ಪಾದ ಬೇಡೋಕೆ ಶಿಶುವಾದೆ
ನಿಮ ಪಾದ ಬೇಡೋಕೆ ಶಿಶುವಾದೆ ಮುತ್ತಯ್ಯಾ
ನಾನಿಮಗಂಜಿ ನೀರು ಮಗದೇನೊ
ಹೆಸುರಾದ ನಾಯ್ಕನಳ್ಳಿ ಮೊಸರಿಗೆ ನೀರಿಲ್ಲ
ಕುಸುಲಾದ ಸಿವಡು ತಲೆಮ್ಯಾಲೆ
ಮುತ್ತತ್ತುಗೊಗುರಿಗೆ ಹೊತ್ತೆಲ್ಲಿ ಹುಟ್ಟಿತು
ಸ್ವಾಮಿನ ಕೆರೆಯ ಬಯಲಲ್ಲಿ
ಸ್ವಾಮಿನ ಕೆರೆಯ ಬಯಲಲಿ ಮುಡಿದ ಪರುಸೆ
ಕಾವೇರೊಳಗಂಟ ಎಡವಿಲ್ಲ
ಕಾವೇರೊಳಗಂಟ ಎಡವಿಲ್ಲ ಮುತ್ತಯ್ಯ

ಹಣ್ಣು ಮುರಿಯೋರು ಎಡವಿಲ್ಲ
ಎಣ್ಣೆಬಾವಿಲಿ ಹನ್ನೆರಡೊಕ್ಕಲಾವ ಮುತ್ತಯ್ಯಾ
ಅವರನ್ನೆರಡು ಜಡೆಯಾ ದ್ಯಾವರಾವೆ
ಹನ್ನೆರಡು ಜಡೆಯ ಜಲನೋಡಿ ಮುತ್ತಯ್ಯಾ
ಅವರೆಣ್ಣೆ ಬಾವಿಲೀ ಬಿಳುತಾರೊ
ತುಪ್ಪದ ಬಾವಿಲಿ ಎಪ್ಪತ್ತುಕ್ಕಿಲೋಳೆ
ಅವರೆಪತ್ತು ಜಡೆಯ ದ್ಯಾವರಾವೆ
ಎಪ್ಪತ್ತು ಜಡೆಯ ಜಲನೋಡಿ ಮುತ್ತಯ್ಯಾ
ಅವರು ತುಪ್ಪದ ಬಾವಿಲಿ ನೆಲಸಾರೆ
ಆಚೆ ಕರೆಯಲ್ಲಿ ಎದ್ದು ನಿಂತ ಮುತ್ತಯ್ಯಾ
ಸೀತಾಳಗಾಲ ಸೆಳುಗಾಲ
ಸೀತಾಳಗಾಲಸೆಳುಗಾಲ ಮುತ್ತಯ್ಯ
ನೀನೊಪ್ಪಿಸಿಕೊಳ್ಳಯ್ಯ ಹರಕೆಯ
ಒಕುಳಕ್ಕಿ ಕಜ್ಜಾಯ ಚುಚ್ಚದ್ ಬಾಯಿ ಬೀಗ
ನಾನುಕ್ಕೊ ಒಳೆಯಲ್ಲಿ ಬರಲಾರೆ
ಉಕ್ಕೊ ಒಳೆಯಲ್ಲಿ ಬರಲಾರೆ ಮುತ್ತಯ್ಯಾ
ನೀನೊಪ್ಪಿಸಿ ಕೊಳ್ಳೊ ಅರಕೆಯ
ಒಪ್ಪಿಸಿಕೊಳ್ಳೊಕೆ ಚಿಕ್ಕೊರ ಮಗಳಲ್ಲ ನೀಸುತ್ತಿ
ಬಾಮಗಳೆ ಗುಡಿ ಮುಂದೆ
ಬಾಳದ ಕಜ್ಜಾಯ ಬೆಳ್ಳಿ ಬಾಯಿ ಬೀಗ
ನಾನುಕ್ಕೊ ವಳೆಯಲ್ಲಿ ಬರಲಾರೆ
ಉಕ್ಕೊ ವಳೆಯಲ್ಲಿ ಬರಲಾರೆ ಮುತ್ತಯ್ಯಾ
ನೀನೊಪಿಸಿಕೊಳ್ಳೊಹರಕೇಯಾ
ತುಪ್ಪದರವಿಯ ಕೊಡುವೆ ಒಪ್ಪುದ್ ಬಾಗ್ಯವ ಕೊಡುವೆ
ಬಾಲಾನ ಕೊಡು ಮನೆಸ್ವಾಮಿ
ಬಾಲನಕೊಡು ಮನೆಸ್ವಾಮಿ ಮುತ್ತಯ್ಯಾ
ನಾ ಬಾಕಾಲರಜವ ಕೊಡುತಿನೊ
ತುಪುದರವಿ ಕೊಡುವೆ ಒಪುದು ಬಾಗ್ಯವ ಕೊಡುವೆ
ಪುತ್ರನಾ ಕೊಡು ಮನೆಸ್ವಾಮಿ
ನೀಪುತ್ರನ ಕೊಡು ಮನೆಸ್ವಾಮಿ ಮುತ್ತಯ್ಯ
ತೊಟ್ಟಿಲರಜವಾ ವಡದೇನು
ಪಾದ್ದಾರೆ ಅಯ್ಯಾ ಪಾದ ಊರಿಕೊಂಡು
ಒಮ್ಮಲಗದ ಬೆಟ್ಟ ಒರಿಕೊಂಡು
ಒಮ್ಮಲಗದ ಬೆಟ್ಟ ಒರಿಕೊಂಡು ಪಾದ್ದಾರೆಯಲ್ಲಿ
ಮಲಗವರೆ
ಮುತ್ತಯ್ಯಾ ನೋಡು ಸುತ್ತಾ ಬೆಟ್ಟಕಾಣಾ

ಮುತ್ತು ಬಿತ್ತುದರೆ ಬೆಳೆಯಲ್ಲೊ ಅಪ್ಪಾ ಮುತ್ತಯ್ಯ ದಯದಿಂದ
ಯಾಕೋ ಮುತ್ತಯ್ಯಾ ಕ್ವಾಪ ನನ್ನ ಮ್ಯಾಲೆ
ಈ ಲೋಕಾದವರೆಲ್ಲ ನಗುತಾರೆ
ಲೋಕಾದೊರೆಲ್ಲ ನಗುತಾರೆ ನಿನ್ನ
ಪಾದಕೆ ಬಿದ್ದೆನು ಕಲಿಯಾಗು
ಕನಸಿಗ್ಬಂದಿದ್ದ ನನ್ನ ಮನಸಿಗ್ಬೇಕಾ ದೊಡೆಯ
ತೊಳಚಿಯ ದಂಡೆ ವನಮಾಲೆ
ತೊಳಚೀಯಾದಂಡೆ ವನಮಾಲೆ ಹಾಕಿಕೊಂಡು
ನನ್ನ ಕನಸಿಗ್ಬಂದಿದ್ದ ಜಗದೊಡೆಯ
ಯಾಕೊ ಮುತ್ತಯ್ಯ ನಿನ್ನ ಮಾತಲಿ ಕಲಿಯಿಲ್ಲ
ಊರರೈತ್ರಲ್ಲಿ ಗುಣವಿಲ್ಲ
ಊರರೈತ್ರಲ್ಲಿ ಗುಣವಿಲ್ಲ ಮುತ್ತಯ್ಯ
ನಿನ್ನ ಪಾದಕೆ ಬಿದ್ದೇನು ಕಲಿಯಾಗು
ಯಲ್ಲ ದೇವರಿಗೆ ಎಲ್ಲೆಲ್ಲೊ ಮಾಳಿಗೆ
ನಮ್ಮೂರಲಿರುವ ಮುತ್ತುರಾಯ
ನಮ್ಮೂರಲ್ಲಿರುವ ಮುತ್ತುರಾಯಸ್ವಾಮಿಗೆ
ಕಲ್ಲುಮಾಳಿಗೆ ಕೈಯಲಾಸ
ನಮ್ಮೂರು ಮುತ್ತಯ್ಯ ಸೊಖದಲ್ಲಿ ಸಮರಾಯ
ಶಾಸಣದ ಭೂಮಿ ಕೊಡುಗೆಯ
ಶಾಸಣದ ಭೂಮಿ ಕೊಡುಗೆಗೊಪರದೆಲ್ಲಿ
ಅವರುಯ್ಯುತ್ತಿದ ಮಳೆಯ ತಡಾದರೊ

**ನಾನೂ ಬರ್‍ವೆನು ಜೊತೆಗೆ**

ಗಿಣಿಯೇ ನಾನೂ ಬರ್‍ವೆನು ಜೊತೆಗೆ
ಈ ಮುತ್ತತ್ತಿಗೋಗೊ ಕೈಯಾಲಾಸ
ನಾನೂ ಬರ್‍ವೆನು ಗಿರಿಗೆ
ಸಾಲು ಮುತ್ತಿನ ಗಿಣಿಯೇ '
ಈ ಮುತ್ತತ್ತಿಗೊಗೊ ಕಯಲಾಸ
ನಾನು ಬರ್‍ವೆನು ಗಿರಿಗೆ
ತಾವರೇ ಕೊಳಕೇ ಸ್ವಾಮಿ ಮಜ್ಜನಕೋಗೆ
ಅವರ್‍ಯಾರೊ ಕರೆದರೆ ಬರಲೊಲ್ಲೊ
ನಾನು ಬರ್‍ವೆನು ಗಿರಿಗೆ
ಯಾರೋ ಕರೆದರೆ ಬರನಲ್ಲೊ ಮುತ್ತಯ್ಯ
ನೀ ಬೇಗನೆ ಕರೆತನ್ನಿ ಮಡುವಾಳಿ
ನಾನು ಬರುವೆನು ಗಿರಿಗೆ

• ಪ್ರತಿ ಪದ್ಯದ ಕೊನೆಯಲ್ಲಿ ಹಿಮ್ಮೇಳದವರು ಪಲ್ಲವಿಯನ್ನು ಹಾಡುತ್ತಾರೆ.

ಮಡೆಯಬುಟ್ಟಾರೆ ನಡನಲ್ಲೊ ಮುತ್ತಯ್ಯ
ಈ ನಡೆಮುಡಿಯ ಮ್ಯಾಲೆ ಹಿಡಿವೊನ್ನ
ನಾನು ಬರುವೆನು ಗಿರಿಗೆ

    ನಡಮುಡಿಯ ಮ್ಯಾಲೆ ಇಡಿಹೊನ್ನ ಬುಟ್ಟಾರೆ
    ಅವ್ರೂ ನಡೆದರೆ ನವೊಲಾಗರಿಯಂಗೆ
    ನಾನೂ ಬರುವೆನು ಗಿರಿಗೆ

ತಂಪೊತ್ತಿನಲ್ಲಿ ಕೆಂಪಿನ ಬೀದಿಲಿ
ಈ ಕೆಂಪಿನಗಣಗಲಾ, ಮುಡಕೊಂಡು
ನಾನು ಬರುವೆನು ಗಿರಿಗೆ

    ಕೆಂಪಿನಗಣಗಾಲಾ ಮುಡಕೊಂಡು ಮುತ್ತಯ್ಯಾ
    ಈ ತಂಪೊತ್ತಲೆ ಸ್ವಾಮಿ ಮ್ಯಾರದಾರೆ
    ನಾನು ಬರುವೆನು ಗಿರಿಗೆ

ಅವ್ರು ಸರುಹೊತ್ತನೆಲ್ಲಿ ಸರಗೂರ ಸೀಮೇಲಿ
ಈ ಸುರಬಾಡಿದೂವ ಮುಡಕೊಂಡು
ನಾನು ಬರುವೆನು ಗಿರಿಗೆ

    ಸುರಬಾಡಿದೂವ ಮುಡುಕೊಂಡು ಮುತ್ತಯ್ಯೊ
    ಸರು ಹೊತಲ್ ಸ್ವಾಮಿ ಮೆರೆದಾರೊ
    ನಾನೂ ಬರುವೆನು ಗಿರಿಗೆ

ಮುದ್ದು ಮುತ್ತಯ್ಯಾ ಇದ್ದಾರೆ ಗುಡಿಯಲ್ಲಿ
ತಿದ್ದಿದಾನಾಮ ತೀರಮಣಿ
ನಾನೂ ಬರುವೆನು ಗಿರಿಗೆ

    ತಿದ್ದೀದಾ ನಾಮಾ ತಿರುಮಣಿ ಸಲ್ವಾಗಿ
    ಅವರಿದ್ದಾರೆ ಸ್ವಾಮಿ ಗುಡಿಯಲ್ಲಿ
    ನಾನೂ ಬರುವೆನು ಗಿರಿಗೆ

ಉಂಡೆ ಮೆರುದಾವೋ ಊಬತ್ತಿ ಮೆರುದಾವೊ
ದಂಡೆಮೆರುದಾವೋ ಕೊರಳಲ್ಲಿ
ನಾನೂ ಬರುವೆನು ಗಿರಿಗೆ

    ಕಾಯಿ ಒಡೆವೋರು ಯಾವ್ಯಾವ ಕುಲದೊರು
    ಅಚ್ಚಾ ಮಾದುಗರು ಅಲಸೂರು
    ನಾನೂ ಬರುವೆನು ಗಿರಿಗೆ

ಅಚ್ಚಾ ಮಾದುಗರು ಅಲಸೂರು ನಾಯ್ಕನಳ್ಳಿ
ಅವರುನೆಚ್ಚಿ ಒಡೆದಾರೊ ಇಡುಗಾಯಿ
ನಾನೂ ಬರುವೆನು ಗಿರಿಗೆ

ಮುದ್ದು ಮುತ್ತಯ್ಯ ಇದ್ದಾರೆ ಗುಡಿಯಲ್ಲಿ
ಜಗ್ಗಿಸಿ ನೋಡೆ ಗುಡಿಯಲ್ಲಿ
ನಾನೂ ಬರುವೆನು ಗಿರಿಗೆ

ಮುತ್ತತ್ತುರಾಯ ಸತುವಂತ ನನ್ನೊಡೆಯ
ಅವ್ರು ಕಕ್ಕೆ ಸೊಪ್ಪೆಲ್ಲಿ ಮನೆ ಮಾಡಿ
ನಾನೂ ಬರುವೆನು ಗಿರಿಗೆ

ಕಕ್ಕೆ ಸೊಪ್ಪೆಲ್ಲಿ ಮನೆಮಾಡಿ ಮುತ್ತಯ್ಯೊ
ನಿನ್ ಸತ್ಯ ತೋರ್‍ವಾರೆ ಜಗಕೆಲ್ಲ
ನಾನೂ ಬರುವೆನು ಗಿರಿಗೆ

ಮುತ್ತತ್ತಿಗೊಗುರ್‍ಗ ಕಲ್ಲಿಲ್ಲ ಮುಳ್ಳಿಲ್ಲ
ಈ ಸಾಸಿವೆಗಾರ ಗಿಡವಿಲ್ಲ
ನಾನೂ ಬರುವೆನು ಗಿರಿಗೆ

ಸಾಸುವೆಗಾತರಾ ಗಿಡವಿಲ್ಲ ಮುತ್ತಯ್ಯೊ
ನೀ ಸೂಸಿ ಬಿತ್ತಯ್ಯಾ ಎಳೆ ಜವನ
ನಾನೂ ಬರುವೆನು ಗಿರಿಗೆ

ಸೂಸಿ ಬಿತ್ತಯ್ಯ ಎಳೆಜವನ ಮುತ್ತಯ್ಯೊ
ನೀ ಪೂಜೆ ಮಾಡಯ್ಯ ಗುಡಿಸುತ್ತ
ನಾನೂ ಬರುವೆನು ಗಿರಿಗೆ

ವಳೆಸಾಲ ಮುತ್ತು ಒಳಗೇನು ಮಾಡಿಯೇ
ಬಡಮಕ್ಕು ಬಂದೊ ಬಾಕಲಲ್ಲಿ
ನಾನೂ ಬರುವೆನು ಗಿರಿಗೆ

ಬಡಮಕ್ಕಳು ಬಂದೂ ಬಾಕಲಲ್ಲಿ ನಿಂತವರೆ
ನೀ ಪಾಲಿಸೊ ಸ್ವಾಮಿ ಪರಸಾದ
ನಾನೂ ಬರುವೆನು ಗಿರಿಗೆ

ಪರಸಾದ ಕಲಸಾಕೆ ನೀನ್ಯಾರಮಗಳಮ್ಮ
ನಾನು ದೇವಾರ ಸಿಸು ಮಗಳು
ನಾನೂ ಬರುವೆನು ಗಿರಿಗೆ

ನಾನು ದೇವಾರ ಸಿಸುಮಗಳು ಬಂದಿವಿನಿ
ನಿನ್ನ ಮಾಲೆ ತಂದಿಡೊ ಮಗಳಿಗೆ
ನಾನೂ ಬರುವೆನು ಗಿರಿಗೆ

ಮುತ್ತತ್ತಿ ಚಂದ ಮೂಡಲು ಬಾಕಲು ಚಂದ
ಉಕ್ಕುಕ್ಕಿ ಬರುವ ಹೊಳೆ ಚಂದಾ
ನಾನೂ ಬರುವೆನು ಗಿರಿಗೆ

ಒಮ್ಮಲಗೋದಾರೆ ಹಿಂದಿರಿಗಿ ನೋಡಾರೆ
ಹಾದಿಲ್ಕಡಿದಾರೆ ಹಸಿದೊಣ್ಣೆ
ನಾನೂ ಬರುವೆನು ಗಿರಿಗೆ

ಹಾದಿಲ್ಯಡುದಾರೆ ಹಸಿದೊಗ್ಗೆಮುತ್ತಯ್ಯೊ
ಅವ್ವು ಕಾಯಿ ವಡೆಯೋಕೆ ಅದವಾದೋ
ನಾನೂ ಬರುವೆನು ಗಿರಿಗೆ

ನಾಮಾ ತೇಯೋರ ನಾ ಕಂಡೆ ಒಳೆಯಲ್ಲಿ
ನಿನ್ನಾಮಾವ ತೇದು ಮುಳುಗೋವರ
ನಾನೂ ಬರುವೆನು ಗಿರಿಗೆ

ನಾಮಾ ತೇಯ್ದುರು ನಾಕಂಡೆ ಒಳಿಯಲ್ಲಿ ನಾಮಾವ
ತೇದು ಮುಳುಗೋ ಮುತ್ತಯ್ಯನ ನಾಕಂಡೆ ಕೊಳಚಿ ವನದಲ್ಲಿ
ನಾನೂ ಬರುವೆನು ಗಿರಿಗೆ

ಮಾದಿಗೆರಿಗೆ ಹೋಗೋನೆ ಮುತ್ತಯ್ಯೊ
ಮಾದಗಿತ್ತಿ ಹೆಣ್ಣೆ ಬೆಲೆ ಏಳೆ
ನಾನೂ ಬರುವೆನು ಗಿರಿಗೆ

ಮಾದಿಗೆರಿಗೆ ಹೋದಾನೆ ಮುತ್ತಯ್ಯೊ
ಹಾದಿಮೆಟ್ಟಾನೆ ಗುಲಗುಂಜಿ
ನಾನೂ ಬರುವೆನು ಗಿರಿಗೆ

ಹಾದಿ ಮೆಟ್ಟಾನೆ ಗುಲಗುಂಜಿದ್ರಾಕ್ಷಿಯ
ನೀ ಮಾದಿಗಿತ್ತಿ ಹೆಣ್ಣೆ ಬೆಲೆ ಹೇಳು
ನಾನೂ ಬರುವೆನು ಗಿರಿಗೆ

ಮದಗಿತಿ ನಾನಾದೆ ಮಾಣಿಕದ ಹರಳಾದೆ
ಮಾದಾರಚನ್ನಯ್ಯ ಮಗಳಾದೆ
ನಾನು ಬರುವೆನು ಗಿರಿಗೆ

ಮಾದಾರಚಚನ್ನಯ್ನ ಮಗಳಾದೆ ಮುತ್ತಯ್ಯೊ
ನಿನ್ನ ಪಾದ ಹಿಡಿಯೋಕೆ ಶಿಶುವಾದೆ
ನಾನೂ ಬರುವೆನು ಗಿರಿಗೆ

ವಾನಾನಾ ಮ್ಯಾಲೆ ವಾಲಾಡರಿವರ್‍ಯಾರೆ
ವಾನಬಾಗಿರೊ ಕಮರಿಗೆ
ನಾನೂ ಬರುವೆನು ಗಿರಿಗೆ

ವಾನಾ ಬಾಗಿರೊ ಕಮರಿಗೆ ಮುತ್ತಯ್ಯೊ
ನೀನೂಲಗ್ಗನಾಕಿ ಬಿಗದಿಡಿಯೋ
ನಾನೂ ಬರುವೆನು ಗಿರಿಗೆ

ಉಕ್ಕೊ ಒಳಿಯಲ್ಲಿ ಉರಿಯೊ ಪಂಜಿನ ಸ್ಯಾವೆ
ಅಚ್ಚನ ಬೆಲ್ಲ ರಸಬಾಳೆ ಮುತ್ತಯ್ಯೊ
ನಾನೂ ಬರುವೆನು ಗಿರಿಗೆ

ಅಚ್ಚಿನಾ ಬೆಲ್ಲ ರಸಬಾಳೆ ಮುತ್ತಯ್ಯೊ
ಉಚ್ಚು ಮುತ್ತಯ್ನ ಎಡೆಯಾದೂ
ನಾನೂ ಬರುವೆನು ಗಿರಿಗೆ

ತುಂಬೆ ಹೂನಾಂಗೆ ತುಂಬಕೊಂಡೊನಿನ್ನೊರು
ನಿ ಇಂಬಿ ಹೂನದಾಂಗೆ ಎಳೆಯಾದೆ
ನಾನು ಬರುವೆನು ಗಿರಿಗೆ

ಇಂಬಿ ಹೂವಾದಂಗೆ ಎಡೆಯಿಲ್ಲ ಮುತ್ತಯ್ಯ
ಕಾಯಿ ಒಡೆಯೋರು ಗಡವಿಲ್ಲ
ನಾನೂ ಬರುವೆನು ಗಿರಿಗೆ

ಇಂಬಿ ವೂಳಾನಾಂಗೆ ಎಡವಿದೆ
ಎಡಯೆಲ್ಲಿ ಬಂದನಲ್ಲ ಮುತ್ತಯ್ಯ ಒಳಮೆಟ್ಟಿ
ನಾನೂ ಬರುವೆನು ಗಿರಿಗೆ

ಕಾಯತ್ತು ಕೈ ಒಡೆದೆ ಹೂವಂತ ಮಡಿಲೊಡೆದೆ
ನೀ ಸಂಪಿಗೂವಂತೆ ಸರಗೊಡೆದ
ನಾನೂ ಬರುವೆನು ಗಿರಿಗೆ

ಸಂಪಿಗೂವಂತೆ ಸರಗೊಡೆದೆ ಮುತ್ಯಯ್ಯೊ
ನನ್ನ ಸಂಪತ್ತುಗಾರೈನ ಮೇಲೆ ಬಿದ್ದಿ
ನಾನೂ ಬರುವೆನು ಗಿರಿಗೆ

ಬಡವೆ ಒಲದಲ್ಲಿ ಎಡೆಯ ತೆವರಿಮ್ಯಾಲೆ
ಸೊಡಲು ಕುಡಿಯಂಗೆ ಉರಿಯೋನೆ
ನಾನೂ ಬರುವೆನು ಗಿರಿಗೆ

ಸೊಡಲು ಕುಡಿಯಂಗೆ ಉರಿಯೋನೆ ಮುತ್ತಯ್ಯೊ
ನಾ ಬಡವ ಬಂದಿವಿನಿ ದಯವಾಗೊ
ನಾನೂ ಬರುವೆನು ಗಿರಿಗೆ

ಈ ಎರಡು ಜನಪದ ಗೀತೆಗಳನ್ನು ಕನಕಮರ ತಾಲ್ಲೂಕಿನ ನಾಯಕಹಳ್ಳಿ ಮಾದಿಗ ಜನಾಂಗದ ಈ ಕೆಳಕಂಡ ಮಹಿಳೆಯರು ದಿನಾಂಕ ೨೪-೬-೨೦೦೪ರಂದು ಧ್ವನಿಮುದ್ರಿಸಿಕೊಳ್ಳಲಾಗಿದೆ

ಹಾಡಿದವರು :

೧. ವೆಂಕಟಲಕ್ಷಮ್ಮ ರಾಚಯ್ಯಾ ೪೦ ವರ್ಷ
೨. ವೆಂಕಟಲಕ್ಷ್ಮಮ್ಮ ವೆಂಕಟೇಶ್ ೩೦ ವರ್ಷ
೩. ಭಾಗ್ಯ ಶಿವದಾಸ್ ೨೫ ವರ್ಷ
೪. ಕೆಂಪಮ್ಮಕಾಳದಾಸಯ್ಯಾ ೪೦ ವರ್ಷ
೫. ಕಾಳಮ್ಮ ೪೦ ವರ್ಷ
೬. ಜಯಶಾಂತಮ್ಮ ಮುತ್ತಯ್ಯಾ ೪೫ ವರ್ಷ
೭. ಶೋಭಮ್ಮ ಗೋವಿಂದಯ್ಯ ೨೫ ವರ್ಷ

## ಸ್ವಾಮಿ ಮುತ್ತೆಯ್ಯಾ ನಿನಗೆ

ಸ್ವಾಮಿ ಮುತ್ತೆಯ್ಯ ನಿನಗೆ
ಚೆನ್ನಾದ ಕಂಸಾಳೆ ಗಂಧ ಕರ್ಪೂರ ಘಮಘಮ
ಮುತ್ತೈನ ಬಳಿ ಒಳಗೆ ॥ಪಲ್ಲವಿ॥

ಸನುವಾರ ಬತ್ತು ನಾಲವತ್ತಡಿಗೆ ಮಾಡಿ
ಕಾಮುದ್ ಕಸ್ತೂರಿಯ ಎಡೆಮಾಡಿ
ಸ್ವಾಮಿ ಮುತ್ತೈಯ್ಯ ನಿನಗೆ *

ಕಾಮುದ್ ಕಸ್ತೂರಿಯಾ ಎಡೆಮಾಡಿ ಮುತ್ತಯ್ಯೊ
ನಡುಮನೆ ಜ್ಯೋತಿ ಕಲಿಮಾಡಿ
ಸ್ವಾಮಿ ಮುತ್ತೈಯ್ಯ ನಿನಗೆ. ಸ್ವಾಮಿಯ ಬಳಿವಳಗೆ
ತಿಂಗಾಲಬ್ಬದೊನೆ ರಂಗದ್ ಕುಣಿತದೊನೆ

ಆ ಒಂಬಾಳೆಗಾರಜವಾ ವಡಿಯೊನೆ
ಸ್ವಾಮಿ ಮುತ್ತೈಯ್ಯಾ ನಿನಗೆ ಸ್ವಾಮಿಯಬಳಿವಳಿಗೆ
ಒಂಬಾಳೆಲೆರಜವ ವಡೆಯೊನೆ ಮುತ್ತಯ್ಯೊ

ಆ ಎಂಥ ನಿನ್ನಬ್ಬಲ್ಯೆಯಬೋಗ
ಸ್ವಾಮಿ ಮುತ್ತೈಯ್ಯಾ ನಿನಗೆ ಸ್ವಾಮಿಯ ಬಳಿವಳಗೆ

ಬಂದಾ ಮುತ್ತೈಯ್ಯಾ ಬಂದ ಕಾರಣವೇನು
ಆ ಕುಂತ್‌ಕೋಳಿ ನಾಮಗರಡೆಲ್ಲಿ
ಸ್ವಾಮಿಯ ಬಳಿವಳಗೆ

ಸುತಬೆಟ್ಟದ ಮ್ಯೇಲೆ ಎತ್ತಿನಕೊಂಬಿನಮ್ಯಾಲೆ
ಮುತ್ತಾಕುದ್ರೆ ಮುತ್ತು ಬೆಳೆಯಾವೆ
ಸ್ವಾಮಿಯ ಬಳಿವಳಗೆ

ಮುತ್ತಾಕುದ್ರು ಮುತ್ತು ಬೆಳೆಯಾ ಬೆಟ್ಟದ
ಮ್ಯಾಲೆ, ಅವ್ನ ಅಪ್ಪಾ ಮುತ್ತೈನ್ಗೆ
ಪಂಚಮಾಡಿ ಸ್ವಾಮಿ ಮುತ್ತೈಯನಿನಗೆ

ಸಲು ಬೆಟ್ಟದಾ ಮ್ಯೇಲಾ ಸರಗನಕೊಂಬಿನ ಮ್ಯಾಲೆ
ಆ ಜ್ಯೊಳಾಕುದ್ರು ಜ್ವಾಳಾ ಬೆಳೆಯವು
ಸ್ವಾಮಿ ಮುತ್ತೈಯ್ಯ ನಿನಗೆ

ಜ್ಯೊಳಾಕುದ್ರು ಜ್ವಾಳಾ ಬೆಳಯೋ ಬೆಟ್ಟಾದಮ್ಯಾಲೆ
ಅವ್ನ ಅಪ್ಪಾ ಮುತ್ತೈನ್ಗೆ ಪಂಚಮಾಡಿ
ಸ್ವಾಮಿಯ ಗಿರಿ ಒಳಗೆ

* ಪ್ರತಿ ಪದ್ಯದ ಕೊನೆಯಲ್ಲಿ ಹಿಮ್ಮೇಳದವರು ಪಲ್ಲವಿಯನ್ನು ಹಾಡುತ್ತಾರೆ.

## ಚಿನ್ನಾದ ತೇರು ನೋಡು

ಕಾಯಿವಡೆಯೋರು ಯಾವ್ಯಾವ ಕುಲದವರು
ಅಚ್ಚಾಮದಗುರು ಆಲಸೂರು
ಚಿನ್ನಾದ ತೇರುನೋಡು ಸ್ವಾಮೀಯ ಚಂದನೋಡು

ಅಚ್ಚಾ ಮದಗುರು ಆಲಸೂರು ನಾಯಕ್ನಳ್ಳಿ
ಅವರೆಚ್ಚಾಳುದಲಿ ಕಾಯಾ ಒಡುದಾರು
ಚಿನ್ನಾದ ತೇರು ನೋಡು ಸ್ವಾಮೀಯ ಚಂದನೋಡು

ಕಾದೂ ಕಲ್ಲಮ್ಯಾಲೆ ಪಾದಾನೂರಿಕೊಂಡು
ಆ ದೇವರಿಗೆ ಮಾಲೆ ಬೂಡುವನೆ
ಚಿನ್ನಾದ ತೇರು ನೋಡು

ದೇವುರಿಗೆ ಮಾಲೆ ಬುಡುವನೆ ಪೂಜಾರಿ
ಮ್ಯಾಗಾಳ ಮಾಲೆ ತೆಗದೀಡು
ಚಿನ್ನಾದ ತೇರು ನೋಡು ಸ್ವಾಮೀಯ ಚಂದ ನೋಡು

ಮಾಲೆಕೇಳುಕೆ ನಿನ್ನಾರಾ ಮಗಳಮ್ಮಾ
ನಾ ದೇವ್ರು ಮುತ್ತಯ್ನ ಹೆಣ್ಣು ಮಗಳು
ಚಿನ್ನಾದ ತೇರು ನೋಡು ಸ್ವಾಮೀಯ ಚಂದ ನೋಡು

ದೇವರು ಮುತ್ತೈನ ಹೆಣ್ಣು ಮಗಳು ಬಂದಿವಿನಿ
ಆ ಮ್ಯಾಗಾಳ ಮಾಲೆ ತೆಗದಿಡು
ಚಿನ್ನಾದ ತೇರು ನೋಡು ಸ್ವಾಮೀಯ ಚಂದ ನೋಡು

ಒಂದುಗೂಡಿ ಮೆರೆವಾಗ ಚಂದಕಾರನ ಮುತ್ತತ್ತಿ
ಒಂಬತ್ತಪೂಜೆ ವಡಗೂಡಿ
ಚಿನ್ನಾದ ತೇರು ನೋಡು ಸ್ವಾಮೀಯ ಚಂದ ನೋಡು

ಒಂಬತ್ತಪೂಜೆ ವಂದಗೂಡಿ ಮೇರಿವಾಗ
ಆ ಚಂದಕಾರ ಮುತ್ತೈನ ರಾಜ ಬೀದಿ
ಚಿನ್ನಾದ ತೇರು ನೋಡು ಸ್ವಾಮೀಯ ಚಂದ ನೋಡು

ಚಿನ್ನಾದ ತೇರು ನೋಡು ಮುತ್ತೈನ
ಬಣ್ಣಾದ ಬಳೆಯ ನೋಡು
ಚಿನ್ನಾದ ಸರ್ಪಾನ ನೆರಳಲ್ಲಿ ಮಲಗಿರುವ
ಮುದ್ದು ಮುತ್ತೈನ ನೋಡು ಸ್ವಾಮಿಯ ಚಂದ ನೋಡು

ಕಟುಗಲ್ಲು ಮುತ್ತತ್ತಿ ಮೆಟ್ಟುಗಲ್ಲು ಪಾದ್ದಾರೆ
ಆ ಪಟ್ಟಾ ಮುತ್ತೈನ ಮೆರಣೆಗೆ
ಚಿನ್ನಾದ ತೇರು ನೋಡು ಸ್ವಾಮಿಯ ಚಂದ ನೋಡು

ಬಂದಾ ಮುತ್ತೈಯ ಬಂದ ಕಾರಣವೇನು
ಆಕುಂತಕೊಳೊ ನಾಮಗರಡೆಲಿ
ಮುದ್ದು ಮುತ್ತೈನನೋಡು
ಎಂಜಾಲು ಆಂತ ಆಂಜಬ್ಯಾಡ ಮುತ್ತಯ್ಯೊ
ಗಂಜಾಳಿಟ್ಟವಿನಿ ನಡಮನೆಗೆ
ಚೆನ್ನಾದ ತೇರು ನೋಡು ಸ್ವಾಮೀಯ ಚಂದ ನೋಡು

ಈ ಎರಡು ಜನಪದಗೀತೆಗಳನ್ನು ಮಂಡ್ಯ ಜಿಲ್ಲೆ, ಬಾಳೆಹೊನ್ನಿಗ ಗ್ರಾಮದ ಈ ಕೆಳಕಂಡ ಮಾದಿಗ ಜನಾಂಗದ ಮಹಿಳೆಯರಿಂದ ದಿನಾಂಕ : ೨೦-೧೦-೨೦೦೪ರಂದು ಧ್ವನಿಮುದ್ರಿಸಿ ಕೊಳ್ಳಲಾಗಿದೆ.

ಹಾಡಿದವರು

೧. ರಾಜಮ್ಮ ವಯಸ್ಸು ೩೦
೨. ಮಲ್ಲಜಮ್ಮ ವಯಸ್ಸು ೩೬
೩. ಬಾಗ್ಯಮ್ಮ ವಯಸ್ಸು ೩೫

## ಮುತ್ತತ್ತಿ ಚಂದ

ಮುತ್ತತ್ತಿ ಚಂದ ಮೂಡು ಬಾಗಿಲು ಚಂದ
ಉಕ್ಕುಕ್ಕಿ ಬರುವ ಹೊಳೆ ಚಂದ ಮುತ್ತಪ್ಪ
ನಿನ್ನೊಪ್ಪತ್ತಿ ಪೂಜೆ ಬಲು ಚಂದ
ಮುತ್ತತ್ತಿ ಗುಡಿ ಮುಂದೆ ಹಿಪ್ಪೆಯ ಮರಹುಟ್ಟಿ
ಎಪ್ಪತ್ತು ಕವಲು ಕವಲೊಡೆದು ಮುತ್ತಪ್ಪ
ನಿನ್ನ ತುಪ್ಪ ಮಾರುವವಳಿಗೆ ನೆರಳಾಯ್ತು
ಮುತ್ತತ್ತಿಗೆ ಹೋಗೋರ್‍ಗೆ ಹೊತ್ತೆಲ್ಲಿ ಹುಟ್ಟೀತು
ಸ್ವಾಮನ ಕೆರೆಯ ಬಯಲಲ್ಲಿ ಕೂಡಿದ ತಸೆ
ಕಾವೇರಿ ಗಂಟ ಕಾಯೊಡೆಯೋದೆ ಎಡೆಯಿಲ್ಲ
ಮುತ್ತತ್ತಿಯರಾಯ ಸತುವಂತ ನನ್ನೊಡೆಯ
ಕಕ್ಕೆಯ ಸೊಪ್ಪಲ್ಲಿ ಮನೆ ಮಾಡಿ '
ಸತ್ಯಾವಾ ತೋರಾನು ಜಗಕೆಲ್ಲ
ಮಳೆರಾಯ ಹುಯ್ಯಲಿ ಕೆರೆಯಾರ ತುಂಬಲಿ
ಹನ್ನೆರಡು ಕೋಡಿ ಹರಿಯಲಿ ಬಿಸಿಲಯ್ಯ
ನಿನ್ನ ಸಣ್ಣಕ್ಕಿ ಗದ್ದೆ ಬೆಳೆಯಾಲಿ
ಮುತ್ತತ್ತಿಗೋಗುವರಿಗೆ ಸಣ್ಣ ಮರಳಿನ ದಾರಿ
ಸಾಸಿವೆಯಷ್ಟು ಕಲ್ಲಲ್ಲಿ ಮುತ್ತಪ್ಪ
ಸೂಸಿ ಬಿತ್ತಯ್ಯ ಜವಣಾವ *

* ಅಪ್ಪೆಗೆರೆ ತಿಮ್ಮರಾಜು, ಪದವ ಕೇಳವ್ವ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೧೭೬, ೨೦೦೪

### ಬಡವರಿಗೆ ಸಾವ ಕೊಡಬೇಡ

ಮೂಡಲ ಮುತ್ತಯ್ಯ ನೋಡಯ್ಯ ಬಡತನ
ಮೂಡಲ್ಲಿ ರಾಗಿ ಮೆಳೆಯುದ್ದ ಬೆಳೆದರೆ
ಮಾಡುವೆ ನಿನಗೆ ಹರಿಸೇವೆ
　　ಬಂಗಾರ ಬಳಿಯಿದ್ರೆ ಬೈಬೇಡ ಬಡವರಿಗೆ
　　ಬಂಗಾರ ನಿನಗೆ ಸ್ಥಿರವಲ್ಲ ಮಧ್ಯಾಹ್ನದ
　　ಬಿಸಿಲು ಹೊರಳುವುದು ತಡವಲ್ಲಾ
ಬಡವೆಯ ಮಕ್ಕಳು ನಡೆದರೆ ಸಂತೋಷ
ಹುಡಿಯಾಡು ಮನೆಗೆ ಬರುವಾಗ ತಾಯಿಗೆ
ಬಡತನದ ಜಾನ ಮರೆಯಿತು
　　ಬಡತನ ನನಗಿರಲಿ ಬಾಳ ಮಕ್ಕಳಿರಲಿ
　　ಮ್ಯಾಗ ಗುರುವಿನ ದಯವಿರಲಿ ನನಗುರುವೆ
　　ಬಡತನ ಚಿಂತಿ ನನಗಿರಲಿ
ಬಡವರು ಸತ್ತರೆ ಸುಡಲಿಕೆ ಸೌದಿಲ್ಲ
ಒಡಲ ಕಿಚ್ಚಿನಲ್ಲಿ ಹೆಣ ಬೆಂದೊ ದೇವರೇ
ಬಡವರಿಗೆ ಸಾವ ಕೊಡಬೇಡ *

* ಅಪ್ಪಗೆರೆ ತಿಮ್ಮರಾಜು, ಪದವಕೇಳವ್ವ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೧೭೭, ೨೦೦೪

## ಅನುಬಂಧ-೩

## ಗ್ರಾಮನಾಮಸೂಚಿ

| ತಾಲ್ಲೂಕು | ಗ್ರಾಮ |
| --- | --- |
| ಸಿದ್ದಾಪುರ | ಮುತ್ತಳ್ಳಿಗ |
| | ಮುತ್ತಳ್ಳಿ |
| ಜೇವರಗಿ | ಮುತಕೋಡ |
| ಕೊಡಗು | ಮುತ್ತಾರಮಡಿ |
| ಚಿಂತಾಮಣಿ | ಮುತ್ತಕದಹಳ್ಳಿ |
| ಬಾಗೇಪಲ್ಲಿ | ಮುತ್ತಿನಪಲ್ಲಿ |
| ಬಂಗಾರಪೇಟೆ | ಮಾದಮುತ್ತನಹಳ್ಳಿ |
| ಮಾಲೂರು | ಮುತ್ತಕದಹಳ್ಳಿ |
| | ಮುತ್ತೇನಹಟ್ಟಿ |
| ಶಿಡ್ಲಘಟಾ | ಮುತ್ತಕದಹಳ್ಳಿ.ಕೆ. |
| | ಮುತ್ತಕದಹಳ್ಳಿ.ಎಲ್. |
| | ಮುತ್ತೂರು |
| ಶ್ರೀನಿವಾಸಪುರ | ಮುತ್ತಕಪಲ್ಲಿ |
| ಕಡೂರು | ಮುತ್ತಾಣಿಕೆರೆ |
| ಚಿಕ್ಕಮಗಳೂರು | ಮುತ್ತಿನಪುರ |
| ನರಸಿಂಹರಾಜಪುರ | ಮುತ್ತಿನಕೊಪ್ಪ |
| ಮೂಡಿಗೆರೆ | ಮುತ್ತಿಗಾಪುರ |
| ಮೊಳಕಾಲ್ಮೂರು | ಮುತ್ತಿಗಾರಹಳ್ಳಿ |
| ಹೊಸದುರ್ಗ | ಮುತ್ತಗೊಂದಿ |
| ಹೊಳಲ್‌ಕೆರೆ | ಮುತ್ತಗದೂರು |
| ಕುಣಿಗಲ್ | ಮುತ್ತುಗದಹಳ್ಳಿ |
| ಚಿಕ್ಕನಾಯಕನಹಳ್ಳಿ | ಮುತ್ತುಗದಹಳ್ಳಿ |
| ತುಮಕೂರು | ಮುತ್ಸಂದ್ರ |
| ತುರುವೆಕೆರೆ | ಮುತ್ತುಗದಹಳ್ಳಿ |
| | ಮುತ್ಸಂದ್ರ |
| ಕುಂದಾಪುರ | ಯಡ್ಯಾಡಿಮುತ್ಯಾಡಿ |
| ಮಂಗಳೂರು | ಮುತ್ತೂರು |
| ಧಾರವಾಡ | ಮುಳಮುತ್ತಲ |
| ಬ್ಯಾಡಗಿ | ಮುತ್ತೂರು |
| ಶಿಗ್ಗಾಂವ | ಮುತ್ತಳ್ಳಿ |
| ಬಾಗಳಿ | ಮುತ್ತಿಗಿ |
| ಹುಮಾನಾಬಾದ್ | ಮುತ್ತಂಗಿ |

| | |
|---|---|
| ಗೋಕಾಕ್ | ಮುತ್ನಾಳ್ |
| ಬೆಳಗಾಂವ್ | ಮುತ್ತಗೆ |
| | ಮುತ್ನಾಳ |
| ಸವದತ್ತಿ | ಮುತವಾಡ |
| ಆನೇಕಲ್ | ಮುತಸಂದ್ರ |
| | ಮುತ್ತನಲ್ಲೂರು |
| | ಮುತ್ತುಗಟ್ಟಿ |
| ದೇವನಹಳ್ಳಿ | ಮುತ್ತುಗದಹಳ್ಳಿ |
| ದೊಡ್ಡಬಳ್ಳಾಪುರ | ಮುತಸಂದ್ರ |
| | ಮುತ್ತುಕಾಡಹಳ್ಳಿ |
| | ಮುತ್ತುಗದಹಳ್ಳಿ |
| | ಮುತ್ತುಗದಹಳ್ಳಿ |
| | ಮುತ್ತೂರು |
| ಬೆಂಗಳೂರು ಉತ್ತರ | ಮುತ್ತಗದಹಳ್ಳಿ |
| ಹೊಸಕೋಟೆ | ಮುತ್ತಕಾಡಹಳ್ಳಿ |
| | ಮುತ್ತಕದಹಳ್ಳಿ |
| | ಮುತ್ತಕೂರು |
| | ಮುತ್ತಸಂದ್ರ (ಅ.ಹೋ) |
| | ಮುತ್ತಸಂದ್ರ (ಸು.ಹೊ) |
| ನಾಗಮಂಗಲ | ಮುತ್ತಸಂದ್ರ (ದೆ.ಹೋ) |
| | ಮುತ್ತಸಂದ್ರ (ದೇ.ಹೊ) |
| | ಮುತ್ತಸಂದ್ರಕಾವಲು |
| ಮದ್ದೂರು | ಮುತ್ತನಹಳ್ಳಿ |
| ಮಳವಳ್ಳಿ | ಮುತ್ತನಹಳ್ಳಿ |
| | ಮುತ್ತಲಕಟ್ಟೆ |
| | ಮುತ್ತಾನಿ(ಮುತ್ತಾತಿ) |
| ಮಂಡ್ಯ | ಮುತ್ತಗೆರೆ |
| ಚಾಮರಾಜನಗರ | ಮುತ್ತಿಗೆ |
| ಟಿ.ನರಸಿಪುರ | ಮುತ್ತಟ್ಟಿ |
| | ಮುತ್ತಲವಾಡಿ |
| ಪಿರಿಯಪಟ್ಟಣ | ಮುತಗೂರು |
| | ಮುತ್ತೂರು |
| ಹುಣಸೂರು | ಮುತ್ತುರಾಯನಹೊಸಹಳ್ಳಿ |
| | ಮುತ್ತರಾಯನಹೊಸಹಳ್ಳಿ |
| | ಕಾವಲು (ಬಿ) |

| | |
|---|---|
| ಹೆಗ್ಗಡದೇವನಕೋಟೆ | ಮುತ್ತಿಗೆ ಚಿಕ್ಕತಳಲು |
| ಬಾದಾಮಿ | ಮುತ್ತಲಗೇರಿ |
| ಬಾಗಲಕೋಟೆ | ಮುತ್ತಟ್ಟಿ |
| ಬಸವನಬಾಗೇವಾಡಿ | ಮುತ್ತಗಿ |
| | ಮುತ್ತಲದಿನ್ನಿ |
| ಬೀಳಗಿ | ಮುತ್ತಲದಿನ್ನಿ |
| ತೀರ್ಥಹಳ್ಳಿ | ಮುತ್ತವಳ್ಳಿ |
| ಶಿಕಾರಿಪುರ | ಮುತ್ತನಹಳ್ಳಿ(ಜೋಡಿ) |
| | (ಇನಾಂಮುತ್ತಳ್ಳಿ) |
| | ಮುತ್ತಹಳ್ಳಿ(ಸರ್ಕಾರ) |
| | (ಸರ್ಕಾರಿ ಮುತ್ತಳ್ಳಿ) |
| | ಮುತ್ತಿಗೆ |
| ಸೊರಬ | ಮುತ್ತಗುಪ್ಪೆ |
| ಹೊಸನಗರ | ಮುತ್ತಲ |
| | ಮುತ್ತೂರು |
| ಅರಕಲಗೂಡು | ಮುತ್ತಿಗೆ |
| ಆಲೂರು | ಮುತ್ತಿಗೆ(ಕೊ.ಹೊ) |
| | ಮುತ್ತಿಗೆ(ಕು.ಹೊ) |
| ಚನ್ನರಾಯಪಟ್ಟಣ | ಮುತ್ತುಗದಹೊನ್ನೆನಹಳ್ಳಿ |
| ಬೇಲೂರು | ಮುತ್ತುಗದಹಳ್ಳಿ |
| | ಮುತ್ತಗದಾಳು |
| | ಮುತ್ತಗನ್ನೆ |
| | ಮುತ್ತುಗದಹಳ್ಳಿ |
| ಹಾಸನ | ಮುತಗೇರಿಹಳ್ಳಿ |
| | ಮುತ್ತತ್ತಿ |

## ಅನುಬಂಧ–೪

## ಪ್ರಶ್ನಾವಳಿಗಳು

೧. ನಿಮ್ಮ ಮನೆ ದೇವರು ಯಾವುದು ?

೨. ನಿಮ್ಮ ಜಾತಿ ಯಾವುದು?

೩. ನಿಮ್ಮ ಪೂರ್ವಿಕರು ಯಾವ ಊರಿನವರು?

೪. ನೀವು ಪೂಜಿಸುವ ಇತರ ದೇವರುಗಳು ಯಾವುವು?

೫. ನಿಮ್ಮ ವೃತ್ತಿ ಏನು?

೬. ಮುತ್ತತ್ತಿ ದೇವಾಲಯಕ್ಕೆ ವರ್ಷಕ್ಕೆ ಎಷ್ಟು ಬಾರಿ ಹೋಗುತ್ತೀರಿ?

೭. ಮುತ್ತತ್ತಿರಾಯನಿಗೆ ಪ್ರಾಣಿಬಲಿ ನೀಡಿ ಸೇವೆ ಮಾಡುತ್ತೀರಾ?

೮. ನಿಮ್ಮ ಮನೆಯಲ್ಲಿ ದಿನವೂ ಮುತ್ತತ್ತಿರಾಯನನ್ನು ಪೂಜಿಸುತ್ತೀರಾ?

೯. ಮುತ್ತತ್ತಿ ಜಾತ್ರೆಯಲ್ಲಿ ಭಾಗವಹಿಸುತ್ತೀರಾ?

೧೦. ದಾಸಪ್ಪನನ್ನು ಮನೆಗೆ ಕರೆಸಿ ಪೂಜೆ ಮಾಡಿಸುತ್ತೀರಾ?

೧೧. ನಿಮ್ಮ ಮಕ್ಕಳಿಗೆ ಮುತ್ತತ್ತಿರಾಯನ ಹೆಸರನ್ನು ಇಡುತ್ತೀರಾ?

೧೨. ಮುತ್ತತ್ತಿ ದೇವಾಲಯಕ್ಕೆ ಯಾವ ಬಗೆಯ ಕಾಣಿಕೆಯನ್ನು ಅರ್ಪಿಸುವಿರಿ?

೧೩. ಮಣೇವು ಸೇವೆಯನ್ನು ಮಾಡುತ್ತೀರಾ?

೧೪. ಮುತ್ತತ್ತಿ ದೇವರ ಹುಲಿವಾಹನ ಸೇವೆ ಮಾಡಿಸುವಿರಾ?

೧೫. ಮುತ್ತತ್ತಿರಾಯನಿಂದ ನಿಮಗೆ ಲಭಿಸಿರುವ ಫಲಗಳು ಯಾವುವು?

೧೬. ಮುತ್ತತ್ತಿಗೆ ಅರಣ್ಯದಲ್ಲಿ ನಡೆದು ಹೋಗಲು ಇಷ್ಟವೇ?

೧೭. ಮುತ್ತತ್ತಿ ಬಳಿಯ ಪಾದ್ದಾರೆಯಪ್ಪನಿಗೂ ನಡೆದುಕೊಳ್ಳುವಿರಾ?

೧೮. ಮುತ್ತತ್ತಿರಾಯನಿಗೆ ಮೀಸಲು ಹಣ ಕಟ್ಟುವ ಸಂಪ್ರದಾಯವಿದೆಯೇ?

೧೯. ಮುತ್ತತ್ತಿರಾಯ ಎಂದು ಆಂಜನೇಯನಿಗೆ ಹೆಸರು ಬಂದಿರುವ ಕಾರಣ ತಿಳಿಸುವಿರಾ?

೨೦. ಮುತ್ತತ್ತಿಗೆ ಭೇಟಿ ನೀಡಿದಾಗ ತಿರುಗಣೆ ಮಡುವಿನ ಬಳಿ ಗಂಗಾಪೂಜೆ ಮಾಡುವಿರಾ?

೨೧. ಮುತ್ತತ್ತಿಗೆ ಸಂಬಂಧಿಸಿದ ಜನಪದ ಗೀತೆಗಳನ್ನು ಯಾವ ಸಂದರ್ಭಗಳಲ್ಲಿ ಹಾಡುತ್ತೀರಿ?

೨೨. ಮುತ್ತತ್ತಿರಾಯನಿಗೆ ಮುಡಿಕೊಡುವ ಸಂಪ್ರದಾಯವಿದೆಯೇ?

೨೩. ಮುತ್ತತ್ತಿರಾಯ ಎಂಬ ದೇವರು ನಿಮ್ಮ ಗ್ರಾಮಗಳ ಬಳಿ ಇದೆಯೇ?

೨೪. ಮುತ್ತತ್ತಿರಾಯನ ಕುರಿತು ನಂಬಿಕೆ ಬರಲು ಕಾರಣವೇನು?

೨೫. ಮುತ್ತತ್ತಿ ಬೆಳವಣಿಗೆ ಕುರಿತು ನಿಮ್ಮ ಅಭಿಪ್ರಾಯವೇನು?

ಅನುಬಂಧ –೫

ವಕ್ತೃಗಳ ವಿವರ

ಮುತ್ತತ್ತಿ : ಒಂದು ಸಾಂಸ್ಕೃತಿಕ ಅಧ್ಯಯನ ಎಂಬ ಶೀರ್ಷಿಕೆ ಅಡಿಯಲ್ಲಿ ಮಂಡ್ಯ, ರಾಮನಗರ, ಬೆಂಗಳೂರು ಜಿಲ್ಲೆಗಳಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ಸ್ಥಳೀಯರು ನನ್ನೊಂದಿಗೆ ಸ್ಪಂದಿಸುತ್ತಾ ನಾನು ಕೇಳಿದ ಪ್ರಶ್ನೆಗಳಿಗೆ ಉತ್ತರಿಸಿದರು. ವಯಸ್ಸಾದ ಅನುಭವಿಗಳು, ಅರ್ಚಕರು, ತಮ್ಮಡಿಗಳು ನನಗೆ ಸಹಕರಿಸಿದರು. ಕ್ಷೇತ್ರಕಾರ್ಯ ಮಾಡುವಾಗ ಕೇಳಿದ ಪ್ರಶ್ನೆಗಳಿಗೆ ವಕ್ತೃಗಳು ಅದಷ್ಟು ಸಹಕರಿಸಿದರು. ನಾನು ಮಾಡಿಕೊಂಡಿರುವ ಅಧ್ಯಯನ ಮತ್ತು ಅನುಭವಗಳೊಂದಿಗೆ ಕ್ಷೇತ್ರಕಾರ್ಯ ಮಾಡಿ ವಿಷಯ ಸಂಗ್ರಹಿಸಿಕೊಂಡಿದ್ದೇನೆ. ಆ ವಕ್ತೃಗಳು ಈ ಕೆಳಕಂಡಂತೆ ಇದ್ದಾರೆ.

| ಕ್ರಸ | ಹೆಸರು | ವಯಸ್ಸು | ಜಾತಿ | ವಿದ್ಯಾಭ್ಯಾಸ | ಊರು | ವೃತ್ತಿ |
|---|---|---|---|---|---|---|
| ೧ | ಮುತ್ತಯ್ಯ | ೭೦ | ಒಕ್ಕಲಿಗ | ಅನಕ್ಷರಸ್ಥರು | ಮುತ್ತತ್ತಿ | ತಮ್ಮಡಿ |
| ೨ | ಮುತ್ತಯ್ಯ | ೬೦ | ಒಕ್ಕಲಿಗ | ಅನಕ್ಷರಸ್ಥರು | ಗುಂಡಾಪುರ | ತಮ್ಮಡಿ |
| ೩ | ಹುಚ್ಚವೀರಯ್ಯ | ೬೦ | ಲಿಂಗಾಯತ | ಅನಕ್ಷರಸ್ಥರು | ಭೂಹಳ್ಳಿ | ತಮ್ಮಡಿ |
| ೪ | ಶ್ರೀಕಂಠಶರ್ಮ | ೫೦ | ಬ್ರಾಹ್ಮಣರು | ಎಸ್.ಎಸ್.ಎಲ್.ಸಿ | ಹಲಗೂರು | ಅರ್ಚಕರು |
| ೫ | ಬಿ.ಸಿದ್ಧಯ್ಯ | ೪೦ | ಮಾದಿಗ | ಎಸ್.ಎಸ್.ಎಲ್.ಸಿ | ಬಾಳೆಹೊನ್ನಿಗ | ವ್ಯವಸಾಯ |
| ೬ | ಸಂಜೀವಯ್ಯ | ೮೦ | ಮಾದಿಗ | ಅನಕ್ಷರಸ್ಥರು | ನಾಯಕನ ಹಳ್ಳಿ | ವ್ಯವಸಾಯ |
| ೭ | ನಾಗರಾಜು | ೬೦ | ಮಾದಿಗ | ಅನಕ್ಷರಸ್ಥರು | ಹಲಸೂರು | ಚರ್ಮಗಾರಿಕೆ |
| ೮ | ಪುಟ್ಟಸ್ವಾಮಿ | ೬೫ | ಮಾದಿಗ | ಬಿ.ಎಸ್.ಸಿ.(ವ್ಯ) | ಮೈಸೂರು | ಸೂಪರಿಟೆಂಡ್ |
| ೯ | ಪುಟ್ಟಸ್ವಾಮಿಗೌಡ | ೭೦ | ಒಕ್ಕಲಿಗ | ಅನಕ್ಷರಸ್ಥ | ಹಲಸೂರು | ವ್ಯವಸಾಯ |
| ೧೦ | ಬೀರಪ್ಪ | ೬೦ | ಕುರುಬ | ಅನಕ್ಷರಸ್ಥ | ಭೀಮೇಶ್ವರಿ | ತಮ್ಮಡಿ |
| ೧೧ | ಮಾದಮ್ಮ | ೭೦ | ಆದಿಕರ್ನಾಟಕ | ಅನಕ್ಷರಸ್ಥರು | ದಳವಾಯಿ ಕೊಡಿಹಳ್ಳಿ | ಕೂಲಿ |
| ೧೨ | ಚೆಲುವಯ್ಯ | ೪೪ | ಗಾಣಿಗ | ೮ನೇ ತರಗತಿ | ಬೆಂಗಳೂರು | ಹೂ ಮಾರುವುದು |
| ೧೩ | ಚಿಕ್ಕಮುತ್ತು | ೫೫ | ಒಕ್ಕಲಿಗ | ೬ನೇ ತರಗತಿ | ಹನುಮೇನ ಹಳ್ಳಿ | ದಾಸಯ್ಯ |
| ೧೪ | ವನಮುತ್ತ | ೪೮ | ಕೊರಮ | ಅನಕ್ಷರಸ್ಥರು | ದೂಂತೂರು | ಬುಟ್ಟಿ ಹೆಣೆಗೆ |

| | | | | | | |
|---|---|---|---|---|---|---|
| ೧೫ | ಬೋರಮ್ಮ | ೪೮ | ಆದಿಕರ್ನಾಟಕ | ಅನಕ್ಷರಸ್ಥರು | ದಾಳಿಂಬ | ವ್ಯವಸಾಯ |
| ೧೬ | ಸಿದ್ಧಯ್ಯ | ೬೦ | ಮಾದಿಗ | ಅನಕ್ಷರಸ್ಥರು | ಸಾತನೂರು | ಚರ್ಮಗಾರಿಕೆ |
| ೧೭ | ಮುತ್ತಯ್ಯ | ೩೮ | ಕೊರಮ | ೮ನೇ ತರಗತಿ | ಕುಮಾರ ಸ್ವಾಮಿಬಡಾವಣೆ | ಆಟೋಚಾಲಕ |
| ೧೮ | ಬಿ.ಎಲ್.ಲಕ್ಕೇಗೌಡ | ೮೦ | ಒಕ್ಕಲಿಗ | ಪದವೀಧರರು | ಬೆಂಗಳೂರು | ನಿವೃತ್ತ ಸರ್ಕಾರಿ ಅಧಿಕಾರಿ |
| ೧೯ | ಶಿವಲಿಂಗಯ್ಯ | ೫೫ | ಒಕ್ಕಲಿಗ | ಎಂ.ಬಿ.ಬಿ.ಎಸ್ | ಬೆಂಗಳೂರು | ವೈದ್ಯರು |
| ೨೦ | ಮಂಟೇದಯ್ಯ | ೪೬ | ಗಾಣಿಗ | ಅನಕ್ಷರಸ್ಥರು | ದೊಡ್ಡಾಲಹಳ್ಳಿ | ಚರ್ಮಗಾರಿಕೆ |

## ಅನುಬಂಧ-೬

## ಪರಾಮರ್ಶನ ಗ್ರಂಥಗಳು


೧. ಅನಂತರಾಮು ಕೆ. ; ಸಕ್ಕರೆಸೀಮೆ, ಅನಂತಪ್ರಕಾಶನ, ಮೈಸೂರು, ೧೯೮೨

೨. ಇಂದ್ವಾಡಿ ವೆಂಕಟೇಶ್ ; ಧರೆಗೆ ದೊಡ್ಡವರ ಕಥೆ, ವಿಶ್ವಾಲಯ ಪ್ರಕಾಶನ, ಬೆಂಗಳೂರು, ೧೯೯೬

೩. ಇಂದ್ವಾಡಿ ವೆಂಕಟೇಶ್ ; ಮಂಟೇಸ್ವಾಮಿ ಪರಂಪರೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೪. ಎದುರ್ಕಳ ಶಂಕರನಾರಾಯಣ ಭಟ್.ಕೆ ; ಶ್ರೀಕಾವೇರಿ ವೈಭವ, ಶ್ರೀರಾಮಕೃಷ್ಣಪ್ರಕಾಶನ, ಭಾಗಮಂಡಲ, ೧೯೭೮

೫. ಡಾ.ಕಲಬುರ್ಗಿ ಎಂ.ಎಂ. ; ಕನ್ನಡ ಸಂಶೋಧನಾಶಾಸ್ತ್ರ, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೦೨

೬. ಕನ್ನಡ ರತ್ನಕೋಶ: ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ೧೯೯೪

೭. ಕನ್ನಡ ವಿಷಯ ವಿಶ್ವಕೋಶ ; ಮೈಸೂರು ವಿಶ್ವವಿದ್ಯಾಲಯ, ಮೈಸೂರು

೮. ಕನ್ನಡ –ಕನ್ನಡ ನಿಘಂಟು ಸಂಪುಟಗಳು ; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೯. ಕನ್ನಡ ಜಾನಪದ ಕೋಶ ; ಕರ್ನಾಟಕ ಜಾನಪದ ಪರಿಷತ್ತು ಬೆಂಗಳೂರು

೧೦.ಕರ್ನಾಟಕ ಸಂಗೀತ ಪ್ರಾಥಮಿಕ ಹಂತ ; ಕರ್ನಾಟಕ ಸರ್ಕಾರ ಸಾರ್ವಜನಿಕ ಶಿಕ್ಷಣ ಇಲಾಖೆ, ೨೦೦೫

೧೧. ಕರ್ನಾಟಕ ಸಂಗೀತ ಮಾಧ್ಯಮಿಕ ಹಂತ ; ಕರ್ನಾಟಕ ಸರ್ಕಾರ ಸಾರ್ವಜನಿಕ ಶಿಕ್ಷಣ ಇಲಾಖೆ, ೨೦೦೪

೧೨. ಕೊಡ್ಲೂರು ವೆಂಕಟಪ್ಪ ; ಸ್ಥಳನಾಮವೀರರು ; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ೨೦೦೨

೧೩ ಗೀತಾಚಾರ್ಯ ನಾ (ಸಂ) ; ಅಂತರ ಶಿಸ್ತೀಯ ಸಂಶೋಧನಾ ವಿಧಿವಿಧಾನಗಳು, ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ, ಬೆಂಗಳೂರು

೧೪.ಡಾ.ಗುರುಮೂರ್ತಿ.ಕೆ.ಜಿ. ; ಸ್ಥಳನಾಮಗಳು ಅಧ್ಯಯನ ಮತ್ತಿತರ ಪ್ರಬಂಧಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೭

೧೫. ಗೋವಿಂದರಾಜು.ಟಿ ; ಚೆನ್ನಾದೇವಿ ಅಗ್ರಹಾರ, ಜಾನಪದೀಯ ಅಧ್ಯಯನ, ಪುಸ್ತಕಜೇನು, ಚೆನ್ನಾದೇವಿ ಅಗ್ರಹಾರ, ೧೯೯೩

೧೬.ಗೋ.ರು.ಚನ್ನಬಸಪ್ಪ ; (ಸಂ)ಕರ್ನಾಟಕದ ಜನಪದ ಕಲೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೭.ಗ್ರಾಮನಾಮಸೂಚಿ : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೫

೧೮.ಚಂದ್ರಶೇಖರ್ ಕಂಬಾರ ; ಕನ್ನಡ ಜಾನಪದ ವಿಶ್ವಕೋಶ, ಸಂಪುಟ ೧, ೨ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೫

೧೯.ಡಾ.ಚಿದಾನಂದಮೂರ್ತಿ.ಎಂ. ; ಸಂಶೋಧನೆ, ಡಿ.ವಿ.ಕೆ.ಮೂರ್ತಿ ಪ್ರಕಾಶಕರು, ಮೈಸೂರು

೨೦.ಡಾ.ಚಿದಾನಂದಮೂರ್ತಿ.ಎಂ. ; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೦೨

೨೧.ಡಾ.ಚಿದಾನಂದಮೂರ್ತಿ.ಎಂ. ; ಗ್ರಾಮೀಣ, ಬಾಪ್ಕೋ ಪ್ರಕಾಶನ, ಬೆಂಗಳೂರು,೧೯೭೭

೨೨.ಡಾ.ಚಿದಾನಂದಮೂರ್ತಿ.ಎಂ. ; ವಾಗಾರ್ಥ, ಬಾಪ್ಕೋ ಪ್ರಕಾಶನ, ಬೆಂಗಳೂರು ೧೯೮೧

೨೩.ಡಾ.ಚಿದಾನಂದಮೂರ್ತಿ.ಎಂ. ; ಸಂಶೋಧನಾ ತರಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೦

೨೪.ಜವರೇಗೌಡ.ದೇ ; ಜಾನಪದ ವಾಹಿನಿ, ಡಿ.ವಿ.ಕೆ.ಮೂರ್ತಿ, ಮೈಸೂರು, ೧೯೮೬

೨೫.ಜವರೇಗೌಡ.ದೇ ; ಜಾನಪದ ಅಧ್ಯಯನ, ಚೇತನ ಬುಕ್ ಹೌಸ್, ಮೈಸೂರು ೧೯೯೧

೨೬.ಜವರೇಗೌಡ.ದೇ ; ಜಾನಪದ ಸೌಂದರ್ಯ, ಸಹ್ಯಾದ್ರಿ ಪ್ರಕಾಶನ, ಮೈಸೂರು ೧೯೯೭

೨೭.ಜವರೇಗೌಡ.ದೇ ; ಜಾನಪದ ಗೀತಾಂಜಲಿ, ಸಾಹಿತ್ಯ ಅಕಾಡೆಮಿ, ನವದೆಹಲಿ, ೧೯೭೮

೨೮.ಜಯದೇವ ಹು.ಕಾ. ಮತ್ತು ಬರಗೂರು ರಾಮಚಂದ್ರಪ್ಪ ; ಸಂ. ಜಾನಪದ ವೈಜ್ಞಾನಿಕ ಅಧ್ಯಯನಗಳ ನೆಲೆಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೦

೨೯.ಜವಳಿ ಪ್ರೊ. ಪರಮೇಶ್ವರಪ್ಪ ; ಹಂಪಿ ಪರಂಪರೆ, ಶ್ರೀವಿದ್ಯಾ ವಿಜಯನಗರ, ಹಂಪಿ ಹೆರಿಟೇಜ್ ಟ್ರಸ್ಟ್, ಆನೆಗೊಂದಿ, ಹೊಸಪೇಟೆ, ೧೯೯೬

೩೦.ಜಾನಪದ ಕೈಪಿಡಿ ; ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೭

೩೧.ಜಾನಪದ ದರ್ಶನ ; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೪

೩೨.ತಪಸ್ವಿಕುಮಾರ್.ನಂ ; ಕನ್ನಡ ಜನಪದ ಗೀತೆಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

೩೩.ತಿಮ್ಮರಾಜು ಅಪ್ಪಗೆರೆ ; ಪದದ ಕೇಳವ್ವ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೪

೩೪.ಡಾ.ತಿಪ್ಪೇರುದ್ರಸ್ವಾಮಿ.ಎಂ ; ಕರ್ನಾಟಕ ಸಾಂಸ್ಕೃತಿಕ ಸಮೀಕ್ಷೆ, ಮೈಸೂರು ೧೯೮೫

೩೫.ದಾಸೇಗೌಡ.ಜಿ.ವಿ ; ಮಂಡ್ಯ ಜಿಲ್ಲೆಯ ಜಾತ್ರೆಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೦

೩೬.ದೇವುಡು ; ಕರ್ನಾಟಕ ಸಂಸ್ಕೃತಿ ಶಾರದ ಪ್ರಕಾಶನ, ಗಾಂಧಿನಗರ, ಬೆಂಗಳೂರು, ೧೯೮೮

೩೭.ನಾಗರಾಜಯ್ಯ. ಹಂ.ಪ. ; ಕರ್ನಾಟಕದ ಜಾತ್ರೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೫

೩೮.ನಾಯಕ.ಹಾ.ಮಾ. ; ಜಾನಪದ ಸ್ವರೂಪ, ತ.ವೆಂ.ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೭೧

೩೯.ಡಾ.ನಿರುಪಮ ; ಸಂಶೋಧನಾ ವಿಧಾನಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೨

೪೦.ಡಾ.ಪರಮಶಿವಯ್ಯ.ಜೀ.ಶಂ ; ಶ್ರೀಮಂಟೇಸ್ವಾಮಿ ಕಾವ್ಯ, ಸಾಹಿತ್ಯ ಸದನ, ಮೈಸೂರು, ೧೯೭೩

೪೧.ಡಾ.ಪರಮಶಿವಯ್ಯ.ಜೀ.ಶಂ ; ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೯

೪೨.ಪಂಡಿತ.ಮ.ಮಲ್ಲಪ್ಪ ; ಮೋಹಕ ಮುತ್ತತ್ತಿ, ಜಿಮ್ ಕಾರ್ಬೆಟ್ ಪ್ರಕಾಶನ, ನೆಹರುನಗರ, ಮಂಡ್ಯ, ೧೯೯೨

೪೩.ಪಂಡಿತ.ಮ.ಮಲ್ಲಪ್ಪ ; ಓರುಗಲ್ಲು, ಸೂರೆ ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ೧೯೭೬

೪೪.ಪೈ.ಸಿ.ಸಿ.ಎ ; ಜಾನಪದ ವೈಜ್ಞಾನಿಕ ಕ್ಷೇತ್ರಕಾರ್ಯ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೪೫.ಡಾ.ಬಿಳಿಮಲೆ ಪುರುಷೋತ್ತಮ ; ಜಾನಪದ ಕ್ಷೇತ್ರಕಾರ್ಯ ಆಧುನಿಕ ವಿಧಾನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೩

೪೬.ಡಾ.ಬಿಳಿಮಲೆ ಪುರುಷೋತ್ತಮ ; ಹಂಪಿ ಜಾನಪದ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬

೪೭.ಬೈರಮಂಗಲರಾಮೇಗೌಡ ; (ಸಂ) ಕರ್ಮಯೋಗಿ ಬಿ.ಎಲ್.ಲಕ್ಕೇಗೌಡರ ಅಭಿನಂದನಾ ಗ್ರಂಥ, ಸ್ಫೂರ್ತಿ ಪ್ರಕಾಶನ, ಬೆಂಗಳೂರು, ೧೯೯೭

೪೮.ಪ್ರೊ.ಬೋರಲಿಂಗಯ್ಯ ಹಿ.ಚಿ ; ಮಂಟೇಸ್ವಾಮಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೧೯೯೭

೪೯.ಪ್ರೊ.ಬೋರಲಿಂಗಯ್ಯ ಹಿ.ಚಿ ; ದಾಸಪ್ಪ ಜೋಗಪ್ಪ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೨೦೦೪

೫೦.ಮಂಡ್ಯ ಜಿಲ್ಲೆ ಗೆಝೆಟೀಯರ್ ; ಕರ್ನಾಟಕ ಗೆಝೆಟೀಯರ್ ಇಲಾಖೆ, ಬೆಂಗಳೂರು ೨೦೦೩

೫೧.ಮಹಾಬಲೇಶ್ವರ ರಾವ್ ; ಸಂಶೋಧನಾ ಮಾರ್ಗ, ನವಕರ್ನಾಟಕ, ಪಬ್ಲಿಕೇಷನ್, ಬೆಂಗಳೂರು ೨೦೦೦

೫೨.ರಂಗಸ್ವಾಮಿ.ಸು : ಕರ್ನಾಟಕದ ದೇವಾಲಯಗಳು, ಹಂಸಧ್ವನಿ ಪ್ರಕಾಶನ, ಬೆಂಗಳೂರು ೧೯೯೯

೫೩.ರಂಗಸ್ವಾಮಿ ಬಿ.ಅರ್ಚಕ ; ಹುಟ್ಟಿದ ಹಳ್ಳಿ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

೫೪.ಡಾ.ರಂಗಸ್ವಾಮಿ.ಕೆ.ಸಿ ; ಚನ್ನಪಟ್ಟಣ ತಾಲ್ಲೂಕು ಗ್ರಾಮ ದೇವತೆಗಳ ಸಮಾಜೋ–ಸಾಂಸ್ಕೃತಿಕ ಅಧ್ಯಯನ, ಮಾನಸ ಪ್ರಕಾಶನ, ಬೆಂಗಳೂರು, ೨೦೦೭

೫೫.ಡಾ.ರಾಜೇಂದ್ರ.ಡಿ.ಕೆ. ; ಜನಪದ ಸಮನ್ವಯ, ತಳಗವಾಡಿ ಪ್ರಕಾಶನ, ಮೈಸೂರು, ೧೯೭೮

೫೬.ರಾಮಣ್ಣ ಕ್ಯಾತನಹಳ್ಳಿ : ಕ್ಷೇತ್ರಕಾರ್ಯದ ಹಾದಿಯಲ್ಲಿ ಅಚ್ಚು ಹೊತ್ತಿಗೆ, ಕ್ಯಾತನಹಳ್ಳಿ, ಪಾಂಡವಪುರ ತಾಲ್ಲೂಕು, ೧೯೭೨

೫೭.ಡಾ.ರಘುಪತಿ ಕೆಮ್ತೂರ್ ; ಹೆಸರಿನಲ್ಲೇನಿದೆ? ನ್ಯೂ ಸ್ಟಾರ್ ಪಬ್ಲಿಕೇಷನ್, ಬೆಂಗಳೂರು, ೧೯೮೫

೫೮.ರಾಮಚಂದ್ರರಾವ್.ಎಸ್.ಕೆ ; ಮೂರ್ತಿಶಿಲ್ಪದ ನೆಲೆಹಿನ್ನೆಲೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ೧೯೭೫

೫೯.ರಾಮಚಂದ್ರರಾವ್, ಎಸ್.ಕೆ ; ಭಾರತೀಯ ದೇವಾಲಯಗಳ ಜಾನಪದ ಮೂಲ, ಐ.ಬಿ.ಹೆಚ್.ಪ್ರಕಾಶನ, ಗಾಂಧಿನಗರ, ಬೆಂಗಳೂರು, ೧೯೮೧

೧೦.ಲಕ್ಷ್ಮಣ ತೆಲಗಾವಿ ; ಹರತಿ ಸಿರಿ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ಹಿರಿಯೂರು ತಾಲ್ಲೂಕು, ೧೯೮೯

೧೧. ಪ್ರೊ. ಲಿಂಗಯ್ಯ, ಡಿ ; ಕರ್ನಾಟಕದ ಗ್ರಾಮದೇವತೆಗಳು, ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು, ೧೯೮೪

೧೨.ಪ್ರೊ.ಲಿಂಗಯ್ಯ, ಡಿ ; ಬೋರೆದೇವರು, ದಿನಕರ ಪ್ರಕಾಶನ, ೧೯೭೬

೧೩.ಪ್ರೊ.ಲಿಂಗಯ್ಯ, ಡಿ ; ಕೊಂತಿಪೂಜೆ, ಸಾಹಿತ್ಯ ಭಂಡಾರ, ಬೆಂಗಳೂರು, ೧೯೭೬

೧೪.ಪ್ರೊ.ಲಿಂಗಯ್ಯ ಡಿ ಮತ್ತು ಡಾ.ಕೆ.ಆರ್. ಸಂಧ್ಯಾರೆಡ್ಡಿ ; ಜಾನಪದ ಸ್ವರೂಪ ಮತ್ತು ಸಾಹಿತ್ಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬

೧೫.ವಾಸುದೇವ.ವಿ.ಕಾಣಿಮಾರ್ ; ಧಾರ್ಮಿಕ ಆಚರಣೆಗಳು, ಮಂಜುನಾಥೇಶ್ವರ ಪುಸ್ತಕ ಪ್ರಕಾಶನ, ಉಜಿರೆ

೧೬.ಡಾ.ವಿಶ್ವನಾಥ ; ಸ್ಥಳನಾಮಗಳು, ಸಂವಹನ ಪ್ರಕಾಶನ, ಶಿವರಾಂಪೇಟೆ, ಮೈಸೂರು, ೧೯೯೬

೧೭.ಶಂಕರನಾರಾಯಣರಾವ್.ಸಿ.ಕೆ ; ವೀಣೆ ಸಾರ್ವಭೌಮ ವಾದ್ಯ, ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ, ಬೆಂಗಳೂರು, ೧೯೯೯

೧೮.ಡಾ.ಶೇಷಶಾಸ್ತ್ರೀ.ಆರ್ ; ಕರ್ನಾಟಕದ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೨೦.ಶಿವಕುಮಾರಸ್ವಾಮಿ.ಸಿ.ಎಸ್; ಕರ್ನಾಟಕ ಜಾತ್ರೆಗಳು, ಕನ್ನಡ ವಿಭಾಗ, ಸ್ನಾತಕೋತ್ತರ ಕೇಂದ್ರ, ಬಿ.ಆರ್. ಪ್ರಾಜೆಕ್ಟ್, ಮೈಸೂರು, ೧೯೮೮

೨೧.ಡಾ.ಶಿವಸ್ವಾಮಿ.ಡಿ ; ಕಾವೇರಿ ಸೀಮೆಯ ಗ್ರಾಮ ದೇವತೆಗಳ ಅಧ್ಯಯನ, ಮಾನಸ ಪ್ರಕಾಶನ, ಬೆಂಗಳೂರು, ೨೦೦೭

೨೨.ಸ್ವಾಮಿ.ಬಿಎಸ್. ; ಮಲೆಯಮಾದೇಶ್ವರ ಒಂದು ಅಧ್ಯಯನ, ನವೀನ ಪ್ರಕಾಶನ, ಬೆಂಗಳೂರು, ೧೯೯೩

೨೩.ಸಿದ್ಧಲಿಂಗಯ್ಯ ; ಗ್ರಾಮದೇವತೆಗಳು, ಮೂಲಭಾರತಿ ಪ್ರಕಾಶನ, ಬೆಂಗಳೂರು, ೧೯೯೭

೨೪.Krappe Alexander H ; The Science of Folklore (1965) London

૨૪.Krober.A.L ; Anthropology (1976) New Delhi

૨૪.Maria Leach (Ed) ; Standard Dictionary of Folklore, Mythology and Legend, 1972, New Yoark.

## ಲೇಖನಗಳು– ಪತ್ರಿಕೆಗಳು

೧. ಮುತ್ತುರಾಜು : ಮುತ್ತತ್ತಿ ವೀರಗಲ್ಲುಗಳು –ಒಂದು ಟಿಪ್ಪಣಿ, ಸತ್ಯಶುದ್ಧಕಾಯಕ, ಸಂಪುಟ–೨, ಸಂಚಿಕೆ೫–೬ (೧೯೯೨), ಪುಟ–೭೫–೭೬, ಶ್ರೀಜಗದ್ಗುರು ಮುರುಘ ರಾಜೇಂದ್ರ ವಿದ್ಯಾಪೀಠ (ರಿ) ಶ್ರೀ ಬ್ರಹನ್ಮಠ, ಚಿತ್ರದುರ್ಗ.

೨. ಮುತ್ತುರಾಜು : ಜಾನಪದರು ಕಂಡ ಮುತ್ತತ್ತಿರಾಯ ಹಾಗೂ ಮುತ್ತತ್ತಿ–ಒಂದು ಟಿಪ್ಪಣಿ, ಸತ್ಯಶುದ್ಧಕಾಯಕ, ಸಂಪುಟ–೪, ಸಂಚಿಕೆ೧–೨ (೧೯೯೪), ಪುಟ–೧೨೫–೧೨೮, ಶ್ರೀಜಗದ್ಗುರು ಮುರುಘ ರಾಜೇಂದ್ರ ವಿದ್ಯಾಪೀಠ (ರಿ) ಶ್ರೀ ಬ್ರಹನ್ಮಠ, ಚಿತ್ರದುರ್ಗ.

೩. ಮುತ್ತುರಾಜು : ಮುತ್ತತ್ತಿಯ ಜಾನಪದ ಐತಿಹ್ಯ ಮತ್ತು ಐತಿಹಾಸಿಕತೆ, ಸತ್ಯಶುದ್ಧಕಾಯಕ, ಸಂಪುಟ–೫, ಸಂಚಿಕೆ೧, ಪುಟ–೬೨–೬೭ ಶ್ರೀಜಗದ್ಗುರು ಮುರುಘ ರಾಜೇಂದ್ರ ವಿದ್ಯಾಪೀಠ (ರಿ) ಶ್ರೀ ಬ್ರಹನ್ಮಠ, ಚಿತ್ರದುರ್ಗ(೧೯೯೪)

೪. ಮುತ್ತುರಾಜು : ಮುತ್ತತ್ತಿಜಾತ್ರೆ ಒಂದು ಅಧ್ಯಯನ, ಸತ್ಯಶುದ್ಧಕಾಯಕ, ಸಂಪುಟ–೫, ಸಂಚಿಕೆ೩–೪ (೧೯೯೫), ಪುಟ೫೭–೬೩, ಶ್ರೀಜಗದ್ಗುರು ಮುರುಘ ರಾಜೇಂದ್ರ ವಿದ್ಯಾಪೀಠ (ರಿ) ಶ್ರೀ ಬ್ರಹನ್ಮಠ, ಚಿತ್ರದುರ್ಗ.

೫. ಮುತ್ತುರಾಜು : ಮುತ್ತತ್ತಿಯ ತಾಮ್ರಶಾಸನ, ಇತಿಹಾಸ ದರ್ಶನ, ಸಂಪುಟ–೯, (೧೯೯೪) ಪುಟ–೩೬–೩೯, ಕರ್ನಾಟಕ ಇತಿಹಾಸ ಅಕಾಡೆಮಿ (ರಿ), ಬೆಂಗಳೂರು.

೬. ಮುತ್ತುರಾಜು : ಸೂಳೆಕಲ್ ಮಠದ ಗುಹಾಚಿತ್ರಗಳು, ಇತಿಹಾಸ ದರ್ಶನ, ಸಂಪುಟ–೧೦, (೧೯೯೫) ಪುಟ–೭೧–೭೩, ಕರ್ನಾಟಕ ಇತಿಹಾಸ ಅಕಾಡೆಮಿ (ರಿ), ಬೆಂಗಳೂರು.

೭.ಮುತ್ತುರಾಜು : ಕನಕಪುರ ತಾಲ್ಲೂಕಿನ ಕೆಲವು ಬೃಹತ್ ಶಿಲಾಯುಗದ ಶಿಲಾಗೋರಿಗಳು– ಹೊಸ ಶೋಧನೆ, , ಇತಿಹಾಸ ದರ್ಶನ, ಸಂಪುಟ–೧೧, (೧೯೯೬) ಪುಟ–೩೯–೪೩, ಕರ್ನಾಟಕ ಇತಿಹಾಸ ಅಕಾಡೆಮಿ (ರಿ), ಬೆಂಗಳೂರು.

೮. ಮುತ್ತುರಾಜು : ಹರಿಹರ ಗ್ರಾಮದ ಪ್ರಾಚ್ಯಾವಶೇಷಗಳು– ಒಂದು ಹೊಸ ಶೋಧನೆ, ಇತಿಹಾಸ ದರ್ಶನ, ಸಂಪುಟ–೧೩, (೧೯೯೮) ಪುಟ–೨೧–೨೪, ಕರ್ನಾಟಕ ಇತಿಹಾಸ ಅಕಾಡೆಮಿ (ರಿ), ಬೆಂಗಳೂರು.

